ಸೇವಾಸದನ-೧ [illegible]ಮಾಲಾ

# ಭಾಗವತ

# ಭಾವ

# ಪ್ರಕಾಶ




ಸೇವಾಸದನ

ಚಿದಂಬರಾಶ್ರಮ, ಗುಬ್ಬಿ.

ಶ್ರೀ ಚಿದಂಬರ

ಬೆಲೆ ರೂ. ೧—೮—೦

ಓಂ

ಏಕಂ ಶಾಸ್ತ್ರಂ ದೇವಕೀಪುತ್ರಗೀತಂ
ಏಕೋ ದೇವೋ ದೇವಕೀಪುತ್ರ ಏವ।
ಏಕೋ ಮನ್ತ್ರಸ್ತಸ್ಯ ನಾಮಾನಿ ಯಾನಿ
ಕರ್ಮಾಪ್ಯೇಕಂ ತಸ್ಯ ದೇವಸ್ಯ ಸೇವಾ॥

"ಭಗವದ್ಗೀತೆಗಿಂತ ದೊಡ್ಡ ಶಾಸ್ತ್ರವಿಲ್ಲ. ಆ ದೇವಕೀ ಪುತ್ರ—ವಾಸುದೇವನಿಗಿಂತ ದೊಡ್ಡ ದೇವರಿಲ್ಲ. ಆತನ ನಾಮವೇ ದೊಡ್ಡ ಜಪ. ಆತನ ಸೇವೆಯೇ ಹೆಚ್ಚಿನ ಕರ್ಮವು."



# ಭಾಗವತ ಭಾವ ಪ್ರಕಾಶ

ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ
ದ್ವೈಪಾಯನೋ ವಿರಹಕಾತರ ಆಜುಹಾವ।
ಪುತ್ರೇತಿ ತನ್ಮಯತಯಾ ತರವೋ ಭಿನೇದು—
ಸ್ತಂ ಸರ್ವಭೂತಹೃದಯಂ ಮುನಿಮಾನತೋಸ್ಮಿ ॥

"ಯಾವ ಮಹಾಮುನಿಯು ಜನ್ಮದಿಂದಲೇ ಸಂನ್ಯಾಸಗ್ರಹಣ ಪೂರ್ವಕ ಸಮಸ್ತ ಕರ್ಮಗಳನ್ನೂ ತ್ಯಾಗಮಾಡಿದನೋ ಮತ್ತು ವೈರಾಗ್ಯದ ಭರದಿಂದ ಆಶ್ರಮವನ್ನು ಬಿಟ್ಟು ಹೋಗಲಾರಂಭಿಸಿದಾಗ ತಂದೆಯಾದ ವ್ಯಾಸಮಹರ್ಷಿಯು ಮಗನ ಅಗಲುವಿಕೆಯನ್ನು ತಾಳಲಾರದೆ, 'ಮಗನೇ, ನಿಲ್ಲು!' ಎಂದು ಕೂಗುತ್ತಾ ಹೋಗುತ್ತಿರುವಾಗ ಯಾವ ಮಹಾಮಹಿಮನ ಬ್ರಹ್ಮಾತ್ಮಭಾವನೆಯಿಂದ ತನ್ಮಯವಾಗಿದ್ದ ವೃಕ್ಷಗಳೂ ಸಹ ಆತನಿಗೆ ಉತ್ತರಕೊಡುತ್ತಿದ್ದವೋ ಅಂತಹ ಸರ್ವ ಭೂತ ಹೃದಯದಲ್ಲಿಯೂ ಆತ್ಮರೂಪದಿಂದ ಪ್ರಕಟವಾಗಿದ್ದಂತೆ ತೋರಿದ ಮಹಾ ಮುನಿಯಾದ ಶುಕ ಮಹರ್ಷಿಗೆ ನಮಸ್ಕಾರ."

ಭಾಗವತ ಮಹಾಗ್ರಂಥವು ಶುಕ ಮಹರ್ಷಿಯಿಂದ ಪರೀಕ್ಷಿದ್ರಾಜನಿಗೆ ಹೇಳಲ್ಪಟ್ಟದ್ದು. ಶ್ರೀ ಕೃಷ್ಣ ಪರಮಾತ್ಮನ ಅದ್ಭುತ ಲೀಲಾವರ್ಣನೆಯೇ ಅದರಲ್ಲಿ ಎದ್ದು ಕಾಣುವುದು. ಹೆಜ್ಜೆ ಹೆಜ್ಜೆಗೂ ಪರಮಾತ್ಮನ ಸರ್ವವ್ಯಾಪಿತ್ವ, ಸರ್ವೇಶ್ವರತ್ವ, ಸರ್ವ ನಿಯಂತೃತ್ವಗಳನ್ನು ಗುರ್ತಿಸುವ ಸ್ತೋತ್ರಗಳೇ ಕಾಣಬರುತ್ತವೆ. ರಾಮಾಯಣವು ಸೌಮ್ಯ, ಶಾಂತ ಶೈಲಿಯುಳ್ಳದ್ದಾದರೆ ಭಾಗವತವು ಬಹಳ ಗಂಭೀರವಾದ, ವಿದ್ವತ್ತಾಪೂರ್ಣವಾದ, ಶ್ಲೇಷಾರ್ಥಗರ್ಭಿತವಾದ, ವಿವಿಧ ವೃತ್ತಗಳಿಂದ ಕೂಡಿದ ಜಟಿಲ ಗ್ರಂಥವಾಗಿದೆ. ಇದು ೧೮,೦೦೦ ಶ್ಲೋಕಗಳ ಗ್ರಂಥ.

ಭಗವದ್ಗೀತೆಯನ್ನು ಅರ್ಜುನನಿಗೆ ಉಪದೇಶಮಾಡಿ ಸಂಸಾರದ ದುಃಖ ಕೋಟಲೆಗಳ ಮಧ್ಯದಲ್ಲಿಯೂ ಸಹ ಶಾಂತಿ ಸುಖವನ್ನನುಭವಿಸಬಲ್ಲ ಶಕ್ತಿಯನ್ನು ಸಾಧಕನಿಗೆ ಕೊಟ್ಟು ಕರ್ಮಸಂನ್ಯಾಸವನ್ನು ಸಂಸಾರಿಗೆ ದಯ

ಪಾಲಿಸಿದ ಮಹಾಶಕ್ತಿಯೇ ಭಾಗವತದ ಪ್ರಧಾನಪಾತ್ರ ಸಾಧಕರ ವಿಧವಿಧ ವಾದ ರುಚಿಗಳಿಗೆ ತಕ್ಕಂತೆ ಒಂದೇ ಯೋಗವನ್ನೇ ಸಾಂಖ್ಯ, ಯೋಗ, ಕರ್ಮ, ಭಕ್ತಿ, ಮುಂತಾದ ಬೇರೆ ಬೇರೆ ಹೆಸರುಗಳಿಂದ ಉಪದೇಶಮಾಡಿ ಜ್ಞಾನ ಕರ್ಮ ಗಳನ್ನು ಭಕ್ತಿಯ ಜೊತೆಯಲ್ಲಿ ಹಣೆದು ಸರ್ವಾಂಗ ಸುಂದರವಾದ ಸಾಧನಾ ಕ್ರಮವನ್ನು ಪ್ರಕಾಶಪಡಿಸಿದ **ಭಗವದ್ಗೀತೆಯು ಮಹಾಶಕ್ತಿಯೇ ಭಾಗವತ ರೂಪದಲ್ಲಿ ಪ್ರಕಟವಾಗಿ ಜಗತ್ಕಲ್ಯಾಣ ಮಾಡುತ್ತಿರುವುದೆಂದು ನಮಗೆ ತೋರುತ್ತದೆ.**

ನಮ್ಮ ಜೀವನವು ಜನ್ಮ ಮರಣಗಳ ತೊಟ್ಟಿಲಿನಲ್ಲಿದೆ. ಜನ್ಮದಿಂದ ಮರಣಕ್ಕೆ, ಮರಣದಿಂದ ಜನ್ಮಕ್ಕೆ ಕರ್ಮದೇವತೆಯು ನಮ್ಮನ್ನು ತೂಗು ತ್ತಿದ್ದಾಳೆ. ಇದನ್ನಾರೂ ತಪ್ಪಿಸಿಕೊಳ್ಳಲಾರರು. ಮಾಯಾದೇವಿಯು ತನ್ನ ಮೋಹರೂಪವಾದ ಬೀಸುವ ಕಲ್ಲಿನಲ್ಲಿ ರಾಶಿ ರಾಶಿಯಾಗಿ ಜೀವರುಗಳನ್ನು ಹಾಕಿ ಬೀಸಲಾರಂಭಿಸಿದಾಗ ಭಾರವಾದ ಕೆಳಗಿನ ಮತ್ತು ಮೇಲಿನ ಕಲ್ಲು ಗಳ ಮಧ್ಯೆ ಸಿಕ್ಕಿ ಪುಡಿಪುಡಿಯಾಗದಿರುವ ಧೀರನಾರು ? ಯಾರೂ ಇಲ್ಲ. ಇಂದ್ರಿಯಸುಖರೂಪವಾದ ಮೋಹದ ಬಲೆಯನ್ನು ಬೀಸಿದಾಗ ಎಂತಹ ಜ್ಞಾನಿ, ವಿವೇಕಿ, ಪಂಡಿತನೂ ಸಹ ಕಾಮಿನೀಕಾಂಚನಗಳ (ಸ್ತ್ರೀ — ಧನ ) ಕಡೆಗೆ ಮನಸೋತು ಬಿಡುವನು. ಬಲು ದೊಡ್ಡವರೂ ಸಹ ಸಣ್ಣ ಕಾರಣಗಳಿಂದ ಮೋಹಪಾಶದೊಳಕ್ಕೆ ಸಿಕ್ಕಿಬಿದ್ದು ಕೊನೆಯಲ್ಲಿ ಕೈ ಕೈ ಹಿಸುಕಿ ಕೊಂಡಿರುವ ಉದಾಹರಣೆಗಳು ಬೇಕಾದಷ್ಟಿವೆ. ಕಾರಣವು ಅತ್ಯಲ್ಪ; ಪರಿಣಾಮವು ಬಹು ಭಯಂಕರ. ಇದಾರಿಗೂ ತಿಳಿಯದ ವಿಷಯವಲ್ಲ. ಆದರೆ ಇದನ್ನಾರೂ ಎದುರಿಸಲಾರರು. ನಮ್ಮ ಆರ್ಯ ಸಂಸ್ಕೃತಿಯ ವೈಶಿಷ್ಟ್ಯವೂ ಇಲ್ಲಿಯೇ ಎದ್ದು ಕಾಣುವುದು. ಬೇರೆ ಬೇರೆ ನಾಗರಿಕತೆಗಳಲ್ಲಿ ಪ್ರಪಂಚದ ಹೊರಗಿನ ಸುಖ ಸಂತೋಷಗಳನ್ನು, ಅಧಿಕಾರ ಸಂಪತ್ತುಗಳನ್ನು ಹೊಂದಿಸಿ ಕೊಂಡು ಜೀವನಯಾತ್ರೆಯನ್ನು ನಡೆಸುವ ಸಂವಿಧಾನವು ಕಾಣಬರುತ್ತಿದ್ದರೆ ನಮ್ಮ ಸಂಸ್ಕೃತಿಯಲ್ಲಿ ಜೀವನವು ಅಸಾರವೆಂದೂ, ಅದರೊಳಗಿನ ಸಾರತರ ಸ್ವರೂಪವಾದ ಪರಮಾತ್ಮ ವಸ್ತುವನ್ನು ಪಡೆಯುವುದೇ ಮನುಷ್ಯ ಜನ್ಮದ ಸಾರ್ಥಕತೆಯೆಂದೂ ಘಂಟಾಘೋಷವಾಗಿ ಹೇಳುತ್ತಾ ಮನುಷ್ಯನ

ಅಂತಃಕರಣವನ್ನು ವ್ಯಾಮೋಹದಿಂದ ಬೇರೆ ಮಾಡುವ ವಿಚಿತ್ರ ಸಂವಿಧಾನವಿದೆ.

**" ನೀನು ಆತ್ಮನು; ದೇಹವಲ್ಲ. ಜನ್ಮ ಮರಣಗಳೂ, ಸುಖ ದುಃಖಗಳೂ ನಿನಗೆ ತಗಲಲಾರವು. ಹುಟ್ಟುವುದೂ, ಸಾಯುವುದೂ, ದೇಹಕ್ಕೆ; ಸುಖದುಃಖಗಳು ಮನಸ್ಸಿಗೆ. ನೀನು ಮಾತ್ರ ನಿರ್ಲಿಪ್ತನು. ಸಹಜಾನಂದಮೂರ್ತಿಯು."** ಎಂದು ತಿಳಿಸುವುದೇ ಅಧ್ಯಾತ್ಮ ಶಾಸ್ತ್ರದ ಉದ್ದೇಶ್ಯ. ನೀನು ಸುಖಸ್ವರೂಪನಾದರೆ ಗಳಿಗೆ ಗಳಿಗೆಗೂ ಎದುರಾಗುತ್ತಿರುವ ದುಃಖನಾಶನ್ನು ಮುಟ್ಟುವುದು? ಎಂಬ ಮುಂತಾದ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಬಂಡಿಗಟ್ಟಲೆ ವೇದಾಂತ ಗ್ರಂಥಗಳೂ, ಭಕ್ತಿ ಗ್ರಂಥಗಳೂ, ಉಪಾಸನಾ ಮಾರ್ಗಗಳೂ ಸಿದ್ಧವಾಗಿವೆ. ಸಣ್ಣ ಬಾಲಕನಿಗೆ ದೊಡ್ಡ ದೊಡ್ಡ ವಿಚಾರಗಳನ್ನು ತಿಳಿಸಬೇಕಾದಾಗ ಆತನಿಗೆ ಅರ್ಥವಾಗುವ ರೀತಿಯಲ್ಲಿ ಕಥೆ ಗಳನ್ನು ಹೇಳುವಂತೆ ತತ್ವ ಶಾಸ್ತ್ರಗಳನ್ನು ಜನಸಾಮಾನ್ಯಕ್ಕೆ ಮನದಟ್ಟು ಮಾಡಿಕೊಡುವ ಸುಲಭೋಪಾಯವೇ ನಮ್ಮ ಪುರಾಣಗಳ ಒಳಗುಟ್ಟು. ವೇದದ ಅರ್ಥವು ಎಲ್ಲರಿಗೂ ತಿಳಿಯದು. ಅದರ ಮಹಾ ತತ್ವಗಳನ್ನು ಜನಗಳ ಮೇಲಿನ ಕರುಣೆಯಿಂದಲೇ ವ್ಯಾಸಮಹರ್ಷಿಗಳು ಭಾರತದ ನೆಪದಿಂದ ಕಥೆಯ ರೂಪವಾಗಿ ತಿಳಿಸುತ್ತಿದ್ದಾರೆ— ಎಂಬ ಮಾತು ಮಹಾ ಭಾರತದ ಆದಿಪರ್ವದಿಂದ ಸ್ಪಷ್ಟವಾಗಿದೆ. ಇತರ ಚರಿತ್ರೆಗಳಂತೆ ನಮ್ಮ ಚರಿತ್ರೆಗಳಲ್ಲ. ಕ್ರೈಸ್ತನಿಂದ ಆರಂಭವಾಗುವುದು ಕ್ರೈಸ್ತಮತ. ಮಹಮ್ಮದ ನಿಂದ ಆರಂಭವಾಗುವುದು ಮುಸಲ್ಮಾನ ಮತ. ಚರಿತ್ರೆಗಳೂ ಹಾಗೆಯೇ. ನಮ್ಮವರು ಚರಿತ್ರೆಯ ಕಾಲಕ್ಕೂ, ಸನ್ನಿವೇಶಗಳಿಗೂ ಹೆಚ್ಚು ಲಕ್ಷ್ಯಕೊಡು ವುದಿಲ್ಲ. ಕಾಲವು ಅನಂತ. ಬ್ರಹ್ಮಾಂಡಕ್ಕೆ ಮಿತಿಯಿದೆ. ಬ್ರಹ್ಮಾಂಡದ ಯಜಮಾನನಿಗೂ ಎಲ್ಲೆಯಿದೆ. **ಅನೇಕ ಕೋಟಿ ಬ್ರಹ್ಮಾಂಡಗಳೂ ಯಾವ ಮಹಾತೇಜಸ್ಸಿನ ಆಧಾರದಿಂದ ಹುಟ್ಟಿ ನೀರಿನೊಳಗೆ ಗುಳ್ಳೆ ಗಳಂತೆ ಹುಟ್ಟಿ ಅಳಿಯುವುವೋ ಆ ಕಾಲಕಾಲನಾದ ಪರಬ್ರಹ್ಮನ ಅನಂತ ಸಂಕಲ್ಪದಲ್ಲಿ ಚರಿತ್ರೆಗೂ ಚರಿತ್ರಾಧಾರವಾದ ಪಾತ್ರಗಳಿಗೂ ಹೆಚ್ಚಿನ ಸ್ಥಾನವೇ ಇಲ್ಲ.** ಆ ಅಖಂಡ ಪರಿಪೂರ್ಣ ನಿತ್ಯಾನಂದಮೂರ್ತಿಯ

ಆಧಾರದಿಂದಲೇ ನಮ್ಮ ಜೀವನ ಜ್ಯೋತಿಯು ಬೆಳಗಬೇಕೆಂದೂ, ಅದಲ್ಲದೆ ಬೇರೆ ಗ ತಿ ಯೇ ಇಲ್ಲವೆಂದೂ ತಿಳಿಸುವುದಕ್ಕಾಗಿಯೇ ವಿವಿಧವಾದ ಪಾತ್ರ ಗಳನ್ನೂ, ಸಂದರ್ಭಗಳನ್ನೂ ಜೋಡಿಸಿ ಅವುಗಳ ಆಧಾರದಿಂದ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಸಾಧಕನಲ್ಲಿ ಹುಟ್ಟಿಸುವುದೇ ಪುರಾಣಗಳ ಒಳ ಗುಟ್ಟೆಂದ ಮೇಲೆ ನಾವು ಪುರಾಣಗಳೊಳಹೊಕ್ಕು ನೋಡುವ ನೋಟವೂ, ದೃಷ್ಟಿ ಕೋನವೂ ಬದಲಾಗಬೇಕಲ್ಲವೆ ?

ಭಗವದ್ಗೀತೆಯಲ್ಲಿನ ಸಂವಿಧಾನವೂ ಹಾಗೆಯೇ. ಅರ್ಜುನನು ನೆಪ ಮಾತ್ರ. ಭಗವಂತನು ಹೇಳಿದುದು ಆತನೊಬ್ಬನಿಗೇ ಅಲ್ಲ. ಅದರಲ್ಲಿನ ಅಮೋಘ ತತ್ವಗಳಿಗೆ ಎಲ್ಲರೂ ಅಧಿಕಾರಿಗಳೇ. ಈ ಜಗನ್ನಾಟಕ ರಂಗದಲ್ಲಿನ ಹೊರಗಿನ ಪಾತ್ರಗಳೆಲ್ಲಾ ಸುಳ್ಳು. ಅಶಾಶ್ವತ. ಮಣಿಗಳಲ್ಲಿರುವ ದಾರದಂತೆ ಪಶು, ಪಕ್ಷಿ, ಮೃಗ, ಕೀಟ, ಮನುಷ್ಯ ರೂಪವಾದ ಜಗತ್ತಿನಲ್ಲಿ ಹೊರಗಿನ ಪಾಂಚಭೌತಿಕ ದೇಹಗಳೊಳಗೆಲ್ಲಾ ಏಕ ರೂಪವಾಗಿ ನಿಂತು ನಲಿಯುತ್ತಿರು ವುದೇ ಜಗದಾತ್ಮ—ಎಂಬ ಅರಿವಾದರೆ ದುಃಖ, ಸಂಕಟಗಳು ಇರುವುದಿಲ್ಲ, ತನ್ನದು ಪರರದು ಎಂಬ ಭೇದವಿರುವುದಿಲ್ಲ. ನಾಟಕದಲ್ಲಿನ ನಟನಂತೆ ಪತಿಯಾಗಿ, ಪತ್ನಿಯಾಗಿ, ಆಳಾಗಿ, ಅರಸನಾಗಿ, ಬಲ್ಲಿದನಾಗಿ, ಭಿಕಾರಿಯಾಗಿ ತೋರುವ ವಿವಿಧ ಪ್ರಾರಬ್ಧ ಕರ್ಮಗಳನ್ನನುಸರಿಸಿದ ವೇಷಗಳನ್ನು ಹೊಂದಿದ್ದರೂ ಆಯಾ ಸಂದರ್ಭಗಳಿಗೆ ತಕ್ಕಂತೆ ಕರ್ತವ್ಯ ಕರ್ಮವನ್ನು ನೀತಿಯ ನಿಯಮಕ್ಕೆ ಚಾಚೂ ತಪ್ಪದಂತೆ ನಡೆಸುತ್ತಿದ್ದರೂ ತನ್ನ ಅಂತಃಕರಣದಲ್ಲಿ ಒಳಗೊಳಗೇ **"ನಾನು ಇದಾವುದೂ ಅಲ್ಲ. ಇದೆಲ್ಲವನ್ನೂ ಮೀರಿದ ಸರ್ವ ಸ್ವತಂತ್ರನು."** ಎಂಬ ಭಾವವು ಮೈಗೂಡುವುದು. ಹಾಗೆಯೇ ಇತರ ದೇಹಗಳಲ್ಲಿ ನಟಿಸುತ್ತಿರುವ ಬೇರೆ ಬೇರೆ ಜೀವರುಗಳೊಡನೆ ವ್ಯವಹಾರ ಮಾಡುವಾಗ ತಾನು ಹೇಗೆ ದೇಹವಲ್ಲವೋ ಹಾಗೆಯೇ ಇವರೂ ದೇಹಗಳಲ್ಲ ವೆಂದೂ ನಾವೆಲ್ಲರೂ ಅಪಾರ ಜಲರಾಶಿಯಾದ ಸಮುದ್ರದೊಳಗಿನ ಜಲ ಬಿಂದುಗಳಂತೆ— ಪ್ರಚಂಡ ತೇಜೋರಾಶಿಯಾದ ಅಗ್ನಿಯಸಣ್ಣ ಸಣ್ಣ ಕಿಡಿ ಗಳಂತೆ ಒಂದೇ ರೂಪ ಗುಣಗಳುಳ್ಳವರೆಂದೂ, ವ್ಯವಹಾರದ ತೋರಿಕೆಗಳೆಲ್ಲಾ ಅನಿತ್ಯವಾದವುಗಳೆಂದೂ, ಎ ಲ್ಲ ರೂ ಜಗನ್ನಾಟಕ ಸೂತ್ರಧಾರಿಯಾದ

ಸರ್ವೇಶ್ವರನ ಸೂತ್ರದಂತೆ ಕುಣಿಯುವ ಬೊಂಬೆಗಳಿಂದೂ ಅನುಭವಕ್ಕೆ ಬರುವುದು. **ಕಳ್ಳನೂ, ಕಳ್ಳನನ್ನು ಹಿಡಿಯುವ ಕರ್ಮಚಾರಿಯೂ, ವಿಚಾರಣೆಮಾಡಿ ಶಿಕ್ಷೆ ವಿಧಿಸುವ ನ್ಯಾಯಾಧೀಶನೂ ಒಂದೇ ನ್ಯಾಯ ಶಾಸನದ ವಿವಿಧ ಅಂಗಗಳೆಂದು ಮನವರಿಕೆಯಾದರೆ ನ್ಯಾಯಾಧೀಶನು ತನ್ನ ಕರ್ತವ್ಯ ಕರ್ಮರೂಪವಾದ ಶಿಕ್ಷೆಯನ್ನು ವಿಧಿಸುವಾಗ ಇಚ್ಛಾ ದ್ವೇಷಗಳಾಗಲೀ, ವೈಯಕ್ತಿಕ ಅಹಂಕಾರವಾಗಲೀ ತೋರದು. ಕರ್ಮಚಾರಿಯ ಸ್ಥಿತಿಯೂ ಹಾಗೆಯೇ. ಕಳ್ಳನೂ ಸಹ ತನ್ನ ತಪ್ಪಿನ ಸ್ವರೂಪವನ್ನರಿತು ಅವಿವೇಕದ ಪ್ರತಿಫಲವಾದ ಶಿಕ್ಷೆಯನ್ನು ಸಂತೋಷ ದಿಂದಲೇ ಪರಿಗ್ರಹಿಸಿ ತನ್ನ ಜೀವನವನ್ನು ಸುಧಾರಿಸಿ ಕೊಂಡು ಉತ್ತಮ ನಾಗರಿಕನಾಗುವ ಸ್ಥಿತಿಯು ಬರಬಹುದು. ಕರ್ಮಶಾಸ್ತ್ರದಲ್ಲಿ ಬಾಹ್ಯವು ಪ್ರಧಾನವಲ್ಲ. ಭಾವವು ಪ್ರಧಾನ. ಆ ಭಾವದಿಂದ ಪರಿ ಪುಷ್ಟವಾದ ನಡತೆಯ ಪರಿಣಾಮವಾದ ಶಾಂತಿಮಯ ಜೀವನವೇ ಭಗವದ್ಗೀತೆಯ ಆದರ್ಶ.**

ಗೀತೆಯನ್ನು ಕೇಳಿದವನು ಕ್ಷತ್ರಿಯರಾಜ. ಉಪದೇಶಮಾಡಿದವನು ಜ್ಞಾನಿ, ಆತ್ಮಾನುಭವಿ, ಭಗವಂತ. ಆತನು ಯೋಗೇಶ್ವರನೂ ಅಹುದು. ಯೋಗಾಚಾರ್ಯನೂ ಅಹುದು. ಕ್ಷತ್ರಿಯನಲ್ಲಿ ರಜೋಗುಣವು ಅಧಿಕವಾಗಿದೆ. ಕಾಮ, ಕ್ರೋಧ, ಲೋಭ, ಮದ ಮುಂತಾದ ರಜೋಗುಣದ ವಿಕಾರ ಗಳೊಡನೆ ನಿಮಿಷ ನಿಮಿಷಕ್ಕೂ ವ್ಯವಹಾರಮಾಡುವ ಸನ್ನಿವೇಶವಿದೆ. ನಮ್ಮ ವರ್ಣಾಶ್ರಮ ನಿಯಮದಂತೆ ಬ್ರಾಹ್ಮಣನು ಈ ವಿಕಾರಗಳಾವುವೂ ತನ್ನಲ್ಲಿ ಪ್ರವೇಶಿಸದಂತೆ ಅವುಗಳನ್ನು ತುಳಿದು ಸುಟ್ಟುಬಿಡಬೇಕು. ಕ್ಷತ್ರಿಯನು ಅವುಗಳನ್ನು ತುಳಿಯುವುದಿಲ್ಲ. ಅವುಗಳಿಗೆ ಹೆದರಿ ದೂರ ಸರಿಯುವುದಿಲ್ಲ. ಅವುಗಳನ್ನು ತನ್ನ ಸಮೀಪಕ್ಕೆ ಬರುವಂತೆ ಆಹ್ವಾನಿಸುತ್ತಾನೆ. ತನ್ನಲ್ಲಿ ಬಂದ ಈ ಕಾಮ ಕ್ರೋಧಾದಿ ಅತಿಥಿಗಳನ್ನು ಅವರಿಗೆ ಉಚಿತವಾದ ರೀತಿಯಲ್ಲಿ ಸತ್ಕರಿಸಿ, ಕಾಮವನ್ನು ಎಲ್ಲಿಡಬೇಕು, ಕ್ರೋಧವನ್ನು ಹೇಗೆ ಉಪಯೋಗಿಸ ಬೇಕು, ಲೋಭವನ್ನು ಎಲ್ಲಿ ಮಾಡಬೇಕು, ಮದಕ್ಕೆ ಯಾವ ಸ್ಥಾನ ಕೊಡ ಬೇಕು, ಎಂಬುದನ್ನು ವಿಚಾರಿಸಿ ತಿಳಿದು ತಕ್ಕ ಸಮಯದಲ್ಲಿ ಸರಿಯಾದ

ರೀತಿಯಲ್ಲಿ ಅವುಗಳನ್ನು ಲೋಕೋಪಕಾರಕ್ಕಾಗಿಯೇ ವಿನಿಯೋಗಿಸುತ್ತಾನೆ. ಇವುಗಳ ಲೇಪವು ತನಗೆ ಆಗದಂತೆ ಹೆಜ್ಜೆ ಹೆಜ್ಜೆಗೂ ಎಚ್ಚರವಾಗಿರುತ್ತಾನೆ. ತನ್ನ ಎಚ್ಚರವನ್ನು ಮೀರಿ ಬಂದ ಅನುಭವಗಳ ಪರಿಣಾಮವನ್ನು ಸಂತೋಷ ದಿಂದ ಅನುಭವಿಸುತ್ತಾನೆ ಬದುಕುವಾಗಲೂ ಕ್ಷತ್ರಿಯನೇ. ಸಾಯುವಾಗಲೂ ಕ್ಷತ್ರಿಯನೇ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಕ್ರಮವಾಗಿ ಪರಮಾತ್ಮನ ಮುಖ, ಬಾಹು, ತೊಡೆ, ಕಾಲುಗಳಿಂದ ಹುಟ್ಟಿದವರೆಂದು ಪುರುಷಸೂಕ್ತ ದಲ್ಲಿ ಹೇಳಿದೆ. ಒಂದೇ ದೇಹದಲ್ಲಿ, ಯಾವ ಭಾಗದಲ್ಲಿ ಹುಟ್ಟಿದರೂ ಒಂದೇ ರಕ್ತ ಚಲನೆಯಲ್ಲವೆ ? ದೇಹದ ಯಾವ ಭಾಗಕ್ಕೆ ತೊಂದರೆಯಾದರೂ ಆ ಸಂಕಟವು **ಬರುವುದು** ನಮಗೇ ಅಲ್ಲವೆ ? ವ್ಯವಹಾರಕ್ಕಾಗಿ ಬೇರೆ ಬೇರೆ ಕರ್ಮಗಳಿಗನುಸಾರವಾಗಿ ಅವುಗಳಿಗೆ ಸಂಬಂಧಪಟ್ಟ ಗುಣಗಳು ಯಾರಲ್ಲಿ ವೃದ್ಧಿಯಾಗುವುವೋ ಅವುಗಳನ್ನನುಸರಿಸಿದ ವರ್ಣವು ಸಿದ್ಧವಾಗುತ್ತದೆ. ಭಗವಂತನು ಭಗವದ್ಗೀತೆಯ ನಾಲ್ಕನೇ ಅಧ್ಯಾಯದಲ್ಲಿ ("ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ") "ಗುಣ, ಕರ್ಮಗಳ ವಿಭಾಗದಿಂದ ನಾಲ್ಕು ವರ್ಣಗಳು ನನ್ನಿಂದಲೇ ಸೃಷ್ಟಿಯಾದುವು." ಎಂದು ಹೇಳಿ ೧೮ ನೇ ಅಧ್ಯಾಯದಲ್ಲಿ ಕ್ರಮವಾಗಿ ಆ ನಾಲ್ಕು ವರ್ಣಗಳ ಗುಣಗಳನ್ನು ವರ್ಣಿಸಿದ್ದಾನೆ, ಮತ್ತು **ತನ್ನ ತನ್ನ** (ಸ್ವಭಾವ ಸಿದ್ಧವಾದ) **ಕರ್ಮದಿಂದ,** ಈ ಜಗತ್ತನ್ನು ಹುಟ್ಟಿಸಿ ಅದರೊಳಗೆ ತುಂಬಿ ಕೊಂಡಿರುವ **ಸರ್ವೇಶ್ವರನನ್ನೇ ಪೂಜಿಸ ಬೇಕು;** ಎಂದು ಹೇಳಿದ್ದಾನೆ.

ವರ್ಣಾಶ್ರಮ ಧರ್ಮವು ಶಾಶ್ವತ. ಅಮರ. ಅದು ದೇಶ ಕಾಲ ಸನ್ನಿವೇಶಗಳಿಂದ ಬದಲಾಗುವುದಿಲ್ಲ. **ಹಿಂದಿನಂತೆ ಅದನ್ನು ಅದೇ ಕ್ರಮ ದಲ್ಲಿ ನಿಲ್ಲಿಸಲಾಗದಿದ್ದರೂ ಅದರ ವೈಶಿಷ್ಟ್ಯವು ಜಗತ್ತಿನಲ್ಲಿ ನಿಲ್ಲುವಂತಾಗ ಬೇಕು.** ಸಮಾಜವು ಗಳಿಗೆ ಗಳಿಗೆಗೂ **ಬಣ್ಣ** ಬದಲಾಯಿಸುತ್ತಿರುವುದರಿಂದ ಇಂತಹ ಜಾತಿಯಲ್ಲಿಯೇ ಇಂತಹ ವರ್ಣದವರೇ ಹುಟ್ಟಬೇಕೆಂಬ– ಅವರೇ ಉತ್ತಮರೆಂಬ — ಹಠದಿಂದ ಪ್ರಯೋಜನವಿಲ್ಲ. ಅದು ಕಾರ್ಯಕಾರಿಯೂ

ಆಗುವುದಿಲ್ಲ. ವಿವಿಧ ಸಂಪ್ರದಾಯಗಳುಳ್ಳ ಈ ಭರತ ಖಂಡದಲ್ಲಿ ಪ್ರತಿಯೊಬ್ಬನೂ ತನಗೆ ರುಚಿಯಾಗಿ ತೋರಿದ, ಮತ, ಜಾತಿ, ನಿಯಮಗಳನ್ನು ಅನುಸರಿಸಲು ಅವಕಾಶ ಕೊಟ್ಟು ಆತನ ಅಭಿಪ್ರಾಯದ ವಿಷಯದಲ್ಲಿ ನಾವು ನಮ್ಮದೇ ಹೆಚ್ಚೆಂಬ ಹಠ ಹಿಡಿಯದೆ ಸಹಾನುಭೂತಿಯನ್ನೂ, ಪ್ರೇಮವನ್ನೂ ತೋರಿಸುವ ಧಾರಾಳಬುದ್ಧಿಯನ್ನು ಹೊಂದಬೇಕು.

ಜಾತಿ, ಮತಗಳ ದ್ವೇಷದ ಫಲವನ್ನು ನಾವು ಬೇಕಾದಷ್ಟು ಅನುಭವಿಸಿದ್ದೇವೆ. ಅನುಭವಿಸುತ್ತಲೂ ಇದ್ದೇವೆ. ಹಿಂದೂ — ಮುಸಲ್ಮಾನ್, ಬ್ರಾಹ್ಮಣ — ಬ್ರಾಹ್ಮಣೇತರ, ಲಿಂಗಾಯಿತ — ಒಕ್ಕಲಿಗ, ಶೈವ — ವೈಷ್ಣವ ಮುಂತಾದ ಒಳ ಜಗಳಗಳು ನಮ್ಮನ್ನು ಕಾಡಿಸುತ್ತಿವೆ.

ಯಾರೋ ಮಾಡಿದ ಯಾವುದೋ ತಪ್ಪೆಂಬ ಭಾವದ ಮೇಲೆ ಅವರ ಸಂತಾನವನ್ನೇ ದ್ವೇಷಿಸುವುದು–ಅದನ್ನು ತುಳಿಯಲೆತ್ನಿಸುವುದು ಅವಿವೇಕ. ಒಂದೇ ಜಾತಿಯಲ್ಲಿ ಹುಟ್ಟಿ ಒಂದೇ ಸಮಾಜ ಸೇವೆಗೆ ಕಂಕಣ ತೊಟ್ಟಿರುವವರೂ ಸಹ ತಮ್ಮದು ಮುಂದುವರಿಯಬೇಕೆಂಬ ಭಾವದಿಂದ ಮತ್ತೊಂದು ವ್ಯಕ್ತಿಯನ್ನು, ಸಂಸ್ಥೆಯನ್ನು ಹಳಿದು ತುಳಿಯಲೆತ್ನಿಸುವುದು ಹೊಸದಲ್ಲ. ಒಂದೇ ಸಂಸ್ಥೆಯಲ್ಲಿಯೇ ಇದ್ದುಕೊಂಡು ಅದರೊಳಗೇ ಎರಡು ಮೂರು ಗುಂಪುಗಳಾಗಿ ಸ್ವಾರ್ಥಸಾಧನೆಯ ದುರಭಿಮಾನದಿಂದ ಮೂಲ ತತ್ವವನ್ನೇ ಮರೆತಿರುವುದು ನಮಗೆ ಕಾಣಬರುತ್ತಿಲ್ಲವೇ ?

ಜಗತ್ತಿನಲ್ಲಿ ದೇವರೊಬ್ಬನೇ. ಅವನನ್ನೇ ವಿವಿಧವಾಗಿ ಪೂಜಿಸುವರು. –ಎಂಬ ಅರಿವಾದರೆ ನನ್ನ ದೇವನೇ ಬೇರೆ ಬೇರೆ ನಾಮ ರೂಪಗಳಿಂದ ಪ್ರಕಟನಾಗಿದ್ದಾನೆ – ಎಂಬ ಸಮಾಧಾನವು ದ್ವೇಷಾಸೂಯೆಗಳಿಗೆ ಅವಕಾಶ ಕೊಡುವುದಿಲ್ಲ.

ಹಾಗೆಯೇ ನನ್ನ ಧರ್ಮವನ್ನೇ ಇತರರು ಬೇರೆಹೆಸರಿನಿಂದ ಕರೆಯುತ್ತಿದ್ದಾರೆ– ಎಂಬ ಅರಿವು ಧರ್ಮದ ದುರಭಿಮಾನವನ್ನು ದೂರಮಾಡುವುದು.

ಈ ವಿಶಾಲ ಭಾವನೆಗೆ ಬೇಕಾದ ತಳಹದಿಯ ಕಲ್ಲುಗಳೆಲ್ಲಾ ಮನಸ್ಸಿನ ಖನಿಜ ದಲ್ಲಿವೆ. ಅವುಗಳನ್ನೆಲ್ಲಾ ಒಂದೊಂದನ್ನಾಗಿ ತೆಗೆದು ಸಾಧನೆಯ ತಳಹದಿ ಯನ್ನು ಕಟ್ಟಬೇಕು.

ನಿಜವಾಗಿ ವಿಚಾರಮಾಡಿದರೆ ಪ್ರತಿಯೊಬ್ಬನಲ್ಲಿಯೂ ನಾಲ್ಕು ವರ್ಣ ಗಳ ಗುಣಗಳೂ ಕಾಣಬರುವುವು. ನಮ್ಮಲ್ಲಿ ನಾವೇ ಹುಡುಕಿಕೊಂಡು, ಯಾವ ಗುಣಗಳನ್ನು ಹೇಗೆ ತುಳಿದು ಎಂತೆಂತಹ ಗುಣಗಳನ್ನು ವೃದ್ಧಿಮಾಡಿ ಕೊಂಡು ಉತ್ತಮ ಸ್ಥಿತಿಯನ್ನು ಪಡೆಯ ಬೇಕೆಂಬುದನ್ನು ನಿರ್ಣಯಿಸುವ, ನಮ್ಮ ಪ್ರಗತಿಯನ್ನು ಸಿದ್ಧಮಾಡುವ ಅಧಿಕಾರವು ನಮ್ಮದೇ. ಇತರರದಲ್ಲ. ಆದುದರಿಂದ ಪ್ರತಿಯೊಬ್ಬನೂ ತನ್ನ ವರ್ಣವನ್ನು ಉತ್ತಮಪಡಿಸಿಕೊಂಡು ಕೊನೆಯ ಹಂತವನ್ನೇರಲು ಯತ್ನಿಸಬೇಕು. ಆದುದರಿಂದ ಜಗತ್ತಿನ ಜನಾಂಗ ವೆಲ್ಲಾ ವರ್ಣಾಶ್ರಮಧರ್ಮದ ಎಲ್ಲೆಯೊಳಗೆ ಅಡಕವಾಗುವುದೆಂಬುದೇ ನಮ್ಮ ಅಭಿಪ್ರಾಯ.

ಹಿಂದಿನ ಯುಗವು ಕಳೆದು ಹೋಯಿತು. ಈ ಸ್ವಾತಂತ್ರ್ಯ ಯುಗ ದಲ್ಲಿ ಪ್ರತಿಯೊಬ್ಬರ ಪ್ರಗತಿಗೂ ಸಮಾನಾವಕಾಶವಿರಬೇಕು. ಸಮಾಜದ ಹೊರಗೆ ಸಮಾನ ವ್ಯವಹಾರವನ್ನು ಸಿದ್ಧಮಾಡುವುದಕ್ಕೆ ಮುಂಚೆ ಮನಸ್ಸಿನ ಪ್ರಗತಿಯನ್ನು ಲಕ್ಷಿಸಿ ಸಮಾನ ಮನೋಧರ್ಮವನ್ನು ಪ್ರಗತಿಪರ ಜೀವನವನ್ನು ಸಿದ್ಧಮಾಡಿಕೊಳ್ಳಬೇಕು.

ನಾವೆಲ್ಲರೂ ಒಂದೇ ಪರಮಾತ್ಮನ ವಿವಿಧ ಭಾಗಗಳು. ಪ್ರತಿಯೊಬ್ಬನೂ ಒಂದೊಂದು ಪ್ರಪಂಚ. ತನ್ನ ತನ್ನ ಸಂಸ್ಕಾರ ಕರ್ಮಗಳಿಗೆ ತಕ್ಕಂತೆ ತನ್ನದೇ ಆದ ಒಂದು ಪ್ರಪಂಚವನ್ನು ಮನಸ್ಸಿನಲ್ಲಿ ಸಿದ್ಧಮಾಡಿ ಕೊಳ್ಳುತ್ತಾನೆ. ತನ್ನ ಸಮಸ್ಯೆಗಳೇ ಎಲ್ಲಕ್ಕೂ ಹೆಚ್ಚಿನವೆಂದು ತಿಳಿಯುತ್ತಾನೆ. ಅವುಗಳನ್ನು ಬಿಡಿಸುವ ಭರದಲ್ಲಿ ಇತರರ ಮನೋಧರ್ಮವು ಅಡ್ಡಿಯಾದರೆ ಅದನ್ನು ತುಳಿಯಲೆತ್ನಿಸುತ್ತಾನೆ. ಎಲ್ಲಾ ವ್ಯಾಜ್ಯ ರಗಳೆಗಳೂ ಅಲ್ಲಿಯೇ ಸಿದ್ಧವಾಗ ಬೇಕಾದರೆ. ತನ್ನ ಸಮಸ್ಯೆಯ ಸಮಾಧಾನವು ತನಗೆ ಹೇಗೆ ಪ್ರಿಯವೋ

ಇತರರಿಗೂ ಅವರದು ಹಾಗೆಯೇ ಎಂಬ ಅರಿವಾದರೆ ಸಾಕು. ತಾನೂ ಸುಖಿಯಾಗಿ ಇತರರನ್ನೂ ಸುಖಿಯಾಗಿರಿಸುವನು. ಇತರರ ಶಾಂತಿಯಲ್ಲಿ ತಾನೂ ಭಾಗಿಯಾಗುವನು. ತನ್ನ ಶಾಂತಿಯಲ್ಲಿ ಇತರರನ್ನೂ ಆಹ್ವಾನಿಸು ವನು. ಎಲ್ಲವೂ ಭಾವನೆಯನ್ನೇ ಅವಲಂಬಿಸಿದೆ. ಕೈಲಾಸ ವೈಕುಂಠಗಳನ್ನು ಕಂಡವರಿಲ್ಲ. ಆದರೆ ಅವುಗಳ ವ್ಯಾಜ್ಯವನ್ನು ಮಾತ್ರ ಬಿಟ್ಟವರಿಲ್ಲ. ಅತ್ಯಂತ ಸುಧಾರಿಸಿದ ಅಂತಃಕರಣದವರೂ ಸಹಾ ತಮ್ಮ ಸಂಪ್ರದಾಯವೆಂದರೆ ಬಾಗುವರು ನಮ್ಮ ಈ ದುರಭಿಮಾನವು ದೂರವಾಗಬೇಕು. ಸಕ್ಕರೆಯಲ್ಲಿ ಮಾಡಿದ ಬೊಂಬೆಯಲ್ಲಿ ಈಶ್ವರನಾಗಲಿ, ವಿಷ್ಣುವಾಗಲಿ, ಗಣಪತಿಯಾಗಲಿ, ಕೋಳಿ ಕೊಕ್ಕರೆಗಳಾಗಲಿ ಯಾವುದನ್ನು ಮುರಿದು ಬಾಯಿಯಲ್ಲಿ ಹಾಕಿ ಕೊಂಡರೂ ರುಚಿಯು ವ್ಯತ್ಯಾಸವಾಗುವುದಿಲ್ಲ.

ಸಾಧನಾ ಪ್ರಪಂಚದಲ್ಲಿ ಕ್ಷತ್ರಿಯನಿಗೆ ಬಹು ಮುಖ್ಯ ಸ್ಥಾನವಿದೆ. ಇಂದ್ರಿಯ ಜಯಕ್ಕೂ ದೇಹದ ಮೇಲಿನ ಅಭಿಮಾನದ ಜಯಕ್ಕೂ ನಾವು ಕ್ಷತ್ರಿಯರಾಗಲೇ ಬೇಕು. ನಮ್ಮೊಳಗಿನ ದುಷ್ಟವಾಸನೆಗಳೊಡನೆ ಪ್ರತಿ ದಿನವೂ ನಾವೇ ಹೋರಾಡುತ್ತಿರಬೇಕು. ಈ ದೇಹವು ಕುರುಕ್ಷೇತ್ರ. ಅಂದರೆ ಕರ್ಮ ಕ್ಷೇತ್ರ. ಇದು ಧರ್ಮ ಕ್ಷೇತ್ರವೂ ಅಹುದು. ಕೆಸರಿನಲ್ಲಿ ಕೈಯಿಟ್ಟು ಕೊಳೆಯಾಗುವುದಿಲ್ಲವೆನ್ನಲಾಗುವುದಿಲ್ಲ. ಆದರೆ ಅದರ ಲೇಪವು ಮಾತ್ರ ತನಗಾಗದಿರಬೇಕು. ಹಾಗೆಯೇ ದೇಹವಿರುವವರೆವಿಗೂ ಅದರ ರಕ್ಷಣೆ, ಪೋಷಣೆ ಮುಂತಾದ ಕಾರ್ಯಗಳು ನಡೆಯಲೇ ಬೇಕು. ನಮ್ಮೊಡನಿರುವ ಜಗತ್ತಿನಲ್ಲಿರುವ ನಮ್ಮಂತಹ ಇತರ ಪ್ರಾಣಿಗಳೊಡನಾಡಲೇ ಬೇಕು. ಆದರೆ ತನ್ನದೆಂಬ ಅಭಿಮಾನವು ಅಂತಃಕರಣದಲ್ಲಿ ಹುಟ್ಟಲು ಅವಕಾಶಕೊಡಬಾರದು—ತಾನೂ ಸುಖಿಯಾಗಿ, ಇತರರನ್ನೂ ಸುಖವಾಗಿ ರಿಸುವ ಪ್ರೇಮಜೀವನವು ನಮ್ಮ ಆಸ್ತಿಯಾಗಿರಬೇಕು. ಭಗವದ್ಗೀತೆಯು ಇದನ್ನು ಸಾಧಿಸುವ ಕರ್ಮಯೋಗವನ್ನು ಸಾಧಿಸುವುದು. ಭಾಗವತವು— ಇಂತಹ ಕರ್ಮಯೋಗಕ್ಕೆ ಆಚಾರ್ಯನಾದ ಯೋಗೇಶ್ವರನ ಸ್ಥಿತಿಯನ್ನು ವರ್ಣಿಸುವುದು.

ವ್ಯಾಸಮಹರ್ಷಿಗಳು ವೇದದ ಮಂತ್ರಗಳನ್ನು ವಿಂಗಡಿಸಿ ಅವುಗಳ

ಅರ್ಥವು ಸ್ತ್ರೀ, ಶೂದ್ರ ಮುಂತಾದ ಹೆಚ್ಚು ವಿದ್ಯಾವಂತರಲ್ಲದವರಿಗೆ ಗೊತ್ತಾಗುವುದಿಲ್ಲವೆಂದು ಬಗೆದು, ಮಹಾಭಾರತದಲ್ಲಿ ಧರ್ಮ, ಜ್ಞಾನ, ನೀತಿ, ಭಕ್ತಿಗಳ ಭಂಡಾರವನ್ನು ತುಂಬಿಬಿಟ್ಟರು. ಆದರೂ ಅವರಿಗೆ ಮನಶ್ಶಾಂತಿಯಾಗಲಿಲ್ಲ. ಸರಸ್ವತೀ ನದೀ ತೀರದ ತಮ್ಮ ಆಶ್ರಮದಲ್ಲಿ ಕುಳಿತು ಯೋಚನೆ ಮಾಡಲಾರಂಭಿಸಿದರು. ಆಗ ನಾರದ ಮಹರ್ಷಿಗಳು ಅಲ್ಲಿಗೆ ಬಂದರು. ಅವರನ್ನು ಸತ್ಕರಿಸಿ ತಮ್ಮ ಚಿಂತೆಯನ್ನು ವಿವರಿಸಲು ಅವರು ಹೇಳಿದ ಮಾತುಗಳು ಬೋಧಪ್ರದವಾಗಿವೆ.

**ನ ಯದ್ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ಪ್ರಗೃಣೀತ ಕರ್ಹಿಚಿತ್ ।**
**ತದ್ವಾಯಸಂ ತೀರ್ಥಮುಶಂತಿ ಮಾನಸಾ**
**ನ ಯತ್ರ ಹಂಸಾ ನಿರಮಂತ್ಯುಶಿಕ್‍ಕ್ಷಯಾಃ॥**

[ಭಾ ಸ್ಕಂ ೧ ಅ ೫ ಶ್ಲೋ ೧೦]

"ಮಾತುಗಳು ಮೃದುವಾಗಿರಬಹುದು. ಮಧುರವಾಗಿರಬಹುದು. ವಿಚಿತ್ರ ಶೈಲಿಯಿಂದೊಡಗೂಡಿರಬಹುದು–ಆದರೆ ಜಗತ್ತನ್ನು ಪವಿತ್ರವಾಗಿ ಮಾಡುವ ಪರಮಾತ್ಮನ ಕೀರ್ತಿಯ ವರ್ಣನೆಯಿಂದ ಅದು ಬೆಳೆಯದಿದ್ದರೆ ಅದನ್ನು ಜ್ಞಾನಿಗಳು ಕಾಕತೀರ್ಥವೆನ್ನುತ್ತಾರೆ. ಕಾಗೆಯಂತಹ ತುಚ್ಛ ಪಕ್ಷಿಗೆ ಪ್ರಿಯವಾಗುವ ಜಲಾಶಯದಂತೆ ವಿಷಯ ಭೋಗಲಾಲಸೆಯುಳ್ಳ ಜನರಿಗೆ ಮಾತ್ರ ಮನೋಹರವಾಗಿ ಕಾಣಬಹುದು. ಮಾನಸ ಸರೋವರದಲ್ಲಿ ಹಂಸವು ಸ್ನಾನಮಾಡಲು ಇಚ್ಛೆಪಡುವಂತೆ ಪರಮಹಂಸರಾದ ಜ್ಞಾನಿಗಳು ಪರಮಾತ್ಮನ ನಾಮಸಂಕೀರ್ತನೆಯಲ್ಲಿ ಆನಂದಿಸುವರೇ ಹೊರತು ವಿಷಯ ಭೋಗವನ್ನು ವೃದ್ಧಿಮಾಡುವ ಕಾವ್ಯರಚನೆಯ ಶಬ್ದ ಶೈಲಿಯಿಂದ ಆನಂದಿಸರು."

**ನೈಷ್ಕರ್ಮ್ಯ ಮಪ್ಯಚ್ಯುತಭಾವವರ್ಜಿತಂ**
**ನ ಶೋಭತೇ ಜ್ಞಾನಮಲಂ ನಿರಂಜನಂ ।**
**ಕುತಃ ಪುನಃ ಶಶ್ವದಭದ್ರಮೀಶ್ವರೇ**
**ನ ಚಾರ್ಪಿತಂ ಕರ್ಮ ಯದಪ್ಯಕಾರಣಂ ॥**

[ಭಾ ಸ್ಕಂ ೧ ಅ ೫ ಶ್ಲೋ ೧೨]

"ಸಮಸ್ತ ಉಪಾಧಿಗಳನ್ನೆಲ್ಲಾ ನಿರ್ಮೂಲವಮಾಡುವ ಬ್ರಹ್ಮಜ್ಞಾನವೂ ಸಹ ಭಕ್ತಿ ರಸದಿಂದ ಬೆರೆಯದಿದ್ದರೆ ವ್ಯರ್ಥವೆಂದೇ ತಿಳಿಯಲ್ಪಡುವಾಗ ದುಃಖ ಫಲರೂಪಗಳಾದ ಅನ್ಯಕರ್ಮಗಳ ಪಾಡೇನು ? ಭಕ್ತಿಹೀನ ಕರ್ಮವು ಬಂಧನರೂಪವು—ಈಶ್ವರಾರ್ಪಣ ವಾಗದಿರುವ ಕರ್ಮವು ಶೋಭಿಸಲಾರದು—ಅದು ವ್ಯರ್ಥವೇ ಸರಿ.

**ತ್ಯಕ್ತ್ವಾ ಸ್ವಧರ್ಮಂ ಚರಣಾಂಬುಜಂ ಹರೇಃ**
**ಭಜನ್ನಪಕ್ವೋಽಥ ಪತೇತ್ತತೋ ಯದಿ ।**
**ಯತ್ರ ಕ್ವ ವಾಭದ್ರಮಭೂದಮುಷ್ಯ ಕಿಂ**
**ಕೋವಾರ್ಥ ಆಪ್ತೋಽಭಜತಾಂ ಸ್ವಧರ್ಮತಃ ॥**

[ಭಾ. ಸ್ಕಂ॥ ೧ ಅ॥ ೫ ಶ್ಲೋ॥ ೧೭]

"ತನ್ನ ಸ್ವಧರ್ಮ—ವರ್ಣಾಶ್ರಮ ಧರ್ಮವನ್ನು ತ್ಯಾಗಮಾಡಿಯಾದರೂ ಪರಮಾತ್ಮ ಭಕ್ತಿಯನ್ನು ವೃದ್ಧಿಮಾಡಿಕೊಳ್ಳಬೇಕು. ಹಾಗೆಮಾಡುತ್ತಿದ್ದು ಭಕ್ತಿಪಥ ದಲ್ಲಿ ಧ್ಯೇಯಸಾಧನೆಯಾಗದೆ ಮರಣಹೊಂದಿದರೂ ಭಯವಿಲ್ಲ. ಸ್ವಧರ್ಮವನ್ನು ಬಿಟ್ಟ ಪಾಪವು ಘಟಿಸುವುದಿಲ್ಲ. ಏಕೆಂದರೆ ಮುಂದಿನ ಜನ್ಮದಲ್ಲಿ ಭಕ್ತನಾಗಿ ಹುಟ್ಟಿ ಪರಮಾತ್ಮನ ಪೂರ್ಣಾನುಗ್ರಹವನ್ನು ಪಡೆಯುತ್ತಾನೆ.

ಆದರೆ ಭಕ್ತಿಹೀನನಾದ ಮನುಷ್ಯನು ನಿಷ್ಫಲವಾದ ಕರ್ಮಗಳನ್ನೂ—ಧರ್ಮಗಳನ್ನೂ ಅನುಸರಿಸುತ್ತಾ ಮರಣಹೊಂದಿದರೆ ಅವರಿಗೆ ಯಾವ ಫಲ ? ಅಶಾಶ್ವತ ಕರ್ಮಫಲಗಳೇ ಅಲ್ಲವೇ ? ಕರ್ಮಫಲರೂಪವಾದ ಕ್ಷಣಿಕ ಸ್ವರ್ಗಾದಿ ಭೋಗಗಳನ್ನು ಅನುಭವಿಸಿ ಪುನಃ ಜನ್ಮ— ಮರಣರೂಪ ಸಂಸಾರ ಕೂಪದಲ್ಲಿಯೇ ಬೀಳುತ್ತಾನೆ.

ಈ ಮಾತುಗಳಿಂದ ಭಕ್ತಿಗೆ ಎಲ್ಲಾ ಧರ್ಮ ಕರ್ಮಗಳಿಗಿಂತಲೂ ಹೆಚ್ಚಿನ ಸ್ಥಾನವನ್ನು ಕೊಡಬೇಕೆಂದು ಸಿದ್ಧವಾಗುತ್ತದೆ. ಭಾಗವತದ ಮಹಿಮೆ ಯನ್ನು ವರ್ಣಿಸುವ ಭಾವ ಪ್ರಚೋದಕವಾದ ಕಥೆಯೊಂದು ಪದ್ಮ ಪುರಾಣದ ಪಾತಾಳ ಖಂಡದಲ್ಲಿ ಹೇಳಲ್ಪಟ್ಟಿದೆ. ಅದೇನೆಂದರೆ—

ಬ್ರಹ್ಮಮಾನಸ ಪುತ್ರರಾದ ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ ಎಂಬ ನಾಲ್ವರು ಮಹಾಪುರುಷರು ಒಂದಾವೃತ್ತಿ ಬದರಿ

ಕಾಶ್ರಮಕ್ಕೆ ಸತ್ಸಂಗಕ್ಕಾಗಿ ಹೋದರು. ಅಲ್ಲಿರುವಾಗ ಒಂದು ದಿನ ನಾರದ ಮಹರ್ಷಿಗಳು ಬಹಳ ಚಿಂತಾಕ್ರಾಂತರಾಗಿದ್ದುದನ್ನು ನೋಡುತ್ತಲೇ ಈ ರೀತಿ ಸಂಭಾಷಣೆಯಾಯಿತು.

**ಸನಕಾದಿಗಳು**—ನಾರದರೇ! ನಿಮ್ಮ ಮುಖಮಂಡಲವು ಏಕೆ ಬಾಡಿ ಹೋಗಿದೆ ? ನಿಮಗೇತರ ಚಿಂತೆ ಹತ್ತಿದೆ ? ಬೇಗ ಬೇಗ ಹೋಗುತ್ತಿರುವಿರಲ್ಲಾ ? ನೀವು ವಿರಕ್ತರು. ಸರ್ವಸ್ವವನ್ನೂ ಕಳೆದುಕೊಂಡು ಸಂಕಟಪಡುತ್ತಿರುವವರಂತೆ ನಿಮ್ಮ ಚಿತ್ತವು ಚಂಚಲವಾಗಿ—ಗಾಬರಿಯಾಗಿರುವಂತೆ ಕಾಣಬರುತ್ತಿದೆ. ನೀವು ಸರ್ವಸ್ವತಂತ್ರರು. ನಿತ್ಯತೃಪ್ತರು. ನಿಮಗೇತರ ಯೋಚನೆ ಹೇಳಬಾರದೆ ?

**ನಾರದ**—ಭೂಲೋಕವು ಕರ್ಮಭೂಮಿಯಾದುದರಿಂದ ಉಳಿದೆಲ್ಲಾ ಲೋಕಗಳಿಗಿಂತಲೂ ಉತ್ತಮವೆಂದೇ ಯೋಚಿಸಿ ಪ್ರಪಂಚವನ್ನೆಲ್ಲಾ ತಿರುಗುತ್ತಾ ಬಂದೆನು. ಇಲ್ಲಿಗೆ ಬಂದವನು ಪುಷ್ಕರ, ಪ್ರಯಾಗ, ಕಾಶೀ, ಗೋದಾವರೀ, ಹರಿದ್ವಾರ, ಕುರುಕ್ಷೇತ್ರ, ಶ್ರೀರಂಗ, ಸೇತುಬಂಧ ಮುಂತಾದ ತೀರ್ಥಗಳನ್ನೆಲ್ಲಾ ತಿರುಗಿ ಬಂದೆನು. ಆದರೆ ಎಲ್ಲಿಯೂ ಮನಸ್ಸಿಗೆ ಸಂತೋಷಕೊಡುವ ಕಲ್ಯಾಣಕಾರಿಯಾದ ಉತ್ತಮ ಧರ್ಮವು ಕಾಣಬರಲಿಲ್ಲ. ಈಗ ಅಧರ್ಮದ ಸ್ನೇಹಿತನಾದ ಕಲಿಯ ಅಧಿಕಾರವು ನಡೆಯುತ್ತಿದೆ. ಭೂಮಿಯನ್ನೆಲ್ಲಾ ಇದು ಕೆಡಿಸಿಬಿಟ್ಟಿದೆ. ಸತ್ಯವು ಉಳಿಯಲಿಲ್ಲ. ತಪಸ್ಸು, ಶೌಚ, ದಯಾ, ದಾನ ಮುಂತಾದುವು ಸ್ವಲ್ಪವೂ ಇಲ್ಲವೇ ಇಲ್ಲ. ಎಲ್ಲೆಲ್ಲೂ ತುಚ್ಛ ಸ್ವಭಾವದವರೇ—ಹೇಗಾದರೂಮಾಡಿ ತಮ್ಮ ತಮ್ಮ ಹೊಟ್ಟೆಹೊರೆದುಕೊಂಡರೆ ಸಾಕೆನ್ನುವವರೇ—ಸುಳ್ಳು, ಆಲಸ್ಯ ಮುಂತಾದ ಬುದ್ಧಿಗಳಿಂದ ತುಂಬಿರುವವರೇ—ಕಷ್ಟಪರಂಪರೆಗಳಿಂದ ಪೀಡಿತರೇ—ಪಾಷಂಡಿಗಳೇ ಕಾಣಬರುತ್ತಿದ್ದಾರೆ. ಸಾಧುಸಂತರೆಂದು ಹೇಳಿಸಿಕೊಳ್ಳುವವರೂ ಸಹ ಕಪಟಿಗಳಾಗಿದ್ದಾರೆ. ವೈರಾಗ್ಯಶಾಲಿಗಳೆನ್ನಿಸಿಕೊಳ್ಳುವವರೂ ಸಹ ಸಂಸಾರಿಗಳಂತೆಯೇ ಇದ್ದಾರೆ. ಮನೆಮನೆಯಲ್ಲಿಯೂ ಸ್ತ್ರೀಯರದ್ದೇ ಅಧಿಕಾರ. ಭಾವಮೈದುನನೇ ಮನೆಯ ಮಂತ್ರಿ. ಧನದಾಸೆಯಿಂದ

ತಮ್ಮ ಮನೆ ಹೆಣ್ಣುಮಕ್ಕಳನ್ನು ಮಾರಿಕೊಳ್ಳುವರು. ಪತಿ ಪತ್ನಿಯ ರಲ್ಲಿ ವ್ಯಾಜ್ಯ ರಗಳೆಗಳು ಕಾಣಬರುತ್ತಿವೆ. ಯವನರಂತಿರುವ ದುಷ್ಟ-ದುರಾಚಾರಿಗಳು ವೇಷಮಾರ್ಪಡಿಸಿಕೊಂಡು ಬ್ರ ಹ್ಮ ಚ ರ್ಯಾ ದಿ ಆಶ್ರಮಗಳಿಗೆ ಕಳಂಕವನ್ನು ತರುತ್ತಿದ್ದಾರೆ. ಪವಿತ್ರ ತೀರ್ಥಗಳಲ್ಲಿ ನದೀ ತೀರಗಳಲ್ಲಿ, ದೇವಾಲಯಗಳಲ್ಲಿ ದುಷ್ಟರೇ ಕಾಣಬರುತ್ತಿದ್ದಾರೆ. ಅವರ ಪಾಪಾಚಾರಗಳನ್ನು ನೋಡಿ ಜನರಿಗೆ ಕ್ಷೇತ್ರಗಳಲ್ಲಿ ಅಶ್ರದ್ಧೆ ಹುಟ್ಟುತ್ತಿದೆ. ಈ ಕಾಲದಲ್ಲಿ ನಿಜವಾದ ಸಾಧು, ಯೋಗಿ, ಸದಾ ಚಾರಿಯಾದವನಾವನೂ ಕಾಣಬರುವುದಿಲ್ಲ. ಕಲಿಯುಗರೂಪವಾದ ದಾವಾಗ್ನಿಯು (ಕಾಡುಗಿಚ್ಚು) ಯೋಗ, ತಪಸ್ಸು, ವ್ರತಾದಿಗಳನ್ನು ಸುಟ್ಟುಹಾಕಿಬಿಟ್ಟಿದೆ. ಗ್ರಾಮದಲ್ಲಿ-ಪುರದಲ್ಲಿ-ನಗರದಲ್ಲಿ ಎಲ್ಲೆಲ್ಲಿಯೂ ಅನ್ನಕ್ಕೆ ಕ್ಷಾಮವು ತಲೆದೋರುತ್ತಿದೆ. ಬ್ರಾಹ್ಮಣರು ವೇ ದ ವ ನ್ನು ಮಾರಿ ಹೊಟ್ಟೆಹೊರೆದುಕೊಳ್ಳುವುದಕ್ಕಾಗಿಯೇ ಅದನ್ನು ಅಧ್ಯಯನ ಮಾಡುತ್ತಾರೆ. ಸ್ತ್ರೀಯರು ಸಾಮಾನ್ಯವಾಗಿ ಕಪಟಿಗಳಾಗಿದ್ದಾರೆ. ದುಷ್ಕರ್ಮಮಾಡುತ್ತಾ ಜೀವಿಸಲು ಸ್ವಲ್ಪವೂ ಹಿಂಜರಿಯರು. ಕಲಿಯ ಈ ದೋಷಗಳನ್ನೆಲ್ಲಾ ನೋಡುತ್ತಾ ಬರುವಾಗ ಯಮುನಾ ತಟದಲ್ಲಿ-ಎಲ್ಲಿ ಶ್ರೀಕೃಷ್ಣಚಂದ್ರನು ತನ್ನ ಬಾಲಲೀಲೆಗಳನ್ನು ಪ್ರಕಟಮಾಡಿ ದನೋ ಆ ಸ್ಥಳದಲ್ಲಿ ನನಗೊಂದು ಆಶ್ಚರ್ಯವು ಕಾಣಬಂದಿತು.

**ಸನಕಾದಿಗಳು**—ಅದೇನು ? ಅದೇನು ? ಎಂತಹ ಆಶ್ಚರ್ಯ!

**ನಾರದ**—ಅಲ್ಲಿ ಒಬ್ಬ ಯುವತಿಯು ಬಹಳ ದುಃಖಿತಳಾಗಿ ಕುಳಿತಿದ್ದಾಳೆ. ಅವಳ ಮುಖಮಂಡಲವು ಏನೋ ಬಹು ದೊಡ್ಡ ಚಿಂತೆಯಿಂದ ಬಾಡಿ ಹೋಗಿದ್ದಂತೆ ಕಾಣಬರುತ್ತಿದೆ. ಅವಳ ಸಮೀಪದಲ್ಲಿಯೇ ಇಬ್ಬರು ಮುದುಕರು ಮಲಗಿದ್ದಾರೆ. ಆಗಾಗ್ಗೆ ಕಣ್ಣುಮುಚ್ಚಿಕೊಳ್ಳುತ್ತಾರೆ. ಪುನಃ ನಿಟ್ಟುಸಿರು ಬಿಡುತ್ತಾರೆ. ಪುನಃ ಕಣ್ಣು ಮುಚ್ಚಿಕೊಳ್ಳುತ್ತಾರೆ. ಅವರ ದೇಹವೆಲ್ಲಾ ಒಣಗಿಹೋಗಿದೆ. ಎಲುವು ಚರ್ಮಗಳೇ ಹೊರತು ರಕ್ತವೇ ಕಾಣಬರುವುದಿಲ್ಲ. ಆ ಯುವತಿಯು ಅವರನ್ನು ಆಗಾಗ್ಗೆ ಎಬ್ಬಿಸುತ್ತಾಳೆ. ಅಳಲಾರಂಭಿಸುತ್ತಾಳೆ. ಒಮ್ಮೊಮ್ಮೆ ಸುತ್ತಲೂ

ತಿರುಗಿ-ತಿರುಗಿ ನೋಡುತ್ತಾಳೆ. ತನ್ನ ಸಹಾಯಕ್ಕೆ ಯಾರೂ ಬರದಿರುವುದನ್ನು ಕಂಡು ಪುನಃ ನಿರಾಶಳಾಗಿ ಅಳಲಾರಂಭಿಸುತ್ತಾಳೆ. ಒಮ್ಮೊಮ್ಮೆ ತನ್ನ ದೇಹವನ್ನು ನೋಡಿಕೊಳ್ಳುತ್ತಾಳೆ. ಆ ಇಬ್ಬರ ದೇಹಗಳನ್ನು ನೋಡಿ ಅಳಲಾರಂಭಿಸುತ್ತಾಳೆ. ಅವಳ ಸುತ್ತಲೂ ನೂರಾರು ಸ್ತ್ರೀಯರು ಅವಳನ್ನು ಉಪಚರಿಸುತ್ತಾ ಗಾಳಿಹಾಕುತ್ತಾ ಸಮಾಧಾನಮಾಡುತ್ತಿದ್ದಾರೆ.

ಇದನ್ನು ನೋಡುತ್ತಲೇ "ಈಕೆ ಯಾರು ? ಈ ವೃದ್ಧರು ಯಾರು ? ಇವರಿಲ್ಲಿ ಮಲಗಿರುವುದೇಕೆ ? ಎಂಬ ಮುಂತಾದ ವಿಚಾರಗಳನ್ನು ತಿಳಿಯಬೇಕೆಂಬ ಕುತೂಹಲವುಂಟಾಯಿತು ಸಮೀಪಕ್ಕೆ ಹೋದೆನು ನನ್ನನ್ನು ನೋಡಿದೊಡನೆಯೇ ಆಕೆಯು ತಟ್ಟನೆ ಎದ್ದು ನಿಂತು ಕಾತರ ಸ್ವರದಿಂದ ಹೇಳಲಾರಂಭಿಸಿದಳು.

"ಬನ್ನಿ ಸ್ವಾಮಿ! ನಿಮ್ಮನ್ನು ನೋಡಿದರೆ ಯಾರೋ ಪರೋಪಕಾರಿಗಳಾದ ಮಹಾಪುರುಷರಂತೆ ತೋರುತ್ತದೆ. ದಯವಿಟ್ಟು ಸ್ವಲ್ಪ ಹೊತ್ತು ಇಲ್ಲಿ ನಿಂತು ನನ್ನನ್ನು ವಿಚಾರಿಸಿ, ನನ್ನ ದುಃಖ, ಸಂಕಟಗಳನ್ನು ಕಡಿಮೆ ಮಾಡುವಿರಾ ? ನಿಮ್ಮಂತಹ ಸಾಧುಗಳ ದರ್ಶನದಿಂದ ಎಲ್ಲಾ ಪಾಪಗಳೂ ನಿವಾರಣೆಯಾಗುತ್ತವೆ. ಎಲ್ಲಾ ತಾಪಗಳೂ ಕಡಿಮೆಯಾಗುತ್ತವೆ. ನಿಮ್ಮ ಅಮೃತ ವಚನಗಳಿಂದ ನನಗೆ ಸಮಾಧಾನವಾದೀತು ಎಂದು ತಿಳಿಯುತ್ತೇನೆ. ಪುಣ್ಯ ಫಲದಿಂದಲೇ ನಿಮ್ಮಂತಹವರ ದರ್ಶನವಾಗಬೇಕಾದರೆ."

ಇವಳ ಮಾತುಗಳನ್ನು ಕೇಳುತ್ತಲೇ ನಾನೂ ಸಹ "ನಾನು ದೇವರ್ಷಿ ನಾರದ. ಭೂಲೋಕ ಸಂಚಾರಮಾಡುತ್ತಿದ್ದೇನೆ. ಸುಂದರಿ! ನೀನು ಯಾರು ? ಈ ವೃದ್ಧರಾರು ? ನಿನ್ನ ಸುತ್ತಲೂ ಇರುವ ಈ ಸ್ತ್ರೀಯರಾರು ? ನಿನ್ನ ವೃತ್ತಾಂತವೇನು ? ಎಲ್ಲವನ್ನೂ ವಿಸ್ತಾರವಾಗಿ ತಿಳಿಸು" ಎಂದೆನು.

ಆ ಸ್ತ್ರೀಯು ಹೇಳಿದಳು—"ಮಹಾಶಯ! ನನ್ನ ಹೆಸರು ಭಕ್ತಿ ಎಂದು. ಇವರಿಬ್ಬರೂ ನನ್ನ ಮಕ್ಕಳು. ಒಬ್ಬನನ್ನು ಜ್ಞಾನ, ಮತ್ತೊಬ್ಬನನ್ನು ವೈರಾಗ್ಯ ಎಂದು ಕರೆಯುತ್ತಾರೆ. ಆದರೆ ದುರ್ದೈವದಿಂದ ಮೃತ್ಯುಮುಖರಾಗಿದ್ದಂತೆ ಕಾಣುತ್ತಿದ್ದಾರೆ. ಈ ಸ್ತ್ರೀಯರು ಗಂಗಾ, ಯಮುನಾ ಮುಂತಾದ ತೀರ್ಥಾಭಿಮಾನಿ ದೇವತೆಗಳು.

**ನಾರದ**—ಇದೇನಮ್ಮ! ಹೀಗೆ ಹೇಳುವೆ ? ನೀನು ಯುವತಿ. ನಿನಗೆ ಮುವ್ವತ್ತೈದಕ್ಕಿಂತಲೂ ಹೆಚ್ಚು ವಯಸ್ಸಿರಲಾರದು. ಇವರಿಬ್ಬರಿಗೆ ಎಂಭತ್ತಕ್ಕೆ ಮೇಲಾಗಿದೆ.

**ಭಕ್ತಿ**—ಅದೇ ನಾನೂ ಚಿಂತಿಸುತ್ತಿರುವುದು! ನಿಮಗೆ ಉತ್ತರಕೊಡುವುದಕ್ಕೆ ನನಗೇನೋ ಸಂಕೋಚವಾಗುತ್ತಿದೆ. ಅದನ್ನೇ ನಿಮಗೆ ವಿವರಿಸುವೆನು. ಗಂಗಾಯಮುನಾದಿ ದೇವಸ್ತ್ರೀಯರು ನನಗೆ ಉಪಚಾರಮಾಡುತ್ತಾ ಇದ್ದರೂ ನನಗೆ ಸಮಾಧಾನವಿಲ್ಲ. ನಿಮ್ಮನ್ನು ನೋಡುತ್ತಲೇ ನನ್ನ ಚರಿತ್ರೆಯನ್ನೆಲ್ಲಾ ನಿಮಗೆ ಹೇಳಿ ನಿಮ್ಮಿಂದ ಚಿತ್ತಶಾಂತಿಯನ್ನು ಪಡೆಯಬೇಕೆಂಬ ಆಶೆಯುಂಟಾಗುತ್ತಿದೆ.

ನಾನು ಹುಟ್ಟಿದುದು ದ್ರಾವಿಡದೇಶದಲ್ಲಿ. ಬೆಳೆದುದು ಕರ್ಣಾಟಕದಲ್ಲಿ. ನನ್ನ ಯೌವನವೆಲ್ಲಾ ಕರ್ಣಾಟಕದಲ್ಲಿಯೇ. ಅಲ್ಲಿ ಯಾವುದೋ ಭಾಗದಲ್ಲಿ ನನ್ನ ದೇಹವು ಕ್ಷೀಣವಾಗತೊಡಗಿತು. ಗುಜರಾತಿಗೆ ಹೋದೊಡನೆಯೇ ಸಂಪೂರ್ಣವಾಗಿ ವೃದ್ಧಾಪ್ಯ ಬಂದು ಬಿಟ್ಟಿತು. ಕಲಿಯುಗದ ಪ್ರಾಬಲ್ಯವು ಹೆಚ್ಚಾದುದರಿಂದ ಅಲ್ಲಿನ ಪಾಷಂಡಿಗಳೆಲ್ಲಾ ನೇರಿ ನನ್ನ ಅವಯವಗಳನ್ನೆಲ್ಲಾ ಕಡಿದು ತುಂಡು ತುಂಡುಮಾಡಲಾರಂಭಿಸಿದರು. ಹೀಗೆ ಅವಸ್ಥೆಪಡುತ್ತಾ ನಾನೂ, ನನ್ನ ಮಕ್ಕಳೂ ಕೃಶರಾಗಿ, ದುಃಖಿತರಾಗಿ ತಿರುಗುತ್ತಿದ್ದೇವೆ. ಕೊನೆಗೆ ಬೃಂದಾವನಕ್ಕೆ ಬಂದೆವು. ಅಲ್ಲಿಗೆ ಬರುತ್ತಲೇ ನನ್ನ ದೇಹವೆಲ್ಲಾ ಬದಲಾಗಿಬಿಟ್ಟಿತು. ನೀವು ಈಗ ನನ್ನನ್ನು ನೋಡುತ್ತಿರುವತಂಹ ಯೌವನವು ಬಂದು ಬಿಟ್ಟಿದೆ. ನನ್ನ ಮಕ್ಕಳಿಬ್ಬರೂ ಹೆಚ್ಚು ಹೆಚ್ಚು ಮುದುಕರಾಗುತ್ತಾ

ಈಗಿರುವ ಅವಸ್ಥೆಗೆ ಬಂದಿದ್ದಾರೆ. ನಮ್ಮನ್ನು ಕೇಳುವವರೇ ಇಲ್ಲ. ತಾಯಿಯು ಯೌವನಸ್ಥೆಯಾಗಿ ಮಕ್ಕಳು ಮುದುಕರಾಗಿ ನಾಯು ವಂತಾಗಿರುವ ಈ ದುರವಸ್ಥೆಯು ಎಂತಹ ನಾಚಿಕೆಗೇಡು! ನನಗೆ ಆಶ್ಚರ್ಯವೂ ಆಗುತ್ತಿದೆ. ಸಂಕಟವೂ ಆಗುತ್ತಿದೆ. ಮಹಾತ್ಮರೇ! ನೀವು ಬುದ್ಧಿವಂತರು. ತ್ರಿ ಕಾ ಲ ಜ್ಞಾ ನಿ ಗ ಳು. ನಮಗೆ ಈ ದುರವಸ್ಥೆಯು ಏಕೆ ಬಂದಿತು ? ಅದನ್ನು ತಪ್ಪಿಸಿಕೊಳ್ಳುವುದು ಹೇಗೆ ? ದಯವಿಟ್ಟು ತಿಳಿಸುವ ಕೃಪೆಮಾಡಿ."

ಯುವತಿಯ ಈ ಹೃದಯವಿದ್ರಾವಕವಾದ ಚರಿತ್ರೆಯಿಂದ ನನಗೂ ವ್ಯಸನವಾಯಿತು. ಸ್ವಲ್ಪ ಹೊತ್ತು ಧ್ಯಾನಸ್ಥನಾದೆನು. ಧ್ಯಾನಯೋಗ ದಲ್ಲಿ ನಿಂತಾಗ ನನಗೆ ಆದ ಅನುಭವವನ್ನು ಆಕೆಗೆ ಹೇಳಿದೆನು.

**ಸನಕಾದಿಗಳು**—ನಿಮಗೆ ಧ್ಯಾನದಲ್ಲೇನು ಕಂಡು ಬಂದಿತು ? ಆಕೆಗೇನು ಹೇಳಿದಿರಿ ?

**ನಾರದ**—ನಾನು ಹೇಳಿದೆನು. "ತಾಯಿ ! ಯೋಚಿಸಬೇಡ. ಇದು ಕಲಿ ಯುಗದ ಪ್ರಭಾವ. ಈ ದಾರುಣವಾದ ಕಲಿಯುಗವು ಎಲ್ಲರ ಆಚಾರ, ವಿಚಾರಗಳನ್ನು ತಲೆಕೆಳಗು ಮಾಡಿ ಬಿಟ್ಟಿದೆ. ಯೋಗ, ತಪಸ್ಸುಗಳೆಲ್ಲಿ ಹೋದುವೋ ಹೇಳುವವರೇ ಇಲ್ಲ. ಜೀವರುಗಳೆಲ್ಲಾ ಪಾಪಪೂರ್ಣರಾಗಿ ದುರ್ಮಾರ್ಗರೂ, ಮೋಸಗಾರರೂ ಆಗಿಬಿಟ್ಟಿ ದ್ದಾರೆ. ರಾಕ್ಷಸರಿಗಿಂತಲೂ ಹೆಚ್ಚಿದ್ದಾರೆ. ಸಜ್ಜನರಿಗೆ—ಸತ್ಯ ನ್ಯಾಯ ಗಳನ್ನು ಗೌರವಿಸುವವರಿಗೇ ಕಷ್ಟ ನಷ್ಟಗಳು. ದುಷ್ಟರಿಗೇ—ಸುಖ, ಸಂತೋಷ, ಐಶ್ವರ್ಯಾದಿಗಳು. ಈ ಸಮಯದಲ್ಲಿ ಧೈರ್ಯಶಾಲಿಗಳಾಗಿ ಎಂತಹ ತೊಂದರೆ ಬಂದರೂ ಸನ್ಮಾರ್ಗವನ್ನು ಬಿಡದಿರುವವರೇ ಸತ್ಪುರುಷರು. ಪುಣ್ಯಾತ್ಮರು. ಈ ಜಗತ್ತೆಲ್ಲಾ ಸಂಪೂರ್ಣ ಪಾಪ ಮಯವಾಗಿದೆ. ಭೂಮಿಯಲ್ಲಿ ವಾಸಮಾಡುವುದಂತಿರಲಿ, ಈ ಸ್ಥಿತಿ ಯನ್ನು ನೋಡುವುದಕ್ಕೂ ಅಸಹ್ಯವಾಗಿದೆ. ನಮಗೆ ಹೇಗೇ ಇರಲಿ,

ಭೂಮಿಯನ್ನು ಹೊತ್ತಿರುವ ಆದಿಶೇಷನೂ ಸಹ ಭಾರದಿಂದ ಕುಗ್ಗಿ ಹೋಗುತ್ತಿದ್ದಾನೆ. ಜಗತ್ತಿನಲ್ಲೆಲ್ಲೂ ಉತ್ಸಾಹವೇ ಇಲ್ಲ. ನಿನ್ನನ್ನೂ ನಿನ್ನ ಮಕ್ಕಳನ್ನೂ ಆದರಿಸುವವರೇ ಇಲ್ಲ. ಎಲ್ಲರೂ ವಿಷಯ ಲಂಪಟರೇ—ಸ್ವಾರ್ಥಿಗಳೇ. ಆದುದರಿಂದಲೇ ನೀವು ಮೂವರೂ ಈ ಅವಸ್ಥೆಗೆ ಬಂದಿರುವುದು. ಆದರೆ ಮಗಳೇ! ನೀನು ಬೃಂದಾವನಕ್ಕೆ ಬಂದುದು ಒಳ್ಳೆಯದೇ ಆಯಿತು. ಬೃಂದಾವನದಲ್ಲಿ ಅಲ್ಲಲ್ಲಿ ಭಕ್ತಿಯ ಗುರ್ತು ಕಾಣಬರುತ್ತಿವೆ. ಬೃಂದಾವನದ ಹವೆಯ ಪ್ರಭಾವದಿಂದ ನಿನಗೆ ಯೌವನವು ಬಂದಿದೆ. ಆದರೆ ಇಲ್ಲಿ ನಿನ್ನ ಮಕ್ಕಳನ್ನು ಕೇಳುವವರೇ ಇಲ್ಲ. ಜ್ಞಾನ, ವೈರಾಗ್ಯಗಳಾರಿಗೂ ಬೇಡವೇ ಬೇಡ.

**ಭಕ್ತಿ**—ಮುನಿವರರೇ! ನಿಮ್ಮ ಮಾತುಗಳಿಂದ ನನಗೆ ಸ್ವಲ್ಪ ಸಮಾಧಾನವಾಯಿತು. ದಯವಿಟ್ಟು ಇದೊಂದು ಸಂಶಯವನ್ನು ನಿವಾರಣೆಮಾಡಿ. ಪರೀಕ್ಷಿದ್ರಾಜನು ಈ ಕಲಿಯನ್ನು ಹಿಡಿದು ಶಿಕ್ಷಿಸಿದರೂ ಪುನಃ ಏಕೆ ಬಿಟ್ಟುಬಿಟ್ಟನು ? ಭೂಮಿಯಲ್ಲಿ ಇರದಂತೆ ಕೊಂದುಬಿಡಬಾರದಾಗಿತ್ತೆ ? ಈ ಕಲಿಯುಗವು ಬಂದ ನಂತರ ಎಲ್ಲವೂ ಸಾರಹೀನವಾಗಿಯೇ ಆಗಿರುವುದಲ್ಲವೇ ? ಕರುಣಾಳುವಾದ ಪರಮಾತ್ಮನು ಏಕೆ ಕಲಿಯ ದೌಷ್ಟ್ಯವನ್ನು ನೋಡುತ್ತಿದ್ದರೂ ಶಿಕ್ಷಿಸದೇ ಸುಮ್ಮನೇ ಇರುವನಲ್ಲಾ ?

**ನಾರದ**—ಸುಂದರಿ! ನಿನಗೆ ತಿಳಿಯದು. ನಾನು ಹೇಳುವುದನ್ನು ಪ್ರೇಮದಿಂದ ಕೇಳು. ನಿನ್ನ ದುಃಖಶಮನವಾಗುವುದು.

ಶ್ರೀಕೃಷ್ಣಪರಮಾತ್ಮನು ಯಾವ ಘಳಿಗೆಯಲ್ಲಿ ತನ್ನ ಮನುಷ್ಯ ದೇಹವನ್ನು ಬಿಟ್ಟು ಪರಂಧಾಮಕ್ಕೆ ಹೊರಟನೋ ಅದೇ ಘಳಿಗೆಯಿಂದಲೇ ಕಲಿಗೆ ಸಂಪೂರ್ಣಾಧಿಕಾರ ಬಂದಿತು. ದಿಗ್ವಿಜಯ ಕಾಲದಲ್ಲಿ ಪರೀಕ್ಷಿದ್ರಾಜನು ಈ ಕಲಿಯನ್ನು ನೋಡಿ ಹಿಡಿದುಕೊಂಡು ಶಿಕ್ಷಿಸಲಾರಂಭಿಸುತ್ತಲೇ ಕಲಿಯು ಪರೀಕ್ಷಿತನನ್ನು ಮರೆಹೊಕ್ಕು ಪ್ರಾಣದಾನ ಮಾಡಬೇಕೆಂದು ಬೇಡಿಕೊಂಡನು. ಮೊದಲನೆಯದಾಗಿ ಶರಣಾಗತರನ್ನು ಕೊಲ್ಲುವುದು ಯೋಗ್ಯವಲ್ಲ. ಎರಡನೆಯದಾಗಿ ಕಲಿಯಲ್ಲಿ ಮಹತ್ತರವಾದ

ಗುಣವಿದೆ. ಅದೇನೆಂದರೆ "ಬೇರೆ ಬೇರೆ ಯುಗಗಳಲ್ಲಿ ತಪಸ್ಸಿನಿಂದ, ಯೋಗದಿಂದ, ಸಮಾಧಿಯಿಂದ ಏನೇನು ಫಲಬರುವುದೋ ಅದೆಲ್ಲವೂ ಈ ಕಲಿಯುಗದಲ್ಲಿ ಹರಿ ಕೀರ್ತನೆಯೊಂದರಿಂದಲೇ ಸಾಧ್ಯ ವಾಗವುದು." ಎಂದು ಸಾರಗ್ರಾಹಿಯಾದ ರಾಜನು ಯೋಚಿಸಿ ಅಸಾರವಾದ ಸಂಸಾರದಲ್ಲಿ ಪರಮಾತ್ಮನು ಸಾರಸ್ವರೂಪನಾಗಿರುವಂತೆ ದುರ್ಗುಣಗಳಿಂದ ತುಂಬಿದ ಕಲಿಯಲ್ಲಿರುವ **ಈ ಒಂದೇ ಒಂದು ಅಮೂಲ್ಯವಾದ ಗುಣವಿರುವುದರಿಂದ** ಕಲಿಯನ್ನು ಬಿಟ್ಟುಬಿಟ್ಟನು. ದುಷ್ಕರ್ಮಗಳು ಹೆಚ್ಚುತ್ತಿರುವುದರಿಂದ ಕಲಿಯುಗದಲ್ಲಿ ಪ್ರತಿಯೊಂದು ವಸ್ತುವೂ ಅಕ್ಕಿಯ ಕಾಳಿಲ್ಲದ ಭತ್ತದಂತೆ ಜೊಳ್ಳಾಗು ತ್ತಿರುವುದು.

೧ ಬ್ರಾಹ್ಮಣರು ಧನಲೋಭದಿಂದ–ಜೀವನಕ್ಕಾಗಿ ಮನೆಮನೆ ತಿರುಗುತ್ತಾ ಪುರಾಣ ಹೇಳುತ್ತಿರುವುದರಿಂದ ಅವರಲ್ಲಿನ ಸಾರವು ಹೊರಟುಹೋಯಿತು.

೨ ತೀರ್ಥಕ್ಷೇತ್ರಗಳ ಅಧಿಕಾರಿಗಳು ಕ್ರೂರಿಗಳಾಗಿ ದುರಾಚಾರಿ ಗಳಾಗಿ ಅತಿ ನೀಚ ವೃತ್ತಿಗಿಳಿದು ನಾಸ್ತಿಕರಾಗಿರುವುದರಿಂದ ಅಥವಾ ಇಂತಹ ನಾಸ್ತಿಕರು ತಮ್ಮ ತಮ್ಮ ಪಾಪಕರ್ಮಗಳನ್ನು ಮುಚ್ಚು ವುದಕ್ಕಾಗಿ ಅಂತಹಸ್ಥಳಗಳಲ್ಲಿ ವಾಸಮಾಡುವುದರಿಂದ ತೀರ್ಥ ಕ್ಷೇತ್ರ ಗಳೂ ನಿಸ್ಸಾರವಾದುವು.

೩ ಕಾಮ, ಕ್ರೋಧ, ಲೋಭ, ದುರಾಶೆಗಳಿಂದ ತುಂಬಿದ ಅಂತಃಕರಣವುಳ್ಳವರು ತಪಸ್ವಿಗಳ ವೇಷಧಾರಣೆಮಾಡಿ ಕಪಟ ವರ್ತನೆ ಯಿಂದ ಜನಗಳನ್ನು ಮೋಸಗೊಳಿಸುತ್ತಿರುವುದರಿಂದ ತಪಸ್ಸಿನ ಶಕ್ತಿಯೂ ಹೊರಟುಹೋಯಿತು.

೪ ವಿಷಯ ಚಿಂತನೆಯಿಂದ ಮನಸ್ಸಿನ ಚಾಂಚಲ್ಯವು ಹೆಚ್ಚಾಗಿ ಲೋಭ, ದಂಭ, ನಾಸ್ತಿಕವಾದಗಳು ಹೆಚ್ಚಾಗಿ ಶಾಸ್ತ್ರಗಳನ್ನು ಅನಾದರಣೆಮಾಡಿದುದರಿಂದ ಧ್ಯಾನಯೋಗದ ಫಲವು ಹೋಗುತ್ತಾ

ಬಂದಿತು. ಪಂಡಿತರೆನ್ನಿಸಿಕೊಳ್ಳುವವರು ಎಮ್ಮೆ, ಕೋಣಗಳಂತೆ ವಿಷಯಲಂಪಟರಾಗಿ ತಮ್ಮ ವಂಶವೃದ್ಧಿ ಮಾಡಿಕೊಳ್ಳುವುದರಲ್ಲಿಯೇ ಕೈ ಚಾಚುವರೇ ಹೊರತು ಮುಕ್ತಿಯ ಸಾಧನವಾವುದನ್ನೂ ಅವರರಿಯರು. ನ್ಯಾಯವಾಗಿ ನೋಡಿದರೆ ವಿಷ್ಣು ಭಕ್ತರಾದ ವೈಷ್ಣವರು ಬಹಳ ವಿರಳ. ಸಂಪ್ರದಾಯವನ್ನು ಮುಂದುಮಾಡಿಕೊಂಡು ವ್ಯಾಜ್ಯ ರಗಳೆ ಗಳನ್ನು ಮಾಡುತ್ತಿರುವವರು ಬೇಕಾದಷ್ಟು ಜನಗಳಿರುವರು. ಇದರಿಂದ ವೈಷ್ಣವ ಧರ್ಮದಲ್ಲಿಯೂ ಸಾರವಿಲ್ಲದಂತಾಗಿದೆ. ಹೀಗಾಗಿ ಕಲಿಯುಗದಲ್ಲಿ ಪ್ರತಿಯೊಂದು ವಸ್ತುವೂ ನಿಸ್ಸಾರವಾಗಿ ಹೋಗಿದೆ.

ಸುಂದರಿ! ಇದೆಲ್ಲವೂ ಯುಗ ಧರ್ಮ. ಇದರಲ್ಲಿ ಯಾರದೂ ತಪ್ಪಿಲ್ಲ. ಆದುದರಿಂದ ಪುರುಷೋತ್ತಮನಾದ ಪರಮಾತ್ಮನೂ ಸಹ ಸಮೀಪ ದಲ್ಲಿಯೇ ಇದ್ದುಕೊಂಡು ಇದೆಲ್ಲವನ್ನೂ ಸಹಿಸಿಕೊಂಡಿರುವಾಗ ಹೇಳುವುದೇನು ?

**ಭಕ್ತಿ**—ದೇವರ್ಷಿ ನಾರದರೇ! ತಾವು ನನ್ನ ಭಾಗ್ಯದಿಂದಲೇ ಇಲ್ಲಿಗೆ ಬಂದಿರುವಿರಿ ? ತಾವು ಧನ್ಯರು. ಸಾಧುಗಳ ದರ್ಶನದಿಂದ ಮನುಷ್ಯರ ಇಷ್ಟಾರ್ಥಗಳೆಲ್ಲಾ ಈಡೇರುವುವೆಂಬುದು ನಿಶ್ಚಯ. ತಮ್ಮ ಮುಖ ದಿಂದ ಸ್ವಲ್ಪ ಜ್ಞಾನವನ್ನು ಪಡೆದರೂ ಪ್ರಹ್ಲಾದನು ಮಹಾ ಬಲಶಾಲಿನಿ ಯಾದ ಮಾಯೆಯನ್ನು ಜಯಿಸಿದನು. ತಮ್ಮ ಕೃಪೆಯಿಂದಲೇ ಬಾಲಕ ನಾದ ಧ್ರುವನಿಗೆ ಶಾಶ್ವತವಾದ ಧ್ರುವಪದವು ಪ್ರಾಪ್ತವಾಯಿತು. ಎಲೈ ಲೋಕ ಕಲ್ಯಾಣ ದೀಕ್ಷಾಬದ್ಧನಾದ ಬ್ರಹ್ಮ ಪುತ್ರನೇ! ನಿನಗೆ ನಮಸ್ಕಾರಮಾಡುತ್ತೇನೆ. ನನ್ನನ್ನು ಉದ್ಧರಿಸು!

**ನಾರದ**—ಎಲೈ ಭಕ್ತಿಯೇ! ಸುಮ್ಮನೆ ವ್ಯಸನಪಡುತ್ತಿರುವೆ. ಚಿಂತೆಯಿಂದ ನಿನ್ನ ಆತುರವು ಹೆಚ್ಚುತ್ತಿದೆ. ಶ್ರೀಕೃಷ್ಣಪರಮಾತ್ಮನ ಚರಣಕಮಲ ವನ್ನು ಧ್ಯಾನಿಸು. ನಿನ್ನ ಕಷ್ಟಗಳೆಲ್ಲಾ ದೂರವಾಗುವುವು. ಯಾವ ಪರಮಾತ್ಮನು ಕೌರವರ ಕುಟಿಲ ನೀತಿಯಿಂದ ದ್ರೌಪದಿಯನ್ನು ರಕ್ಷಣೆ

ಮಾಡಿದನೋ, ಮತ್ತು ಯಾವ ಮಹಾಮಹಿಮನ ದಯದಿಂದ ಗೋಪಿಯರು ಉದ್ಧಾರವಾದರೋ, ಆ ಕೃಷ್ಣಪರಮಾತ್ಮನಿಲ್ಲವೇನು ? ದೇವಿ! ನೀನು ಆತನಿಗೆ ಪ್ರಾಣಕ್ಕಿಂತಲೂ ಹೆಚ್ಚಿನ ಪ್ರಿಯಳು. ನೀನು ಕರೆದರೆ ಪರಮಾತ್ಮನು ಎಂತಹವರ ಮನೆಗಾದರೂ ಬರುತ್ತಾನೆ.

ಕೃತ, ತ್ರೇತ, ದ್ವಾಪರಯುಗಗಳಲ್ಲಿ ಜ್ಞಾನ, ವೈರಾಗ್ಯಗಳೇ ಮುಕ್ತಿಗೆ ಸಾಧನವಾಗಿದ್ದುವು. ಆದರೆ ಕಲಿಯುಗದಲ್ಲಿ ಭಕ್ತಿಯೊಂದರಿಂದಲೇ ಸಾಯುಜ್ಯ ಮುಕ್ತಿಯು ಪ್ರಾಪ್ತವಾಗುವುದು. ಇದನ್ನು ಯೋಚಿಸಿಯೇ ಚಿದ್ರೂಪನಾದ ಹರಿಯು ನಿನ್ನನ್ನು ಪ್ರಕಟಮಾಡಿದ್ದಾನೆ. ಸುಂದರಿ! ನೀನು ಪರಮಾನಂದ ಸ್ವರೂಪನಾದ ಬ್ರಹ್ಮನ ಚೈತನ್ಯವಲ್ಲವೇ ? ನೀನು ಶ್ರೀ ಕೃಷ್ಣನಿಗೆ ಪರಮ ಪ್ರಿಯಳಲ್ಲವೇ ? ನೀನು ವೈಕುಂಠ ವಾಸಿನಿಯಾದ ಭಕ್ತಿದೇವಿಯ ಛಾಯಾ ಮೂರ್ತಿಯೆಂಬುದನ್ನು ಮರೆತಿದ್ದೀಯೆ. ನೀನೊಮ್ಮೆ ಕೈಜೋಡಿಸಿಕೊಂಡು "ನಾನೇನು ಮಾಡಲಿ ?" ಎಂದು ಶ್ರೀಕೃಷ್ಣ ಪರಮಾತ್ಮನನ್ನು ಪ್ರಶ್ನೆಮಾಡಿದೆ. ಆಗ ಭಗವಂತನು "ನನ್ನ ಭಕ್ತರನ್ನು ಅನುಗ್ರಹಿಸು." ಎಂದು ಆಜ್ಞೆ ಮಾಡಿದನು. ನೀನೂ ಸಹ ಹರಿಯ ಆಜ್ಞೆಯನ್ನು ಸಂತೋಷದಿಂದಲೇ ಸ್ವೀಕರಿಸಿದೆ. ಇದರಿಂದ ದೇವನು ಪ್ರಸನ್ನನಾಗಿ ಮುಕ್ತಿ ಎಂಬ ದಾಸಿಯನ್ನೂ ಈ ಜ್ಞಾನ, ವೈರಾಗ್ಯರೆಂಬ ಮಕ್ಕಳನ್ನೂ ನಿನಗೆ ಕೊಟ್ಟನು. ನೀನು ಮುಕ್ತಿಯನ್ನೂ ಜ್ಞಾನ ವೈರಾಗ್ಯರುಗಳನ್ನೂ ಜೊತೆಯಲ್ಲಿ ಕರೆದುಕೊಂಡು ಬಂದಿದ್ದೀಯೆ. ಕೃತ ಯುಗದಿಂದ ಪ್ರಾರಂಭಮಾಡಿಕೊಂಡು ದ್ವಾಪರದ ಕೊನೆಯ ವರೆಗೂ ನೀನು ಸುಖಿಯಾಗಿಯೇ ಇದ್ದೆ. ಕಲಿಯುಗದಲ್ಲಿ ನಾಸ್ತಿಕರೂಪವಾದ ರೋಗವು ಬಂದು ಮುಕ್ತಿಯು ದಿನದಿನಕ್ಕೆ ಕ್ಷೀಣವಾಗುತ್ತಾ ಕೊನೆಗೆ ನಿನ್ನ ಆಜ್ಞೆಯಿಂದಲೇ ವೈಕುಂಠಕ್ಕೆ ಹೊರಟು ಹೋದಳು. ಈಗಲೂ ಸಹ ನೀನು ಕರೆದಾಗ ಭೂಲೋಕಕ್ಕೆ ಬಂದು ಪುನಃ ವೈಕುಂಠಕ್ಕೆ ಹೋಗುತ್ತಿರುವಳು. ನೀನು ಪುತ್ರರೂಪದಿಂದ ನಿನ್ನೊಡನೆ ಇಟ್ಟು ಕೊಂಡಿರುವ ಜ್ಞಾನ, ವೈರಾಗ್ಯರುಗಳು ಕಲಿಯ ಪ್ರಭಾವದಿಂದ

ಜನಗಳ ಉಪೇಕ್ಷೆಯಿಂದ ಮಂಡರಾಗಿ ವೃದ್ಧರಾಗಿಬಿಟ್ಟಿದ್ದಾರೆ.

ಭಕ್ತಿದೇವಿ! ನೀನು ಯೋಚಿಸಬೇಡ. ಕಲಿಯುಗಕ್ಕೆ ಸಮಾನವಾದ ಯುಗವೇ ಇಲ್ಲ. ಈ ಕಲಿಯುಗದಲ್ಲಿಯೂ ಸಹ ಮನೆ ಮನೆಯಲ್ಲಿಯೂ ಜನರು ನಿನ್ನನ್ನು ಆದರಿಸುವಂತೆ ನಿಲ್ಲಿಸುತ್ತೇನೆ. ಎಲ್ಲ ಧರ್ಮಕ್ಕಿಂತಲೂ ನಿನ್ನನ್ನು ಹೆಚ್ಚಾಗಿ ತಿಳಿಯುವಂತೆಮಾಡಿ ನಿನ್ನ ಪ್ರಚಾರ ಮಾಡದಿದ್ದರೆ ನಾನು ಹರಿದಾಸನೇ ಅಲ್ಲ! ನಿನ್ನನ್ನು ಆದರಿಸುವ ಜನರು ಪಾಪಿಗಳಾದರೂ ಕಷ್ಟವಿಲ್ಲದೆ ವೈಕುಂಠಕ್ಕೆ ಹೋಗ ಬಲ್ಲರು. ಪ್ರೇಮರೂಪಿಯಾದ ಭಕ್ತಿಯು ಯಾರ ಮನೆಯಲ್ಲಿರುವಳೋ ಅವರು ಸ್ವಪ್ನದಲ್ಲಿಯೂ ಯಮರಾಜನನ್ನು ನೋಡಲಾರರು. ಪ್ರೇತ, ಪಿಶಾಚಿ, ಭೂತ, ರಾಕ್ಷಸಾದಿಗಳಾದೂ ಭಕ್ತನನ್ನು ಮುಟ್ಟಲಾರರು. ತಪಸ್ಸು, ವೇದ, ಜ್ಞಾನ, ಮತ್ತು ಉತ್ತಮ ಕರ್ಮಗಳಿಂದ ಪರಮಾತ್ಮನು ಸಿಕ್ಕುವುದು ಕಷ್ಟ. ದೇವನನ್ನು ಒಲಿಸಿಕೊಳ್ಳಲು ಭಕ್ತಿ ಯೊಂದೇ ಉಪಾಯ. ಗೋಪಿಯರೇ ಇದಕ್ಕೆ ಸಾಕ್ಷಿ. ಸಹಸ್ರಾರು ಜನ್ಮಗಳ ಪುಣ್ಯದಿಂದಲೇ ಭಕ್ತಿಯು ಅಂತಃಕರಣದಲ್ಲಿ ಹುಟ್ಟ ಬೇಕಾದರೆ. ಭಕ್ತಿಗಿಂತ ಹೆಚ್ಚಿನದಿಲ್ಲ. ಭಕ್ತಿಯಿಂದ ಶ್ರೀಕೃಷ್ಣ ಪರಮಾತ್ಮನು ನಮ್ಮೆದುರಿನಲ್ಲಿಯೇ ನಿಲ್ಲುವನು. ಭಕ್ತದ್ರೋಹಿ ಗಳಾದವರು ಲೋಕತ್ರಯಗಳಲ್ಲಿಯೂ ಕಷ್ಟಕ್ಕೊಳಗಾಗುವರು. ಭಕ್ತ ಅಂಬರೀಷನ ನಿಂದೆಯಿಂದ ದೂರ್ವಾಸರೂ ದುಃಖಕ್ಕೊಳಗಾದರು. ವ್ರತ, ತೀರ್ಥಯಾತ್ರೆಗಳು, ಯಜ್ಞ, ಜ್ಞಾನ, ಚರ್ಚೆಗಳು ವ್ಯರ್ಥ ವಾದುವು. **ಭಕ್ತಿಯೊಂದರಿಂದಲೇ ಮುಕ್ತಿಯು ಲಭಿಸುವುದು.**

ನಾರದರಿಂದ ತನ್ನ ಮಾಹಾತ್ಮ್ಯೆಯನ್ನು ಕೇಳುತ್ತಲೇ ಭಕ್ತಿಯ ಮೈಯೆಲ್ಲಾ ಉಬ್ಬಿಹೋಯಿತು. ಬಹು ಸಂತೋಷದಿಂದ ಹೇಳಿದಳು. "ನಾರದರೇ! ನೀವು ಧನ್ಯರು. ನಿಮಗೆ ನನ್ನ ಮೇಲೆ ಅಚಲವಾದ ಪ್ರೀತಿಯಿದೆ. ನಾನು ನಿಮ್ಮನ್ನಾವಾಗಲೂ ಬಿಡುವುದಿಲ್ಲ. ನಿಮ್ಮ ಮನಸ್ಸಿನಲ್ಲಿಯೇ ಅಚಲವಾಗಿ ನಿಲ್ಲುವೆನು. ದಯಾರ್ದ್ರ ಹೃದಯ

ರಾದ ನಿಮ್ಮಿಂದ ಕ್ಷಣಮಾತ್ರದಲ್ಲಿ ನನ್ನ ಚಿಂತೆಯೆಲ್ಲಾ ದೂರ ವಾಯಿತು. ನನ್ನ ಮಕ್ಕಳನ್ನು ಏನಾದರೂಮಾಡಿ ಉದ್ಧರಿಸಿ!

ನಾನು ಭಕ್ತಿಯ ಮಾತಿನಿಂದ ಸಂತುಷ್ಟನಾದೆನು. ಕೈಗಳಿಂದ ಅವರಿಬ್ಬ ರನ್ನೂ ಅಲ್ಲಾಡಿಸಿ ಎಬ್ಬಿಸಲೆತ್ನಿಸಿದೆನು. ಕಿವಿಯಲ್ಲಿ ಬಾಯನ್ನಿಟ್ಟು ಕೊಂಡು 'ಜ್ಞಾ ನ ನೇ ! ಏಳು. ವೈ ರಾ ಗ್ಯ ನೇ! ಏಳು.' ಎಂದು ಎಬ್ಬಿಸಲಾರಂಭಿಸಿದೆನು. ವೇದಮಂತ್ರಗಳನ್ನೂ ವೇ ದಾ ಂತ ವಾಕ್ಯ ಗಳನ್ನೂ ಗೀತಾ ಶ್ಲೋಕಗಳನ್ನೂ ಹೇಳುತ್ತಾ ಅವರಿಬ್ಬರನ್ನೂ ಎಬ್ಬಿಸ ಲೆತ್ನಿಸುತ್ತಿರಲು ಕೊನೆಗೆ ಅವರಿಬ್ಬರೂ ಸ್ವಲ್ಪ ಕಣ್ಣುಬಿಟ್ಟು ಮೇಲಕ್ಕೇಳ ಲೆತ್ನಿಸಿ ಕೈಲಾಗದೆ ಪುನಃ ದೊಪ್ಪನೆ ನೆಲಕ್ಕೆ ಬಿದ್ದುಬಿಟ್ಟು ಕಣ್ಣು ಮುಚ್ಚಿದರು. ಒಣಗಿದ ಕಟ್ಟಿಗೆಯಂತೆ ಅನ್ನಾಹಾರಗಳಿಲ್ಲದೆ ಕಂಗೆಟ್ಟು ಬಳಲಿ ಆಯಾಸಗೊಂಡಿದ್ದ ಇವರಿಬ್ಬರೂ ಪುನಃ ಕಣ್ಣು ಮುಚ್ಚಿದು ದನ್ನು ನೋಡಿ ನನಗೆ ಬಹಳ ಚಿಂತೆಯಾಯಿತು. ಮುಂದೇನು ಮಾಡ ಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ "ಎಲೈ ಮುನಿವರನೇ ! ಯೋಚಿಸ ಬೇಡ. ನಿನ್ನ ಪ್ರಯತ್ನವು ಸಫಲವಾಗುವುದು. ನೀನೊಂದು ಸತ್ಕಾರ್ಯ ವನ್ನು ಮಾಡಬೇಕಾಗುವುದು. ಸಾಧುಶಿರೋಮಣಿಗಳು ನಿನಗೆ ಸಿಕ್ಕು ವರು. ನೀನು ಆ ಸತ್ಕರ್ಮವನ್ನು ಮಾಡುತ್ತಲೇ ಇವರಿಬ್ಬರೂ ಸಚೇತನರಾಗಿ ಇವರ ವೃದ್ಧಾಪ್ಯವು ನೀಗಿ ಇವರಿಗೆ ಯೌವನವು ಬರು ವುದು. ಆಗಲೇ ಭಕ್ತಿಯು ನಾಲ್ಕು ಕಡೆಗೆ ಹಬ್ಬುವುದು." ಎಂದು ಆಕಾಶವಾಣಿಯಾಯಿತು.

ನನಗೆ ಮಿತಿಮೀರಿದ ಆಶ್ಚರ್ಯವಾಯಿತು. "ಇದೇನೀ ಆಕಾಶವಾಣಿ ! ದುಂಡು ಮಾತಿನಲ್ಲಿ ಹೇಳಿ ಬಿಟ್ಟಿತಲ್ಲಾ ! ನಾನೇನನ್ನು ಮಾಡಿದರೆ ಈ ಜ್ಞಾನ, ವೈರಾಗ್ಯರು ಮೋಹನಿದ್ದೆಯಿಂದ ಎದ್ದೇಳುವರು ? ಅಂತಹ ಸತ್ಕರ್ಮವಾವುದು ? ಅದನ್ನು ತೋರಿಸುವ ಸತ್ಪುರುಷರಾರು ?" ಎಂದು ಯೋಚಿಸುತ್ತಾ ತೀರ್ಥಕ್ಷೇತ್ರಗಳನ್ನೂ, ಋಷ್ಯಾಶ್ರಮಗಳನ್ನೂ ಸುತ್ತುತ್ತಾ ಅಲ್ಲಲ್ಲಿ ಸಿಕ್ಕಿದ ತಪಸ್ವಿಗಳನ್ನು ಈ ವಿಷಯವಾಗಿ

ಪ್ರಶ್ನೆಮಾಡುತ್ತಾ ಬಂದೆನು. ನನಗಾರೂ ಸಮಾಧಾನ ಕೊಡಲಾರದೇ ಹೋದರು. ಕೆಲವರು "ಅಸಾಧ್ಯ" ಎಂದು ಹೇಳುತ್ತಾ ಬಂದರು. "ವೇದ ವೇದಾಂತ ಭಗವದ್ಗೀತೆಗಳ ಮಂತ್ರಗಳೇ ಉಪಯೋಗವಾಗದ ಮೇಲೆ—ಸ್ವತಃ ನಾರದರಿಗೇ ಗೊತ್ತಿಲ್ಲದ ಮೇಲೆ ನಮ್ಮಂತಹವರೇನು ಹೇಳಬೇಕು." ಎಂದು ಮುಂತಾಗಿ ಪಿಸುಗುಟ್ಟುತ್ತಾ ಸಾಧು, ಸಂನ್ಯಾಸಿಗಳಾರೂ ನನ್ನ ಸಂಶಯ ನಿವಾರಣೆ ಮಾಡಲಶಕ್ತರಾದುದರಿಂದ ನಿರಾಶನಾಗಿ ತಿರುಗುತ್ತಾ ಕೊನೆಗೆ ಬದರಿಕಾಶ್ರಮಕ್ಕಾದರೂ ಹೋಗೋಣವೆಂದು ಇಲ್ಲಿಗೆ ಬಂದೆನು. ನಿಮ್ಮ ದರ್ಶನವಾಯಿತು. ನಾನು ಧನ್ಯನು. ನೀವು ತಪೋಮೂರ್ತಿಗಳು. ಭಕ್ತಾಗ್ರೇಸರರು. ಸದಾ ಹರಿ ಚಿಂತನೆಯಲ್ಲಿಯೇ ಇರುವಿರಿ. ನೀವು ವೃದ್ಧರಿಗಿಂತಲೂ ವೃದ್ಧರಾದರೂ ಐದು ವರ್ಷದ ಮಕ್ಕಳಂತೆ ಕಾಣುತ್ತಿರುವಿರಿ. ಕಾಲವೂ ವೃದ್ಧಾಪ್ಯವೂ ನಿಮ್ಮ ಸಮೀಪಕ್ಕೆ ಬಾರವು. ನೀವು ಕಣ್ಣು ಬಿಟ್ಟ ಮಾತ್ರಕ್ಕೇ ವೈಕುಂಠದ್ವಾರಪಾಲಕರಾದ ಜಯ ವಿಜಯರು ಭೂಮಿಗೆ ಬಿದ್ದು ಪುನಃ ನಿಮ್ಮ ಅನುಗ್ರಹದಿಂದ ಪರಮಪದವನ್ನು ಹೊಂದಿದರು. ನನ್ನ ಭಾಗ್ಯದಿಂದಲೇ ನಿಮ್ಮ ದರ್ಶನವಾಯಿತು. ಆಕಾಶವಾಣಿಯು ಹೇಳಿದ ಆ ಸತ್ಕರ್ಮವಾವುದು ? ದಯೆಯಿಟ್ಟು ಕೃಪೆಮಾಡಬೇಕು.

**ಸನಕಾದಿಗಳು**—ನಾರದ! ವಿರಕ್ತ ಚೂಡಾಮಣಿ! ಭಕ್ತವರ! ಯೋಚಿಸಬೇಡ! ಭಕ್ತಿಯ ಉದ್ಧಾರಕ್ಕಾಗಿ ನೀನು ಇಷ್ಟು ಕಷ್ಟಪಡುವುದು ನ್ಯಾಯವೇ ? ಭಕ್ತರು ಪರರಿಗಾಗಿಯೇ ಜೀವಧಾರಣೆಮಾಡಿರುವರು. ಋಷಿಗಳು ಲೋಕೋದ್ಧಾರಕ್ಕಾಗಿ ಅನೇಕ ಮಾರ್ಗಗಳನ್ನು ತೋರಿಸಿರುವರು. ಅವೆಲ್ಲವೂ ಶ್ರಮಸಾಧ್ಯಗಳು. ಸ್ವರ್ಗಸುಖಾದಿಗಳನ್ನು ಕೊಡಬಲ್ಲವು. ಆದರೆ ಪರಮಾತ್ಮನು ಸಿಕ್ಕುವ ಮಾರ್ಗವು ಅತ್ಯಂತ ಗೂಢವಾದುದು. ಹರಿಯನ್ನು ಹೊಂದುವ ಮಾರ್ಗವನ್ನು ತೋರಿಸುವ ಮಹಾತ್ಮರು ಸಿಕ್ಕುವುದು ದುರ್ಲಭವೇ ಸರಿ. ಆಕಾಶವಾಣಿಯು ಹೇಳಿದ ಸತ್ಕರ್ಮವನ್ನು ನಿನಗೆ ತಿಳಿಸುತ್ತೇವೆ. ಶಾಂತಚಿತ್ತನಾಗಿ

ರಾದ ನಿಮ್ಮಿಂದ ಕ್ಷಣಮಾತ್ರದಲ್ಲಿ ನನ್ನ ಚಿಂತೆಯೆಲ್ಲಾ ದೂರ ವಾಯಿತು. ನನ್ನ ಮಕ್ಕಳನ್ನು ಏನಾದರೂಮಾಡಿ ಉದ್ಧರಿಸಿ!

ನಾನು ಭಕ್ತಿಯ ಮಾತಿನಿಂದ ಸಂತುಷ್ಟನಾದೆನು. ಕೈಗಳಿಂದ ಅವರಿಬ್ಬ ರನ್ನೂ ಅಲ್ಲಾಡಿಸಿ ಎಬ್ಬಿಸಲೆತ್ನಿಸಿದೆನು. ಕಿವಿಯಲ್ಲಿ ಬಾಯನ್ನಿಟ್ಟು ಕೊಂಡು 'ಜ್ಞಾ ನ ನೇ! ಏಳು. ವೈ ರಾ ಗ್ಯ ನೇ! ಏಳು.' ಎಂದು ಎಬ್ಬಿಸಲಾರಂಭಿಸಿದೆನು. ವೇದಮಂತ್ರಗಳ್ನೂ ವೇ ದಾ ಂತ ವಾಕ್ಯ ಗಳನ್ನೂ ಗೀತಾ ಶ್ಲೋಕಗಳನ್ನೂ ಹೇಳುತ್ತಾ ಅವರಿಬ್ಬರನ್ನೂ ಎಬ್ಬಿಸ ಲೆತ್ನಿಸುತ್ತಿರಲು ಕೊನೆಗೆ ಅವರಿಬ್ಬರೂ ಸ್ವಲ್ಪ ಕಣ್ಣುಬಿಟ್ಟು ಮೇಲಕ್ಕೇಳ ಲೆತ್ನಿಸಿ ಕೈಲಾಗದೆ ಪುನಃ ದೊಪ್ಪನೆ ನೆಲಕ್ಕೆ ಬಿದ್ದುಬಿಟ್ಟು ಕಣ್ಣು ಮುಚ್ಚಿದರು. ಒಣಗಿದ ಕಟ್ಟಿಗೆಯಂತೆ.ಅನ್ನಾಹಾರಗಳಿಲ್ಲದೆ ಕಂಗೆಟ್ಟು ಬಳಲಿ ಆಯಾಸಗೊಂಡಿದ್ದ ಇವರಿಬ್ಬರೂ ಪುನಃ ಕಣ್ಣು ಮುಚ್ಚಿದು ದನ್ನು ನೋಡಿ ನನಗೆ ಬಹಳ ಚಿಂತೆಯಾಯಿತು. ಮುಂದೇನು ಮಾಡ ಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ "ಎಲೈ ಮುನಿವರನೇ! ಯೋಚಿಸ ಬೇಡ. ನಿನ್ನ ಪ್ರಯತ್ನವು ಸಫಲವಾಗುವುದು. ನೀನೊಂದು ಸತ್ಕಾರ್ಯ ವನ್ನು ಮಾಡಬೇಕಾಗುವುದು. ಸಾಧುಶಿರೋಮಣಿಗಳು ನಿನಗೆ ಸಿಕ್ಕು ವರು. ನೀನು ಆ ಸತ್ಕರ್ಮವನ್ನು ಮಾಡುತ್ತಲೇ ಇವರಿಬ್ಬರೂ ಸಚೇತನರಾಗಿ ಇವರ ವೃದ್ಧಾಪ್ಯವು ನೀಗಿ ಇವರಿಗೆ ಯೌವನವು ಬರು ವುದು. ಆಗಲೇ ಭಕ್ತಿಯು ನಾಲ್ಕು ಕಡೆಗೆ ಹಬ್ಬುವುದು." ಎಂದು ಆಕಾಶವಾಣಿಯಾಯಿತು.

ನನಗೆ ಮಿತಿಮೀರಿದ ಆಶ್ಚರ್ಯವಾಯಿತು. "ಇದೇನೀ ಆಕಾಶವಾಣಿ! ದುಂಡು ಮಾತಿನಲ್ಲಿ ಹೇಳಿ ಬಿಟ್ಟಿತಲ್ಲಾ! ನಾನೇನನ್ನು ಮಾಡಿದರೆ ಈ ಜ್ಞಾನ, ವೈರಾಗ್ಯರು ಮೋಹನಿದ್ದೆಯಿಂದ ಎದ್ದೇಳುವರು? ಅಂತಹ ಸತ್ಕರ್ಮವಾವುದು? ಅದನ್ನು ತೋರಿಸುವ ಸತ್ಪುರುಷರಾರು?" ಎಂದು ಯೋಚಿಸುತ್ತಾ ತೀರ್ಥಕ್ಷೇತ್ರಗಳನ್ನೂ, ಋಷ್ಯಾಶ್ರಮಗಳನ್ನೂ ಸುತ್ತುತ್ತಾ ಅಲ್ಲಲ್ಲಿ ಸಿಕ್ಕಿದ ತಪಸ್ವಿಗಳನ್ನು ಈ ವಿಷಯವಾಗಿ

ಬಹು ಜನ್ಮಗಳ ಭಾಗ್ಯದಿಂದಲೇ ಮನುಷ್ಯನಿಗೆ ಸತ್ಸಹವಾಸವು ದೊರಕುವುದು. ಆ ಸಾಧು ಸಂಗದ ಪ್ರಭಾವದಿಂದಲೇ ಅಜ್ಞಾನದಿಂದ ಹುಟ್ಟಿದ ಮೋಹ, ಮದಗಳ ಕತ್ತಲೆಯನ್ನು ನಾಶಮಾಡುತ್ತಾ ವಿವೇಕವು ಉದಯವಾಗುವುದು.

ಈ ಕಥೆಯು ಎಷ್ಟು ಬೋಧಪ್ರದವಾಗಿದೆ! ಇದರಲ್ಲಿ ಕಲಿಯುಗದ ಮಹಿಮೆಯನ್ನೂ ದೋಷಗಳನ್ನೂ ವರ್ಣಿಸುವಾಗ ಬಹು ಕಾಲದ ಹಿಂದೆ ಬರೆದ ಗ್ರಂಥದಲ್ಲಿ ಈ ದಿನ ನಮ್ಮ ಅನುಭವದಲ್ಲಿರುವ ದೋಷಗಳನ್ನು ಎದ್ದು ಕಾಣುವಂತೆ ಚಿತ್ರಿಸಿದ್ದಾರೆ. ಕಥೆಯು ರೋಚಕವಾಗಿದ್ದರೂ ಗೂಢಾರ್ಥ ಗರ್ಭಿತವಾಗಿದೆ. ಜನಗಳ ಅಂತಃಕರಣವು ಸ್ವಾರ್ಥರಹಿತ ಜೀವನಕ್ಕೆ ಎರವಾಗಿ ಮೋಹ, ಮದ, ಅವಿವೇಕ, ತುಚ್ಛ ವಿಷಯಾಭಿಲಾಷೆಗಳ ಕಡೆಗೆ ಓಡುವುದನ್ನು ಗ್ರಂಥಕಾರರು ಆಗಲೇ ಬಹು ಕಾಲದ ಹಿಂದೆಯೇ ಕಂಡು ಹಿಡಿದು ಸುಲಭವಾಗಿ ಅಂತಃಕರಣವನ್ನು ಪವಿತ್ರಗೊಳಿಸುವ ಉಪಾಯವನ್ನು ತೋರಿಸಲೆತ್ನಿಸುತ್ತಿದ್ದಾರೆ. ಯೋಗ, ತಪಸ್ಸುಗಳು ಸಾಮಾನ್ಯ ಮನುಷ್ಯನಿಗೆ ನಿಲುಕಲಾರದ ವಸ್ತುಗಳೆಂದೂ, ಅವುಗಳ ಅನುಸರಣೆಯ ಬೂಟಾಟಿಕೆಗಿಂತ ಮನಸ್ಸಿನ ಪ್ರೇಮಪ್ರವಾಹವನ್ನು ಪರಮಾತ್ಮನಿಗಾಗಿ ಜಗದೀಶನೆಡೆಗೆ ತಿರುಗಿಸಿ ತನ್ನ ಸರ್ವಸ್ವವನ್ನೂ ಪರಮಾತ್ಮನಿಗಾಗಿ ನಿವಾಳಿಮಾಡುವ ಭಕ್ತಿಯೇ ಸರ್ವ ಶ್ರೇಷ್ಠವೆಂದೂ ಹೊಗಳಿದ್ದಾರೆ. ಕಥೆಯ ಸಂವಿಧಾನವೂ ವಿಚಿತ್ರವೇ ಭಕ್ತಿ, ಜ್ಞಾನ, ವೈರಾಗ್ಯಗಳು ಒಂದಕ್ಕೊಂದು ಸರಿತೂಗುವ ಸಾಧನೆಗಳೇ ಆಗಿದ್ದರೂ ಭಕ್ತಿಯನ್ನು ಮುಂದುಮಾಡಿ ಜ್ಞಾನ, ವೈರಾಗ್ಯಗಳನ್ನು ಅದರ ಜೊತೆಗೆ ಜೋಡಿಸುವ ವಿಚಿತ್ರ ಸಂವಿಧಾನವನ್ನಿಲ್ಲಿ ಗುರ್ತುಮಾಡಬಹುದು. ಪವಿತ್ರ ಪ್ರೇಮರೂಪಿಣಿಯಾದ ಭಕ್ತಿಯು ಹುಟ್ಟಿದುದು ದ್ರಾವಿಡದೇಶದಲ್ಲಿ. ಇದು ಸತ್ಯ. ಭಕ್ತಿಪ್ರಧಾನವಾದ ಪ್ರೇಮಜೀವಿಗಳೆಲ್ಲ ಅಲ್ಲಿಂದಲೇ ಬೆಳೆದು ಬಂದವರು. ದ್ರಾವಿಡ ಸಂಪ್ರದಾಯದ ಆಳ್ವಾರರುಗಳೆಲ್ಲಾ ಪ್ರೇಮವನ್ನು ಮುಂದು ಮಾಡಿಕೊಂಡು, ಅದರ ಹೆಚ್ಚುಗಾರಿಕೆಯನ್ನು ಪ್ರಕಾಶಪಡಿಸುವ ಮಹಾಪುರುಷರು. ಅದು ಬೆಳೆದುದು ಕರ್ಣಾಟಕದಲ್ಲಿ. ಇದೂ ಸತ್ಯವೇ. ಮಹಾರಾಷ್ಟ್ರದ ವಿಚಾರಮಾಲೆಯ ಕೈಸಿಕ್ಕಿ ವಿಚಾರಶಕ್ತಿಯೂ, ತರ್ಕವಾದವೂ ಬಂದಂತೆಲ್ಲಾ ಸಗುಣ ಸೇವೆಯಲ್ಲಿ, ಮೂರ್ತಿಪೂಜೆಯಲ್ಲಿ ಅನಾದರಣೆಯು

ಹುಟ್ಟುವುದು ಸ್ವಾಭಾವಿಕ. ಬೃಂದಾವನದಲ್ಲಿ ಅಂಥ ಶ್ರದ್ಧೆಯು--ಮೂಢ ಭಕ್ತಿಯು ಎದ್ದು ಕಾಣುತ್ತದೆ. ಆದರೆ ಅದು ನಾಸ್ತಿಕವಾದಕ್ಕಿಂತ ಉತ್ತಮ ವಿಷಯವಾಸನೆಯಿಂದ ಪರಿಪ್ಲುತವಾದ ಸ್ವಾರ್ಥ ಜೀವನದ ಬೆಡಗನ್ನು ಹಿಂದೆ ಹಾಕಿ ಮೂಢಭಕ್ತಿಯೇ ಆದರೂ ತನ್ನ ಆರಾಧ್ಯದೇವನಿಗಾಗಿ ತ್ಯಾಗ, ಸೇವೆಗಳನ್ನು ಸಲ್ಲಿಸಬೇಕೆಂಬ ಮನೋಭಾವನೆಯಿಂದೊಡಗೂಡಿದ ಭಕ್ತಿಯು ಬೃಂದಾವನದಲ್ಲಿ ಪ್ರಕಾಶಗೊಂಡಿತು. ಆದರೆ ಪರಮೇಶ್ವರನ ಸರ್ವೇಶ್ವರತ್ವ ಸರ್ವನಿಯಂತೃತ್ವ, ಸರ್ವವ್ಯಾಪಕತ್ವಗಳ ವಿಶಾಲಭಾವನೆಯಿಂದೊಡಗೂಡಿದರ ಭಕ್ತಿಯು ಸುಪುಷ್ಟವಾಗಿ ಮಾಯೆಯ ಮೋಹಕ್ಕೆ ಸಿಕ್ಕದೆ ಮನುಷ್ಯನು ತನ್ನ ಜನ್ಮ ಸಾರ್ಥಕತೆ ಮಾಡಿಕೊಂಡು ಸಹಜ ಶಾಂತಿಯನ್ನನುಭವಿಸಬಹುದೆಂಬ ವಾತವು ಈ ಭಾಗವತ ಮಾಹಾತ್ಮ್ಯದಿಂದ ಚೆನ್ನಾಗಿ ತಿಳಿಯಬರುವುದು.

ಭಕ್ತಿಗೆ ದಾಸಿಯು ಮುಕ್ತಿ. ಇದು ಎಲ್ಲಕ್ಕಿಂತಲೂ ವಿಚಿತ್ರ. ಮುಕ್ತಿ ಎಂದೂ ಭಕ್ತಿಯ ದಾಸಿಯಾಗಲಾರಳು. ಜ್ಞಾನ, ವೈರಾಗ್ಯಗಳಿಂದೊಡಗೂಡಿದ ಭಕ್ತಿಯಿಲ್ಲದೆ ಮುಕ್ತಿ ಸಿಕ್ಕುವುದೂ ದುರ್ಲಭವೇ. ಈ ಹಿನ್ನೆಲೆಯನ್ನನುಸರಿಸಿ ಭಾಗವತದ ಭಾವವನ್ನು ಪ್ರಕಾಶಪಡಿಸಲೆತ್ನಿಸುವೆವು.



# ಪ್ರಥಮ ಕಿರಣ

---

ಜನ್ಮಾದ್ಯಸ್ಯ ಯತೋಽನ್ವಯಾದಿತರತಃ
ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ
ಮುಹ್ಯನ್ತಿ ಯತ್ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ
ಯತ್ರ ತ್ರಿಸರ್ಗೋಽಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ
ಸತ್ಯಂ ಪರಂ ಧೀಮಹಿ ॥

ಅಸ್ಯ—ಈ ಜಗತ್ತಿನ, ಜನ್ಮಾದಿ—ಉತ್ಪತ್ತಿ, ಸ್ಥಿತಿ, ಲಯಾದಿಗಳು, ಯತಃ—ಯಾವ ಪರಮಾತ್ಮನಿಂದ ಉಂಟಾಗುತ್ತವೆಯೆಂದು ಅನ್ವಯಾತ್—ಅನ್ವಯಪ್ರಮಾಣದಿಂದಲೂ, ಇತರತಃ ಚ—ವ್ಯತಿರೇಕ ಪ್ರಮಾಣದಿಂದಲೂ ಸಿದ್ಧವಾಗುವುದೋ, ಯಃ—ಯಾವನು, ಅರ್ಥೇಷು—ಪರಮಾರ್ಥ ವಿಚಾರಗಳಲ್ಲಿ, ಜಗತ್ತಿನ ಸೃಷ್ಟ್ಯಾದಿ ಕಾರ್ಯಗಳಲ್ಲಿ, ಅಭಿಜ್ಞಃ—ಸರ್ವಜ್ಞನಾಗಿದ್ದಾನೆಯೋ, ಮತ್ತು ಸ್ವರಾಟ್—ಸ್ವಯಂ ಪ್ರಕಾಶನಾಗಿದ್ದಾನೋ ಯಃ—ಯಾವ ಪರಮಾತ್ಮನು ಸೃಷ್ಟಿಯ ಆದಿಯಲ್ಲಿ, ಆದಿಕವಯೇ—ಬ್ರಹ್ಮನಿಗೋಸ್ಕರ, ಬ್ರಹ್ಮ—ಸಮಸ್ತ ವೇದವನ್ನು, ಹೃದಾ—ಮನಸ್ಸಿನಿಂದಲೇ, ತೇನೇ—ವಿಸ್ತಾರವಾಗಿ ತಿಳಿಸಿದನೋ, ಸೂರಯಃ—ಜ್ಞಾನಿಗಳೂ ಕೂಡ, ಯತ್—ಯಾವ ಪರಮಾತ್ಮನ ಮಹಿಮೆಯನ್ನು ತಿಳಿಯುವುದರಲ್ಲಿ, ಮುಹ್ಯಂತಿ—ಮೂಢರಾಗುತ್ತಾರೋ, ತೇಜೋವಾರಿಮೃದಾಂ—ಬೆಳಕು, ನೀರು, ಮಣ್ಣು, ಇವುಗಳ, ವಿನಿಮಯಃ—ಪರಸ್ಪರ ವ್ಯತ್ಯಾಸವು (ಪೃಥಿವ್ಯಾದಿ ಪಂಚಭೂತಗಳ ಪರಸ್ಪರ ಸೇರುವಿಕೆಯು) ಯಥಾ—ಹೇಗೋ, ತಥಾ—ಹಾಗೆಯೇ, ಯತ್ರ—ಯಾವ ಈಶ್ವರನಲ್ಲಿ, ತ್ರಿಸರ್ಗಃ—ಸತ್ವ, ರಜ, ತಮೋಗುಣಗಳ ಸೇರುವಿಕೆಯ ರೂಪವಾದ ಈ ಪ್ರಪಂಚದ ಸೃಷ್ಟಿಯು, ಮೃಷಾ—ಸುಳ್ಳಾಗಿರುವುದೋ,

ಯಾವ ಪರಮಾತ್ಮನು, ಸ್ವೇನ— ತನ್ನದಾದ, ಧಾಮ್ನಾ— ಮಹಿಮೆಯಿಂದ, (ತೇಜಸ್ಸಿನಿಂದ) ನಿರಸ್ತಕುಹಕಂ— ನಾಶಮಾಡಲ್ಪಟ್ಟ ಮಾಯಾವ್ಯಾಪಾರವುಳ್ಳವನಾಗಿದ್ದಾನೋ, ಅಂತಹ, ಸತ್ಯಂ— ತ್ರಿಕಾಲಾಬಾಧ್ಯನಾದ, (ಉತ್ಪತ್ತಿ, ವಿನಾಶಗಳಿಲ್ಲದಿರುವ) ಪರಂ–ಸತ್ಯಜ್ಞಾನಾನಂದ ಸ್ವರೂಪನಾದ ಪರಮಾತ್ಮನನ್ನು, ಸದಾ— ಯಾವಾಗಲೂ (ಕಾಲತ್ರಯಗಳಲ್ಲಿಯೂ) ಧೀಮಹಿ— ಧ್ಯಾನಿಸುತ್ತೇವೆ.

ವ್ಯಾಸ ಮಹರ್ಷಿಗಳು, ಅನೇಕ ಶಾಸ್ತ್ರ, ಪುರಾಣಗಳನ್ನು ಬರೆದರೂ ಚಿತ್ತ ಶಾಂತಿಯಾಗಲಿಲ್ಲ. ಇನ್ನೂ ತಮ್ಮ ಗ್ರಂಥ ರಚನೆಯಲ್ಲಿ ಸಂಪೂರ್ಣ ಲೋಕೋಪಕಾರ ಮಾಡುವ ವಸ್ತುವೊಂದು ಕಡಿಮೆ ಯಾಗಿದೆ ಯೆಂದೇ ಅನ್ನಿಸುತ್ತಿತ್ತು. ಕಲಿಯುಗದಲ್ಲಿನ ಜನಸಾಮಾನ್ಯರಿಗೆ ಮೋಕ್ಷ ಪ್ರಾಪ್ತಿಗಾಗಿ ಕೊಡಬಲ್ಲ ಕೊನೆಯ ಉಪಹಾರ ವಾವುದೆಂದು ಯೋಚಿಸುತ್ತಿರುವಾಗ ನಾರದರು ಅಲ್ಲಿಗೆ ಬಂದರು. ಅವರಲ್ಲಿ ತಮ್ಮ ಚಿಂತೆಯನ್ನು ನಿವೇದನ ಮಾಡಿದ ನಂತರ ಅವರ ಅಭಿಪ್ರಾಯದಂತೆ ಭಾರತದಲ್ಲಿ ಧರ್ಮ, ನೀತಿ, ಜ್ಞಾನಗಳನ್ನು ಸಾಕಾದಷ್ಟು ವರ್ಣಿಸಿದ್ದರೂ ಪರಮಾತ್ಮನ ಮಹಿಮೆಯನ್ನು ಚೆನ್ನಾಗಿ ವರ್ಣಿಸಲಿಲ್ಲವೆಂಬ ಅರಿವಾದಮೇಲೆ ಬರೆದ ಗ್ರಂಥವು ಇದು.

ಬ್ರಹ್ಮ ಸೂತ್ರಗಳಲ್ಲಿರುವ ಮೊದಲನೆಯ ಮಂಗಳಾಚರಣೆಯನ್ನು ಬಿಟ್ಟರೆ ಪ್ರಾರಂಭವಾಗುವ "ಜನ್ಮಾದ್ಯಸ್ಯಯತಃ" ಎಂಬ ಸೂತ್ರವನ್ನೇ ಈ ಗ್ರಂಥಕ್ಕೆ ಮಂಗಳರೂಪವಾಗಿ ಆರಂಭಿಸಿದ್ದಾರೆ. ವೇದಮಾತೆಯಾದ ಗಾಯತ್ರಿಯ ಅರ್ಥವೇ ಬರುವಂತೆ 'ಸತ್ಯಂ ಪರಂ ಧೀಮಹಿ' ಎಂದು ಕೊನೆ ಮುಟ್ಟಿಸಿದ್ದಾರೆ. ಸರ್ವವ್ಯಾಪಿಯಾದ— ಪರಮಾತ್ಮ ವಸ್ತುವನ್ನು ವರ್ಣಿಸುವುದಕ್ಕೆ ನಮ್ಮ ಶಾಸ್ತ್ರಕಾರರು ತಟಸ್ಥಲಕ್ಷಣ ಮತ್ತು ಸ್ವರೂಪ ಲಕ್ಷಣ ಎಂಬ ಎರಡು ಕ್ರಮಗಳನ್ನು ಗುರ್ತಿಸಿದ್ದಾರೆ. ಅದನ್ನೇ ಸುಲಭವಾದ ಭಾಷೆಯಲ್ಲಿ ಹೇಳುವುದಾದರೆ ವಾಚ್ಯಾರ್ಥ ಮತ್ತು ಲಕ್ಷ್ಯಾರ್ಥಗಳೆಂದು ತಿಳಿಯಬಹುದು. ವಾಚ್ಯಾರ್ಥ ವೆಂಬುದು ಶಬ್ದದ ಹೊರಗಿನ ಅರ್ಥವನ್ನೇ ಸಾಮಾನ್ಯವಾದ ರೀತಿಯಲ್ಲಿ ಗುರ್ತಿಸುವುದು. ಲಕ್ಷ್ಯಾರ್ಥವೆಂಬುದು ಆ ಶಬ್ದದ ಆಧಾರದಿಂದ ಸಾಮಾನ್ಯವಾಗಿ ಸೂಚಿತವಾಗದಿರುವ ಗೂಢಾರ್ಥವನ್ನು ಗುರ್ತುಮಾಡುವುದು. ಈ ಮಂಗಳಾಚರಣೆಯ ಶ್ಲೋಕದಲ್ಲಿ ಪರಬ್ರಹ್ಮನನ್ನು ಸ್ತೋತ್ರಮಾಡುತ್ತಾರೆ.

ನಮ್ಮ ದೃಷ್ಟಿಗೆ ಆತನು ಎರಡು ರೂಪದಿಂದ ಪ್ರಕಟನಾಗಿ ಕಾಣುತ್ತಾನೆ. **ಒಂದು ಮಾಯಾಯುಕ್ತ ಚೈತನ್ಯ, ಮತ್ತೊಂದು ಮಾಯಾ ಮುಕ್ತ ಚೈತನ್ಯ.** ಮಾಯಾಯುಕ್ತ ಚೈತನ್ಯನನ್ನು ಅಥವಾ ಜಗದ್ರೂಪನಾದ ಜಗದೀಶನನ್ನು ಗುರ್ತಿಸುವುದು ವಾಚ್ಯಾರ್ಥ. ಮಾಯಾಮುಕ್ತ ಚೈತನ್ಯನನ್ನು ಅಂದರೆ ನಾಮರೂಪಗಳ ತೋರಿಕೆಯ ಜಗತ್ತಿನೊಳಗಿದ್ದು ಅದಕ್ಕೆ ಸಿಕ್ಕದೆ ಅದರೊಳಗೂ ಹೊರಗೂ ವ್ಯಾಪ್ತವಾಗಿರುವ **ಸರ್ವ ಸ್ವತಂತ್ರ ನಿರ್ಗುಣ ಪರಬ್ರಹ್ಮನನ್ನು ಗುರ್ತಿಸುವುದು ಲಕ್ಷ್ಯಾರ್ಥ.** ಬುದ್ಧಿವೃತ್ತಿಗೆ ಪ್ರವರ್ತಕನಾದ, ಒಮ್ಮೆ ಸತ್ಯಸ್ವರೂಪವಾಗಿಯೂ, ಒಮ್ಮೆ ಅಸದ್ರೂಪವಾಗಿಯೂ ತೋರುತ್ತಿರುವ ಜಗತ್ತನ್ನು ತನ್ನ ಧಿಷ್ಠಾನದಿಂದ ಸತ್ಯಸ್ವರೂಪವಾಗಿ ಮಾಡುವ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದ ಪರಬ್ರಹ್ಮನನ್ನು ಸ್ತೋತ್ರಮಾಡುತ್ತೇವೆ, ಎಂಬುದು ಈ ಮಂಗಳಾಚರಣೆಯ ಅರ್ಥ.

ವಾಚ್ಯಾರ್ಥದಿಂದ ಇದನ್ನು ಈ ರೀತಿ ಗುರ್ತಿಸಬಹುದು. ಯಾವ ಪರಮಾತ್ಮನಿಂದ ಈ ತೋರಿಕೆಯ ಜಗತ್ತಿನ ಜನ್ಮ, ರಕ್ಷಣೆ, ಮತ್ತು ಸಂಹಾರಗಳಾಗುತ್ತವೆಯೋ, ಆ ಜಗತ್ಸೃಷ್ಟಿಯ ಆದಿಕಾರಣನಾದ ಪರಬ್ರಹ್ಮನನ್ನು ಧ್ಯಾನಮಾಡುತ್ತೇವೆ. ಆತನು ಸಮಸ್ತ ಕಾರ್ಯಗಳಲ್ಲಿಯೂ ಸತ್ಸ್ವರೂಪದಿಂದ ಸಂಬಂಧವುಳ್ಳವನಾಗಿದ್ದಾನೆ; ಅಥವಾ ಅನ್ವಯವುಳ್ಳವನಾಗಿದ್ದಾನೆ. ಮತ್ತು ಅಕಾರ್ಯಗಳಲ್ಲಿ ವ್ಯತಿರೇಕನಾಗಿದ್ದಾನೆ, ಅಂದರೆ ಸೃಷ್ಟಿಯ ಎಲ್ಲಾ ಪದಾರ್ಥಗಳಲ್ಲಿ ಅಥವಾ ಕಾರ್ಯಗಳಲ್ಲಿ ಆತನು ಸತ್ಸ್ವರೂಪದಿಂದ ವ್ಯಾಪಿಸಿದ್ದಾನೆ. ಎನ್ನುವುದರಿಂದ ಈತನ ಅಸ್ತಿತ್ವವನ್ನು ಗುರ್ತಮಾಡುತ್ತೇವೆ. **ಆಕಾಶ ಕುಸುಮ, ಬಂಜೆಯ ಮಗ** ಮುಂತಾದ ಅಕಾರ್ಯಗಳಲ್ಲಿ ಆತನ ಸಂಬಂಧವಿಲ್ಲ. ಅಥವಾ ಮಣ್ಣು, ಬಂಗಾರ ಮುಂತಾಗಿರುವ ಕಾರಣಗಳಿಂದಲೇ ಗಡಿಗೆ, ಒಡವೆ, ಮುಂತಾದ ಕಾರ್ಯಗಳ ಸಂಬಂಧವಿದೆ. ಮತ್ತು ವ್ಯತಿರೇಕವಿದೆ. ಹೇಗೆಂದರೆ ಮಣ್ಣು, ಬಂಗಾರ ಮುಂತಾದುವುಗಳು ಸತ್ ಸ್ವರೂಪಗಳಾಗಿವೆ. ಅವುಗಳಿಂದ ಗಡಿಗೆ, ಒಡವೆ, ಮುಂತಾದ ಕಾರ್ಯಗಳು ಅಧಿಷ್ಠಾನವಾಗಿವೆ. ಆದರೆ ಅವುಗಳು ಇವುಗಳಿಂದ ಬೇರೆಯಾಗಿವೆ. ಏಕೆಂದರೆ ಗಡಿಗೆ, ಒಡವೆ, ಮುಂತಾದ ಕಾರ್ಯಗಳು ಇಲ್ಲದೇ ಇದ್ದರೂ ಅವುಗಳ

ಕಾರಣಗಳಾದ ಮಣ್ಣು ಬಂಗಾರಗಳು ಅಸತ್ಯವಾಗುವುದಿಲ್ಲ. ಹಾಗೆಯೇ ಕಾರಣ ರೂಪನಾದ ಬ್ರಹ್ಮನಿಗೆ ಕಾರ್ಯರೂಪವಾದ ಪ್ರಪಂಚದ ಸಂಬಂಧವೂ, ವ್ಯತಿರೇಕವೂ ಇದೆ. ಕಾರಣರೂಪನಾದ ಪರಬ್ರಹ್ಮನು ಸತ್ಸ್ವರೂಪನು. ಕಾರ್ಯರೂಪವಾದ ಜಗತ್ತು ಆತನಲ್ಲಿ ಅಧಿಷ್ಠಿತವಾಗಿದೆ. ಆದರೆ ಆ ಬ್ರಹ್ಮನು ಈ ಪ್ರಪಂಚದೊಳಗೆ ಸಿಕ್ಕಿಲ್ಲ. ಇದರಿಂದ ಬೇರೆಯಾಗಿದ್ದಾನೆ. ಕಾರ್ಯ ರೂಪವಾದ ಜಗತ್ತಿಲ್ಲದಂತೆ ಆದರೂ, ಹೋದರೂ, ಕಾರಣ ರೂಪವಾದ ಸತ್ಸ್ವರೂಪವು ಇದ್ದೇ ಇದೆ.

ಲಕ್ಷ್ಯಾರ್ಥವನ್ನು ಗುರ್ತಿಸುವುದಾದರೆ ಆ ಪರಬ್ರಹ್ಮವು ಸತ್ಯ. ಮೃತ್ತಿಕಾದಿಗಳ ರೂಪಾಂತರವಾದ ಗಾಜುಮುಂತಾದುವುಗಳಲ್ಲಿ ತೋರುವ ಬೆಳಕು, ಸೂರ್ಯನ ತೇಜಸ್ಸಿನಿಂದ ಮೋಸಗೊಳಿಸುವ ಬಿಸಿಲುಕುದುರೆ ಇವುಗಳು ಅಧಿಷ್ಠಾನದ ಸತ್ಯತ್ವದಿಂದ ಸತ್ಯವಾಗಿಯೇ ತೋರುವುವು. ಹಾಗೆಯೇ ಆ ಬ್ರಹ್ಮದಲ್ಲಿ ಅಧಿಷ್ಠಿತವಾದ ಮಾಯೆಯ ಮೂರು ಗುಣಗಳ ಗುಂಪು (ಇಂದ್ರಿಯಗಳು ಇಂದ್ರಿಯಾಧಿಷ್ಠಾತೃಗಳಾದ ದೇವತೆಗಳು, ಪಂಚ ತನ್ಮಾತ್ರೆಗಳು ಮುಂತಾದುವುಗಳು) ವಸ್ತುತಃ ಅಸತ್ಯವಾದರೂ ಬ್ರಹ್ಮಸತ್ಯತ್ವದ ಆಧಾರದಿಂದ ಸತ್ಯವಾಗಿಯೇ ತಿಳಿಯಲ್ಪಡುತ್ತವೆ. ಅಂದರೆ ಆ ಚೈತನ್ಯರೂಪದ ಸತ್ತೆಯು ಈ ಜಡಸರ್ಗವನ್ನು ಚೈತನ್ಯವಾಗಿಯೇ ಮಾಡುತ್ತಿದೆ. ಅಥವಾ ಗಾಜಿನಲ್ಲಿ ತೋರುವ ತೇಜವೂ, ತೇಜಸ್ಸಿನಲ್ಲಿ ತೋರುವ ಜಲದ ಭ್ರಾಂತಿಯೂ ಮಿಥ್ಯವಾಗಿರುವಂತೆ **ಸರ್ವವ್ಯಾಪಿಯಾದ ಶುದ್ಧ ಸಚ್ಚಿದಾನಂದಾದ್ವಿತೀಯ ಬ್ರಹ್ಮವೊಂದೇ ಸತ್ಯ. ಉಳಿದವುಗಳೆಲ್ಲಾ ಅಸತ್ಯ.** ಇಂತಹ ಪರಬ್ರಹ್ಮನನ್ನು ಧ್ಯಾನಮಾಡುತ್ತೇವೆ.

**ಈ ಮಂಗಳಾಚರಣೆಯಿಂದ ಪ್ರಾರಂಭವಾಗಿರುವುದು ಭಾಗವತ ಮಹಾಪುರಾಣ.** ಇದರಲ್ಲಿರುವ ಕಥೆಯೂ ತೋರಿಕೆಯ ಜಗತ್ತಿನಂತೆ. ಅದರ ಭಾವವು ಸತ್ಯ, ಅಮರ. ಪರಬ್ರಹ್ಮದಂತೆ. ಸಗುಣ ರೂಪದಲ್ಲಿ ತೋರುವ ನಿರ್ಗುಣಪರಬ್ರಹ್ಮವನ್ನೇ ಆಧಾರವಾಗಿಟ್ಟುಕೊಂಡು ರಚಿತವಾದ, ಈ ಮಹಾ ಗ್ರಂಥದಲ್ಲಿ ಮಣ್ಣುತಿನ್ನುವ ಮಗುವಿಗೆ ಹಣ್ಣನ್ನು ಕೊಟ್ಟು ಮಣ್ಣಿನ

ಭ್ರಾಂತಿಯನ್ನು ಹೋಗಲಾಡಿಸಿ, ನಂತರ ವಿಚಾರ ದೃಷ್ಟಿಯಿಂದ, ಹಣ್ಣಿನ ರಸವು ಅವಕ್ಕೆ ಹೆಚ್ಚಿನ ರಸ ಶಕ್ತಿಯಲ್ಲಿ ಅಡಕವಾಗಿರುವುದೆಂಬುದನ್ನು ತೋರಿಸುವ ಪಾರದಂತೆ, ಪರಮಾತ್ಮನ ಅದ್ಭುತ ಲೀಲಾವರ್ಣನೆಯ ಕಥೆಯ ಬೆಡಗಿನಲ್ಲಿ ಅಶಾಶ್ವತವಾದ ಇಂದ್ರಿಯಸುಖಗಳ ಆಶೆಯನ್ನು ತೂರಿದು, ಸಹಜ ಸುಖಸ್ವರೂಪನಾದ ಸಗುಣಬ್ರಹ್ಮನಲ್ಲಿ ಪವಿತ್ರ ಪ್ರೇಮವನ್ನೆಲ್ಲಾ ಧಾರೆಯೆರೆದು ಸ್ವಾರ್ಥರಹಿತ ಶುದ್ಧಾಂತಃಕರಣದ ಸಹಾಯದಿಂದ ಸಗುಣರೂಪನಲ್ಲಿ ನಿರ್ಗುಣವನ್ನು, ನಿರ್ಗುಣವೇ ಸಗುಣವಾಗಿ ಭಕ್ತನ ಇಷ್ಟಾರ್ಥ ಸಿದ್ಧಿಗಾಗಿರುವುವೆಂಬುದನ್ನು, ತೋರಿಸುವುದಕ್ಕಾಗಿಯೇ ಈ ಗ್ರಂಥವು ಸಿದ್ಧವಾಗಿರುವುದು.

ಇದರ ಪ್ರಾರಂಭವನ್ನು ಅಂದರೆ ಕಥಾಸರಣಿಯನ್ನು ಗುರ್ತಿಸುವುದಕ್ಕೆ ಮುಂಚೆ ತ್ಯಾಗಮೂರ್ತಿಯಾದ ಶುಕಮಹರ್ಷಿಯ ಮಹಿಮೆಯ ವರ್ಣನೆಯ ರುಚಿಯನ್ನು ಸ್ವಲ್ಪ ಸವಿದು ಆನಂದಿಸಬಹುದು.

**ನಿಗಮಕಲ್ಪತರೋರ್ಗಲಿತಂ ಫಲಂ**
**ಶುಕಮುಖಾದಮೃತದ್ರವಸಂಯುತಮ್।**
**ಪಿಬತ ಭಾಗವತಂ ರಸಮಾಲಯಂ**
**ಮುಹುರಹೋ ರಸಿಕಾ ಭುವಿ ಭಾವುಕಾಃ ॥**

[ಭಾ॥ ಸ್ಕಂ॥ ೧। ಅ॥ ೫। ಶ್ಲೋ॥ ೩। ]

ಭಾಗವತವೆಂಬ ಫಲವು ವೇದ ಅಥವಾ ವೇದಾಂತ ರೂಪವಾದ, ಕಲ್ಪತರುವಿನಿಂದ ಹುಟ್ಟಿ, ಚೆನ್ನಾಗಿ ಪಕ್ವವಾಗಿದೆ. ಪಕ್ವವಾದ ಹಣ್ಣನ್ನು ಮಾತ್ರ ಗಿಣಿಯು ಕುಕ್ಕುವಂತೆ, ಗಿಣಿ ಕುಕ್ಕಿದ ಹಣ್ಣನ್ನು ಅತ್ಯಂತ ಮಧುರವಾದುದೆಂದು ಗುರ್ತುಮಾಡುವಂತೆ, ಶುಕ ಮಹರ್ಷಿಯಿಂದ (ಗಿಣಿಯಿಂದ) ರಸಾಸ್ವಾದನೆ ಮಾಡಲ್ಪಟ್ಟ, ಆತನ ಅನುಭವದಿಂದ ಪೂರ್ಣವಾದ ಈ ಗ್ರಂಥದ ಸವಿಯನ್ನು ಭಾವುಕರಾದ, ಶುದ್ಧಾಂತಃಕರಣದಿಂದ ತಮ್ಮ ಪ್ರೇಮ ಪ್ರವಾಹವನ್ನೇ ಪರಮಾತ್ಮನೆಡೆಗೆ ಹರಿಯುವಂತೆ ಮಾಡಬಲ್ಲ ಧೀರರಾದ ರಸಿಕರೇ, ನಿಷ್ಕಾಮ ಭಕ್ತರೇ ಇದರ ರಸವನ್ನು ಚೆನ್ನಾಗಿ ಅನುಭವಿಸಬಲ್ಲರು.

ಶುಕಮಹರ್ಷಿಯ ಯೋಗ್ಯತೆಯನ್ನು ಗುರ್ತುಮಾಡುವ ಶ್ಲೋಕವನ್ನು ಇಲ್ಲಿ ಕೊಡುತ್ತಿದ್ದೇವೆ.

**ದೃಷ್ಟ್ವಾನುಯಾಂತಮೃಷಿಮಾತ್ಮಜಮಪ್ಯನಗ್ನಮ್**
**ದೇವ್ಯೋ ಹ್ರಿಯಾ ಪರಿದಧುರ್ನ ಸುತಸ್ಯ ಚಿತ್ರಮ್ ।**
**ತದ್ವೀಕ್ಷ್ಯ ಪೃಚ್ಛತಿ ಮುನೌ ಜಗದುಸ್ತವಾ**
**ಸ್ತ್ರೀಪುಂಭಿದಾ ನ ತು ಸುತಸ್ಯ ವಿವಿಕ್ತದೃಷ್ಟೇಃ ॥**

ಶುಕಮಹರ್ಷಿಯು ಶುದ್ಧ ಜ್ಞಾನಿ. ಜನ್ಮದಿಂದಲೇ ಅಧ್ಯಾತ್ಮಾನುಭವ. ವನ್ನು, ಅವಧೂತಸ್ಥಿತಿಯನ್ನು, ಪಡೆದ ಮಹಾತ್ಮನು. ಆತನು ವೈರಾಗ್ಯದ ಭರದಿಂದ ಇದ್ದಕ್ಕಿದ್ದಂತೆಯೇ ಆಶ್ರಮದಿಂದ ಹೊರಟನು. ಮೈ ಮೇಲೆ ಬಟ್ಟೆಯು ಒಂದು ತುಂಡಾದರೂ ಇಲ್ಲ. ವ್ಯಾಸರೂ ಸಹ ಮಗನ ಮೋಹವನ್ನು ಬಿಡಲಾರದೆ 'ಮಗನೇ! ಮಗನೇ!' ಎಂದು ಕೂಗುತ್ತಾ ಆತನನ್ನು ಹಿಂಬಾಲಿಸಿದರು. ಮಾರ್ಗಮಧ್ಯದಲ್ಲಿ ದೇವತಾ ಸ್ತ್ರೀಯರು ಮಾನಸ ಸರೋವರದಲ್ಲಿ ಆಟವಾಡುತ್ತಾ ನಗ್ನರಾಗಿ ಸ್ನಾನಮಾಡುತ್ತಿದ್ದರು. ಶುಕನು ಅವರ ಸಮೀಪದಲ್ಲಿಯೇ ಹೋದರೂ ಅವರು ಲಕ್ಷ್ಯ ಕೊಡಲಿಲ್ಲ. ಆತನ ಹಿಂದೆಯೇ ವ್ಯಾಸ ಮಹರ್ಷಿಗಳು ಸಮೀಪಕ್ಕೆ ಬಂದುದನ್ನು ನೋಡಿ ಬೇಗ ಬೇಗನೇ ದಡದಲ್ಲಿದ್ದ ತಮ್ಮ ಸೀರೆಗಳನ್ನು ಸುತ್ತಿಕೊಳ್ಳಲಾರಂಭಿಸಿದರು. ವ್ಯಾಸರಿಗೆ ಇವರನ್ನು ನೋಡಿ ನಗು ಬಂದಿತು. ಅವರನ್ನು ನೋಡಿ ಹೇಳಿದರು 'ಸ್ತ್ರೀಯರೇ! ನಾನು ಮುದುಕ; ನನ್ನ ಮಗನು ಯುವಕ. ಅವನಿಗೆ ಮೈ ಮೇಲೆ ಬಟ್ಟೆಯಿಲ್ಲ. ಅವನು ನಿಮ್ಮ ಮುಂದೆ ಹಾದು ಹೋಗುತ್ತಿದ್ದಾಗ ನೀವು ಚಲ್ಲಾಟ ಮಾಡುತ್ತಲೇ ಇದ್ದಿರಿ. ನಾನು ನಿಮ್ಮ ಸಮೀಪಕ್ಕೆ ಬರುತ್ತಲೇ ಬೇಗ ಬೇಗನೆ ಬಟ್ಟೆಗಳನ್ನು ಸುತ್ತಿಕೊಳ್ಳುತ್ತಿರುವಿರಿ! ಇದೇಕೆ?' ಆ ಸ್ತ್ರೀಯರು ಹೇಳಿದರು. 'ವ್ಯಾಸಮಹರ್ಷಿ! ನಿನ್ನ ದೇಹವು ಮುದಿ. ಮನಸ್ಸಿನ್ನೂ ಮುದಿಯಾಗಿಲ್ಲ. ಹೆಂಗಸು ಗಂಡಸೆಂಬ ಭೇದವಿದೆ. ಆದರೆ ನಿನ್ನ ಮಗನದು ಒಂದೇ ದೃಷ್ಟಿ. ಅದು **ಬ್ರಹ್ಮಾತ್ಮಾನುಭವಸ್ಥಿತಿ.** ಆತನಿಗೆ ಜಗತ್ತಾಗಲೀ ಜಗತ್ತಿನ ವಿಕಾರವಾಗಲೀ ತೋರದು. ಆದ್ದರಿಂದ ನಿನ್ನನ್ನು

ನೋಡಿದೊಡನೆ ಮೇ ನಾವು ಮರ್ಯಾದೆ ಮುಚ್ಚುತ್ತಿದ್ದೇವೆ.

ಇಂತಹ ಮಹಾಪುರುಷನು ಹಾಡಿ ಹೊಗಳಿದುದು ಭಾಗವತ ಮಹಾ ಪುರಾಣ.

**ಶ್ರೀಮದ್ಭಾಗವತಾಭಿದಃ ಸುರತರುಸ್ತಾರಾಂಕುರಃ ಸಜ್ಜನಿಃ**
**ಸ್ಕಂಧೈರ್ದ್ವಾದಶಭಿಸ್ತತಃ ಪ್ರವಿಲಸದ್ಭಕ್ತ್ಯಾಲವಾಲೋದಯಃ।**
**ದ್ವಾತ್ರಿಂಶತ್ತ್ರಿಶತಂ ಚ ಯಸ್ಯ ವಿಲಸಚ್ಛಾಖಾಃ ಸಹಸ್ರಾಣ್ಯಲಂ**
**ಪರ್ಣಾನ್ಯಷ್ಟದಶೇಷ್ಟದೋಽತಿಸುಲಭೋ ವರ್ವರ್ತಿ ಸರ್ವೋಪರಿ ॥**

ಈ ಭಾಗವತವು ಕಲ್ಪ ವೃಕ್ಷಕ್ಕೆ ಸಮಾನವು. ಸತ್ಸ್ವರೂಪನಾದ ಪರಬ್ರಹ್ಮನಿಂದ ಅಥವಾ ಆತನ ಮಹಾ ಮಹಿಮೆಯ ರಸವನ್ನು ಅನುಭವ ಮಾಡಿಕೊಂಡಿರುವ ಸತ್ಪುರುಷರಿಂದ ಇದರ ಉತ್ಪತ್ತಿ. ಸಂಸಾರ ಸಮುದ್ರ ದಿಂದ ರಕ್ಷಣೆ ಮಾಡಬಲ್ಲ ಬ್ರಹ್ಮಜ್ಞಾನ ಅಥವಾ ಮಹಾತಾರಕ ಮೂಲ ಮಂತ್ರವಾದ ಓಂಕಾರವೇ ಇದರ ಮೊಳಕೆಯು. ಭಕ್ತಿಯ ತಾಳುವಿನಿಂದ ಇದು ನಿಂತಿರುವುದು. ಇದರ ದೊಡ್ಡ ಕೊಂಬೆಗಳು (ಸ್ಕಂಧಗಳು) ಹನ್ನೆರಡು. ಸಣ್ಣ ಸಣ್ಣ ರೆಂಬೆಗಳು ಮುನ್ನೂರ ಇಪ್ಪತ್ತು. ಎಲೆಗಳು ಹದಿನೆಂಟು ಸಾವಿರ. ಇಂತಹ ಇಷ್ಟಾರ್ಥ ಸಿದ್ಧಿದಾಯಕವಾದ ಅತ್ಯಂತ ಸುಲಭವಾದ ಈ ಮಹಾ ಶಾಸ್ತ್ರವು ಎಲ್ಲಕ್ಕಿಂತಲೂ ಹೆಚ್ಚಾಗಿ ಮೆರೆಯುತ್ತಿದೆ.

ಈ ಭಾಗವತ ಪುರಾಣದಲ್ಲಿ ಹೇಳುವುದೇನು ಎಂಬುದು ಮೊದಲನೆಯ ಪ್ರಶ್ನೆ. ಇದಕ್ಕೆ ಉತ್ತರ ರೂಪವಾಗಿ ಹೇಳಬಹುದಾದುದಿಷ್ಟೆ.

ಅಸೂಯಾರಹಿತ ಅಂತಃಕರಣವುಳ್ಳ ಸಜ್ಜನರಿಂದ ಸ್ವರ್ಗಾದಿ ತುಚ್ಛ ಸುಖಗಳ ಅಪೇಕ್ಷೆಯಿಲ್ಲದೆ ಮಾಡಲ್ಪಡುವ ಈಶ್ವರಾರಾಧನಾರೂಪವಾದ **ಪರಮ ಧರ್ಮವೇ** ಇದರಲ್ಲಿ ಹೇಳಲ್ಪಡುವುದು. ಇದನ್ನು **ಓದಿ, ಕೇಳಿ, ಮನನ ಮಾಡುವುದರಿಂದ** ಸಹಜವಾಗಿಯೇ ಯಥಾರ್ಥ ಪರಮಾರ್ಥ ಜ್ಞಾನವು ಉಂಟಾಗುವುದು. ಅದರಿಂದ ಪರಮಸುಖ ಲಾಭವಾಗುವುದು. ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ರೂಪವಾದ ತಾಪತ್ರಯವು ಬೇರುಸಹಿತವಾಗಿಯೇ ಕಿತ್ತು ಹಾಕಲ್ಪಡುವುದು.

ಇದನ್ನು ಕೇಳಬೇಕಾದರೂ ಅದೃಷ್ಟವು ಬೇಕು. ಅನೇಕ ಜನ್ಮಗಳ ಪುಣ್ಯಫಲ ವಿಲ್ಲದಿದ್ದರೆ ಇದರ ಕಡೆಗೆ ಮನಸ್ಸೇ ಹೋಗುವುದಿಲ್ಲ.

ನೈಮಿಷಾರಣ್ಯವೆಂಬುದೊಂದು ಪವಿತ್ರ ಕ್ಷೇತ್ರ. ಗಂಗಾತೀರದಲ್ಲಿದೆ. ಅಲ್ಲಿ ಶೌನಕನೇ ಮೊದಲಾದ ೮೮ ಸಾವಿರ ಋಷಿಗಳು ಕಲಿಯುಗದ ದೋಷಗಳಿಂದ ದೂರವಾಗಿರುವುದಕ್ಕೋಸ್ಕರವಾಗಿಯೂ, ದುಃಖರಹಿತ ಸ್ವರ್ಗಪ್ರಾಪ್ತಿಗಾಗಿಯೂ, ಸಾವಿರ ವರ್ಷಗಳವರೆಗೂ ನಡೆಯುವ ಜ್ಞಾನ ಯಜ್ಞವನ್ನು ಮಾಡಲು ಸಂಕಲ್ಪಿಸಿ ಪರಮಾತ್ಮನನ್ನು ಆರಾಧಿಸಲಾರಂಭಿಸಿದರು. ಒಂದು ದಿನ ಬೆಳಗ್ಗೆ ಅವರ ಆಹ್ನಿಕ ಕರ್ಮಗಳೆಲ್ಲಾ ಮುಗಿದ ನಂತರ ಸೂತ ಪುರಾಣಿಕರು ದಯಮಾಡಿಸಿದರು. ಅವರು ವ್ಯಾಸ ಮಹರ್ಷಿಗಳ ಶಿಷ್ಯರು. ಸಮಸ್ತ ಪುರಾಣೇತಿಹಾಸಗಳನ್ನೂ, ಧರ್ಮ ಶಾಸ್ತ್ರಗಳನ್ನೂ ಚೆನ್ನಾಗಿ ಬಲ್ಲ ಪಂಡಿತರು. ವ್ಯಾಸ ಮಹರ್ಷಿಗಳು ಲೋಕೋಪಕಾರಕ್ಕಾಗಿ ಸಿದ್ಧ ಮಾಡಿದ ಪುರಾಣಗಳನ್ನೂ, ಧರ್ಮ ಗ್ರಂಥಗಳನ್ನೂ, ಜನ ಸಾಮಾನ್ಯರಲ್ಲಿ ಪ್ರಚಾರ ಮಾಡುವುದಕ್ಕಾಗಿಯೇ ಹುಟ್ಟಿದವರು. ಹೆಚ್ಚಿನ ವಿದ್ಯಾವಂತರಲ್ಲದವರಿಗೆ ಪುರಾಣಗಳಲ್ಲಿನ ರಹಸ್ಯಗಳನ್ನು ಹೇಳಿ ಧರ್ಮ ಪ್ರಚಾರ ಮಾಡುವುದರಲ್ಲಿ ಬಹಳ ಕುಶಲರಾಗಿದ್ದುದರಿಂದ ಅವರಿಗೆ ಪುರಾಣಿಕರೆಂದೇ ಬಿರುದು ಬಂದಿತ್ತು.

ಸೂತರನ್ನು ನೋಡುತ್ತಲೇ ಶೌನಕಾದಿಗಳು ಅವರನ್ನು ಮರ್ಯಾದೆಯಿಂದ ಸತ್ಕರಿಸಿ ಉತ್ತಮವಾದ ಆಸನದ ಮೇಲೆ ಕುಳ್ಳಿರಿಸಿ ಉಪಚರಿಸಿ ಹೇಳಿದರು.

**ಶೌನಕಾದಿಗಳು**—"ಮಹಾಶಯ! ಉಗ್ರಶ್ರವಾಸೂತಪುರಾಣಿಕರೆ! ನಿಮ್ಮ ದರ್ಶನದಿಂದ ನಾವು ಕೃತಾರ್ಥರಾದೆವು. ತಾವು ಸಕಲ ಶಾಸ್ತ್ರಗಳಲ್ಲಿಯೂ ಪಂಡಿತರು. ಬ್ರಹ್ಮಜ್ಞಾನಿಗಳಾದ ಋಷಿಗಳಿಗೂ ನಿಮ್ಮ ಗುರುಗಳಾದ ವ್ಯಾಸಮಹರ್ಷಿಗಳಿಗೂ ಏನೇನು ಗೊತ್ತಿರುವುದೋ ಅದೆಲ್ಲಾ ನಿಮಗೆ ಹೊಸದಲ್ಲ. ನಿಮ್ಮ ಗುರುಗಳ ಅನುಗ್ರಹದಿಂದ ನಿಮಗೆ ತಿಳಿದಿರುವ ಪುರುಷಾರ್ಥ ಸಾಧನೆಯು ಯಾವುದೆಂಬುದನ್ನು ದಯವಿಟ್ಟು ನಮಗೆ ತಿಳಿಸುವ ಕೃಪೆಮಾಡ

ಬೇಕು. ಈ ಕಲಿಯುಗದಲ್ಲಿ ಜನಗಳು ಅಜ್ಞರು. ಮಂದ ಬುದ್ಧಿಗಳು, ಅಲ್ಪಾಯುಗಳು. ದೊಡ್ಡ ದೊಡ್ಡ ಯಜ್ಞ, ತಪಸ್ಸು, ಕರ್ಮಗಳು ಸುಲಭ ಸಾಧ್ಯಗಳಲ್ಲ; ನಿಧಾನವಾಗಿ ಫಲಕೊಡತಕ್ಕವುಗಳು. ಆ ಜನಗಳ ಆಯಸ್ಸಾದರೋ ಬಹು ಕಡಿಮೆಯಾದುದರಿಂದ ಅತ್ಯಲ್ಪ ಕಾಲದಲ್ಲಿ ಹೆಚ್ಚು ಪ್ರಯೋಜನವಾಗುವಂತಹ ಉಪಾಯವನ್ನು ನಿಮ್ಮ ಅನುಭವದ ಆಧಾರದಿಂದ ನಮಗೆ ತಿಳಿಸಿಕೊಡಿ. ಲೋಕತ್ರಯಾಧಿಪತಿಯಾದ ಪರಮಾತ್ಮನು ಯಾವ ಕಾರಣದಿಂದ ದೇವಕೀ, ವಸುದೇವರ ಪುತ್ರನಾಗಿ ತನ್ನ ಲೀಲಾನಾಟಕವನ್ನಾಡಿದನೋ ಅದನ್ನೆಲ್ಲಾ ವಿಸ್ತಾರವಾಗಿ ತಿಳಿಯಹೇಳಿರಿ. ನಾವು ಈ ಕಲಿಯ ದುಃಖದಿಂದ ತಪ್ಪಿಸಿಕೊಳ್ಳಲೋಸುಗ ಪರಮಾತ್ಮನ ದಿವ್ಯ ಚರಿತ್ರೆಯನ್ನು ಕೇಳಬೇಕೆಂಬ ಅಭಿಲಾಷೆಯಿಂದ ಬಹಳ ದಿನಗಳಿಂದಲೂ ನಿಮ್ಮಂತಹವರನ್ನು ನಿರೀಕ್ಷಿಸುತ್ತಿದ್ದೇವೆ. ನಮ್ಮ ಉದ್ಧಾರಕ್ಕಾಗಿಯೇ ದೇವರು ನಿಮ್ಮನ್ನು ಇಲ್ಲಿಗೆ ಕರೆದುಕೊಂಡು ಬಂದಿದ್ದಾನೆ. ಸಮುದ್ರವನ್ನು ದಾಟಬೇಕೆಂಬ ಇಚ್ಛೆಯಿಂದ ದಡದಲ್ಲಿ ನಿಂತಿರುವವರಿಗೆ ಅಂಬಿಗರು ಸಿಕ್ಕಿದಂತಾಯಿತು. ಯೋಗೇಶ್ವರನಾದ ಧರ್ಮರಕ್ಷಕನಾದ ಶ್ರೀ ಕೃಷ್ಣ ಪರಮಾತ್ಮನು ಸ್ವಸ್ಥಾನಕ್ಕೆ ದಯಮಾಡಿಸಿದ ನಂತರ ಧರ್ಮವು ಯಾರನ್ನು ಮೊರೆಹೊಕ್ಕಿತು ? ವಿಸ್ತಾರವಾಗಿ ತಿಳಿಸುವ ಕೃಪೆಮಾಡಿ"

ಋಷಿಗಳ ಪ್ರಶ್ನೆಯಿಂದ ರೋಮಹರ್ಷಣ ಸೂತರ ಮಗನಾದ ಉಗ್ರಶ್ರವಾಸೂತನಿಗೆ ಬಹಳ ಸಂತೋಷವಾಯಿತು ಹೇಳಲಾರಂಭಿಸಿದನು—

**ಸೂತರು—**ಯಾವ ಪುಣ್ಯಾತ್ಮನು ಹುಟ್ಟುವಾಗಲೇ ಉಪನಯನ ಸಂಸ್ಕಾರಕ್ಕೆ ಮುಂಚೆಯೇ, ಸಮಸ್ತ ಅಭಿಮಾನಗಳನ್ನು ಬಿಟ್ಟು ಸಂನ್ಯಾಸಗ್ರಹಣ ಮಾಡಿ ಕಾಡಿಗೆ ಹೊರಟನೋ, ಮತ್ತು ಯಾವ ಪುತ್ರನ ವಿರಹವನ್ನು ತಾಳಲಾರದೆ ವೇದವ್ಯಾಸಮಹರ್ಷಿಯು 'ಮಗನೇ! ಮಗನೇ!' ಎಂದು ಕೂಗುತ್ತಾ ಹಿಂದೆ ಹೋಗುತ್ತಿರಲು, ತನ್ನ ಸರ್ವವ್ಯಾಪಕವಾದ ಆತ್ಮಶಕ್ತಿಯಿಂದ ಆ ಕಾಡಿನ ಮರಗಳೇ ತಂದೆಗೆ ಉತ್ತರಕೊಟ್ಟು,

ಆತನ ಮೋಹವನ್ನು ಬಿಡಿಸುವಂತೆ ಮಾಡಿದನೋ, ಆ ಪರಮಹಂಸ ಶುಕಮಹರ್ಷಿಗೆ ವಂದಿಸುತ್ತೇನೆ. ಸಂಸಾರ ರೂಪವಾದ ಅಂಧಕಾರ ಮಯ ಮಾರ್ಗದಲ್ಲಿ ನಡೆಯುವವನಿಗೆ ಸ್ವಯಂಪ್ರಕಾಶಮಾನವಾದ, ವೇದಾಂತಾರ್ಥಗರ್ಭಿತವಾದ ಪುರಾಣಗಳನ್ನೆಲ್ಲಾ ರಹಸ್ಯವಾದ ಅಧ್ಯಾತ್ಮಮಯವಾದ ಭಾಗವತವೆಂಬ ದೊಡ್ಡ ದೀಪವನ್ನು ಲೋಕ ಕಲ್ಯಾಣಕ್ಕಾಗಿ ಪ್ರಕಟಮಾಡಿದ ಮಹಾ ಮುನಿಯನ್ನು ನಮಸ್ಕರಿಸುತ್ತೇನೆ. ನರನಾರಾಯಣರನ್ನೂ, ಸರಸ್ವತೀದೇವಿಯನ್ನೂ, ವ್ಯಾಸ ಮಹರ್ಷಿಗಳನ್ನೂ ವಂದಿಸಿ ಈ ಶಾಸ್ತ್ರವನ್ನು ಆರಂಭಿಸುತ್ತೇನೆ.

ಋಷಿಗಳೇ! ನೀವು ಕೇಳಿದುದು ಬಹಳ ಒಳ್ಳೆಯದೇ ಆಯಿತು. ನಾರಾಯಣನಲ್ಲಿ ನಿಷ್ಕಾಮ ಭಕ್ತಿಯು ಏತರಿಂದ ಹುಟ್ಟುವುದೋ ಅದೇ ಎಲ್ಲಾ ಪ್ರಾಣಿಗಳಿಗೂ ಪರಮ ಧರ್ಮವಾಗಿದೆ. ಆ ಭಕ್ತಿಯಿಂದ ಆತ್ಮವು ಪ್ರಸನ್ನವಾಗುತ್ತದೆ. ಪರಮಾತ್ಮನಾದ ವಾಸುದೇವನಲ್ಲಿ ಭಕ್ತಿಯನ್ನು ಮಾಡುವುದರಿಂದ ಹೃದಯದಲ್ಲಿ ಬ್ರಹ್ಮಜ್ಞಾನವೂ, ವೈರಾಗ್ಯವೂ ಹುಟ್ಟುವುವು. ಪರಮಾತ್ಮನ ಚರಿತ್ರೆಯನ್ನು ಕೇಳುವುದರಲ್ಲಿ ಆನಂದವೂ, ಭಕ್ತಿಯೂ ಹುಟ್ಟದಿದ್ದರೆ ಎಂತಹ ಧರ್ಮಕಾರ್ಯವೂ ಉಪಯೋಗಕ್ಕೆ ಬಾರದು. ಧರ್ಮಾನುಷ್ಠಾನದ ಫಲವು ಐಶ್ವರ್ಯವೆಂದೂ, ಅದರ ಫಲವು ಸುಖಭೋಗವೆಂದೂ ಅದರಿಂದ ಇಂದ್ರಿಯ ತೃಪ್ತಿಯಾಗುವುದೆಂದು ಹೇಳುತ್ತಾರೆ. ಆದರೆ ಜ್ಞಾನಿಗಳ ದೃಷ್ಟಿಯಲ್ಲಿ ಇವೆಲ್ಲವೂ ತುಚ್ಛ; ಅಪ್ರಯೋಜಕ. ಏಕೆಂದರೆ ಇವುಗಳು ಬದುಕಿರುವಾಗ ಮಾತ್ರ ಸುಖವನ್ನು ಕೊಡಬಲ್ಲವು. ಮೋಕ್ಷವನ್ನು ಕೊಡಲಾರವು. ಆದುದರಿಂದ ಜ್ಞಾನಿಗಳ ಅಭಿಪ್ರಾಯದಲ್ಲಿ ಈ ಧರ್ಮ-ಅರ್ಥ, ಕಾಮಗಳು ಮೋಕ್ಷಕ್ಕೆ ಸಹಕಾರಿಗಳಾಗಬೇಕೇ ಹೊರತು ಮತ್ತಿನ್ನೇತಕ್ಕೂ ಉಪಯೋಗಿಸಲ್ಪಡಬಾರದು. ಈ ಜ್ಞಾನವನ್ನೇ ತತ್ವವೆಂದೂ, ಅದ್ವೈತಜ್ಞಾನವೆಂದೂ, ಬ್ರಹ್ಮನೆಂದೂ, ಪರಮಾತ್ಮನೆಂದೂ ವಿವಿಧವಾಗಿ ಹೇಳುತ್ತಾರೆ. ಈ ತತ್ವವನ್ನು ತಿಳಿಯುವುದಕ್ಕಾಗಿಯೇ

ಸ್ತ್ರೀಗಳು ಶ್ರದ್ಧಾಪೂರ್ವಕವಾಗಿ ಮೋಕ್ಷಶಾಸ್ತ್ರವನ್ನು ಶ್ರವಣಮಾಡು ತ್ತಾರೆ (ಕೇಳುತ್ತಾರೆ.)

ತತ್ವಶಾಸ್ತ್ರವನ್ನು ಕೇಳುವುದರಿಂದ ಜ್ಞಾನವು ಹುಟ್ಟುತ್ತದೆ. ಜ್ಞಾನ, ವೈರಾಗ್ಯಗಳೊಡನೆ ಭಕ್ತಿಯೂ ಬೆರತರೆ, ಹೃದಯದಲ್ಲಿ ಆತ್ಮದರ್ಶನ ವಾಗುತ್ತದೆ. ಪ್ರತಿಬಿಂಬವನ್ನು ನೋಡಿ, ಬಿಂಬವನ್ನು ಗುರ್ತುಮಾಡು ವಂತೆ ಆತ್ಮದರ್ಶನದಿಂದ ಪರಮಾತ್ಮಾನುಭವವಾಗುತ್ತದೆ. ಯಾವ ವರ್ಣದವರಿಗಾಗಲಿ, ಯಾವ ಆಶ್ರಮದವರಿಗಾಗಲಿ, ಭಕ್ತಿ ಯೊಂದೇ ಧರ್ಮ. ಆದುದರಿಂದ ಏಕಾಗ್ರಚಿತ್ತರಾಗಿ ಭಗವಂತನ ಗುಣ ಕಥನಮಾಡುವುದು, ಕೇಳುವುದು, ನಾಮ ಸಂಕೀರ್ತನೆಮಾಡು ವುದು, ಧ್ಯಾನಮಾಡುವುದು, ಪೂಜೆಮಾಡುವುದು ಇವುಗಳೇ ಎಲ್ಲ ರಿಗೂ ನಿತ್ಯಧರ್ಮವೆಂದು ತಿಳಿಯಬೇಕು: ಏಕೆಂದರೆ ಈ ಭಗವಂತನ ಚರಿತ್ರೆಯು ಪರಮ ದುರ್ಲಭವು. ಪುಣ್ಯ ತೀರ್ಥಗಳನ್ನು ತಿರುಗಿ ಸತ್ಪುರುಷರ ದರ್ಶನಮಾಡಿದುದರ ಫಲವಾಗಿಯೇ ಪರಮಾತ್ಮ ಚರಿತ್ರೆ ಯನ್ನು ಶ್ರದ್ಧಾಪೂರ್ವಕವಾಗಿ ಕೇಳಬೇಕೆಂಬ ಆಶೆಯು ಹುಟ್ಟುವುದು. ಈ ಭಕ್ತಿಮಾರ್ಗವು ಬಹಳ ಸುಲಭವಾಗಿದೆ; ಪುಣ್ಯರೂಪವಾಗಿದೆ. ಸಜ್ಜನ ಬಂಧುವಾದ ಪರಮಾತ್ಮನು ತನ್ನ ಕಥೆಯನ್ನು ಕೇಳುವವರ ಹೃದಯದಲ್ಲಿ ನಿಂತು ಅವರ ಕುತರ್ಕಗಳನ್ನು, ದುಷ್ಟ ಬುದ್ಧಿಗಳನ್ನು ನಾಶಮಾಡುವನು. ಭಗವದ್ಭಕ್ತರ ಸಂಗವನ್ನು ಎಡೆ ಬಿಡದೆ ಮಾಡು ವುದರಿಂದ ಹೃದಯವು ಶುದ್ಧವಾಗುವುದು. ಉತ್ತಮ ಶ್ಲೋಕನಾದ ಪರಮಾತ್ಮನಲ್ಲಿ ನಿಷ್ಕಾಮ ಭಕ್ತಿಯು ಹುಟ್ಟುವುದು. ರಜಸ್ತಮೋ ಗುಣಗಳ ವಿಕಾರಗಳಾದ ಕಾಮ, ಲೋಭಾದಿಗಳು ಮನಸ್ಸಿನಿಂದ ದೂರವಾಗುತ್ತವೆ. ಸತ್ವಗುಣದ ನಿರ್ಮಲ, ಶಾಂತ ಸ್ವಭಾವದಲ್ಲಿ ಚಿತ್ತವು ಲೀನವಾಗುತ್ತದೆ. ಹೀಗೆ ಒಂದೊಂದಾಗಿ ಹೊರಗಿನ ಸಂಗವೆಲ್ಲಾ ಬಿಟ್ಟು ಹೋದಾಗ ಏಕಾಂತದಲ್ಲಿ ನಿಂತು ಶಾಂತ ಚಿತ್ತನಾಗಿ ಧ್ಯಾನಮಾಡಿದರೆ ಪರಮಾತ್ಮ ತತ್ವದ ಜ್ಞಾನವಾಗುವುದು. ತನ್ನ

ಹೃ ದ ಯ ದ ಲ್ಲಿ ಈಶ್ವರ ದರ್ಶನ ವಾದರೆ ಹೃದಯದ ಗ್ರಂಥಿಗಳೆಲ್ಲಾ ಒಂದೊಂದಾಗಿ ಬಿ ಚ್ಚ ಲಾ ರಂ ಭಿ ಸು ವು ವು. ಸಂಶಯಗಳೆಲ್ಲಾ ಒಂದೊಂದಾಗಿ ಕಳಚಿ ಹೋಗುವುವು. ಕರ್ಮಗಳೆಲ್ಲಾ ಕ್ಷಯಿಸುವುವು; ಅಂದರೆ ಮೋಕ್ಷ ಪ್ರಾ ಪ್ತಿ ಯಾ ಗು ವು ದು. ಆದುದರಿಂದ ವಿವೇಕಿಗಳಾದವರು ಪರಮಾನಂದದಿಂದ ಆತ್ಮನನ್ನು ಹೊಂದುವ ಪ ರ ಮಾ ತ್ಮ ಭಕ್ತಿಯ ದಾರಿಯನ್ನು ಹಿಡಿಯುತ್ತಾರೆ. ಆ ನಿರ್ಗುಣ ಪರಬ್ರಹ್ಮನು ತನ್ನ ಮಾಯೆಯ ಮೂರು ಗುಣಗಳಾದ ಸತ್ವ, ರಜಸ್ಸು, ತಮಸ್ಸುಗಳನ್ನು ಆಧಾರ ಮಾಡಿಕೊಂಡು ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಾಗಿ, ಜಗತ್ತನ್ನು ಸೃಷ್ಟಿ, ಸ್ಥಿತಿ, ಲಯ ಮಾಡುತ್ತಾನೆ. ಈಶ್ವರನ ಈ ಮೂರು ಗುಣಗಳಲ್ಲಿ ಸ ತ್ವ ಮ ಯ ನಾ ದ ಮೂರ್ತಿಯು ಪರಮ ಸುಖ ಕಲ್ಯಾಣಗಳನ್ನು ಕೊಡುತ್ತಾನೆ.

ಅಗ್ನಿಗೆ ಮೂರು ಆವರಣಗಳಿವೆ ಮೊದಲನೆಯದು ಭೂಮಿ. ಎರಡನೆಯದು ಕಟ್ಟಿಗೆ. ಮೂರನೆಯದು ಹೊಗೆ. ಈ ಮೂರನ್ನೂ ದಾಟಿದರೆ ಅಗ್ನಿಯ ಪ್ರತ್ಯಕ್ಷ ದರ್ಶನವಾಗುತ್ತದೆ. ಹಾಗೆಯೇ ತಮಸ್ಸು, ರಜಸ್ಸು, ಸತ್ವ ಎಂಬ ಮೂರು ಆವರಣ ಗಳನ್ನು ದಾಟಿದರೆ ಸತ್ವಗುಣದ ಆಧಾರದಿಂದ ಬ್ರಹ್ಮ ದರ್ಶನವಾಗುತ್ತದೆ. ತಪಸ್ವಿಗಳಾದ ಮುನಿಗಳು ಶುದ್ಧ ಸತ್ವಗುಣದ ಆಧಾರದಿಂದಲೇ ಪರಮಾತ್ಮ ಪದವನ್ನು ಪಡೆದರು. ಇತರರೂ ಸಹ ಅವರುಹೋದ ಮಾರ್ಗದಲ್ಲಿಯೇ ಪ್ರಯಾಣಮಾಡಿದರೆ ಈಶ್ವರನ ಸಾಕ್ಷಾತ್ಕಾರ ರೂಪವಾದ ಮೋಕ್ಷವು ಲಭಿಸುವುದು. ಮೋಕ್ಷಾಪೇಕ್ಷೆಯುಳ್ಳ ಪುರುಷರು ಅಸೂಯಾರಹಿತರಾಗಿ ರಜಸ್ತಮೋಗುಣಗಳ ಭೂತ, ಪ್ರೇತ, ಪಿಶಾಚಿಗಳನು ಬಿಟ್ಟು ನಾರಾಯಣನ ಶಾಂತ ಮೂರ್ತಿಯನ್ನು ಭಜನೆ ಮಾಡುತ್ತಾರೆ. ರಾಜಸ, ತಾಮಸ, ಪುರುಷರು ಪಿತೃಗಳು, ಭೂತಗಳು, ಪ್ರಜಾಪತಿ ಮುಂತಾದ ದೇವತೆಗಳನ್ನು ಧನ ಐಶ್ವರ್ಯ, ಪುತ್ರ, ಕಾಮನೆಗಳಿಗಾಗಿ ಪೂಜಿಸುತ್ತಾರೆ. ವೇದಗಳೂ ಯಜ್ಞಗಳೂ, ಯೋಗಗಳೂ, ಕರ್ಮಗಳೂ, ವಿಷ್ಣುಮಯವಾಗಿಯೇ ಇವೆ. ಜ್ಞಾನ, ತಪಸ್ಸು, ಧರ್ಮ, ಗತಿ, ಮುಂತಾದುವೆಲ್ಲಾ ವಿಷ್ಣು

ಮೆಯವೇ ಆಗಿವೆ. ಆದುದರಿಂದ ವಾಸುದೇವನು ಎಲ್ಲರಿಗೂ ಆರಾಧ್ಯ ಮೂರ್ತಿಯಾಗಿದ್ದಾನೆ. ತಾನು ಸ್ವಯಂ ನಿರ್ಗುಣನಾದರೂ ಜಗತ್ತಿನ ರಚನೆಗಾಗಿ ಸಗುಣ ಮೂರ್ತಿಗಳನ್ನು ಧಾರಣೆಮಾಡಿದ್ದಾನೆ. ಆತನೇ ಸೃಷ್ಟಿಯ ಆದಿಯಲ್ಲಿ ಬ್ರಹ್ಮರೂಪದಿಂದ ಜಗತ್ತನ್ನು ಹುಟ್ಟಿಸಿದ್ದಾನೆ. ತನ್ನ ಮಾಯೆಯ ಗುಣಗಳನ್ನು ಧಾರಣೆ ಮಾಡಿದುದರಿಂದ ಆತನನ್ನು ಸಗುಣವೆನ್ನುತ್ತಾರೆ. ಒಂದೇ ಅಗ್ನಿಯೇ ಕಟ್ಟಿಗೆಗಳ ಭೇದದಿಂದ ಬೇರೆ ಬೇರೆ ಆಕಾರಗಳಾಗಿ ಕಂಡರೂ, ಒಬ್ಬನೇ ಇರುವಂತೆ ಅನೇಕಾಕಾರ, ಶರೀರಗಳಲ್ಲಿ ಅನೇಕ ರೂಪವಾಗಿ ಕಾಣುವ ಆತ್ಮನೊಬ್ಬನೇ ಸತ್ಯ; ತೋರುವುವೆಲ್ಲಾ ಆತನ ಪ್ರತಿಬಿಂಬಗಳು ಮಾತ್ರ. ಹರಿರೂಪಿಯಾದ ಆ ಪರಮಾತ್ಮನ ಸೂಕ್ಷ್ಮ ಭೂತಗಳು. ಇಂದ್ರಿಯಗಳು ಮುಂತಾದ ಪದಾರ್ಥಗಳ ಮೂಲಕ ಪ್ರತಿಯೊಂದು ಪ್ರಾಣಿಗಳೊಳಗೂ ಪ್ರವೇಶಮಾಡಿ ತನ್ನ ಮಾಯೆಯನ್ನು ತಾನೇ ಅನುಭವಿಸುತ್ತಾನೆ.

ಆ ನಿರ್ಗುಣ ನಿರಾಕಾರ ಪರಬ್ರಹ್ಮನಿಗೆ ಎಲ್ಲಕ್ಕೆ ಮುಂಚೆ ಜಗತ್ತನ್ನೇ ಸೃಷ್ಟಿ ಮಾಡಬೇಕೆಂಬ ಇಚ್ಛೆಯುಂಟಾಯಿತು. ಆಗ ಆತನು ಮಹತ್ತತ್ವ, ಅಹಂಕಾರ ಪಂಚತನ್ಮಾತ್ರೆಗಳು (೧೦ ಇಂದ್ರಿಯ+ ೧ ಮನಸ್ಸು+ ೫ ತತ್ವಗಳು)ಇವುಗಳಿಂದ ಯುಕ್ತವಾದ ಷೋಡಶ ಕಲಾಪೂರ್ಣ ಪುರುಷ ರೂಪವನ್ನು (ವಿರಾಟ್) ಧಾರಣೆ ಮಾಡಿದನು. (ಪ್ರಳಯದ ಕೊನೆಯಲ್ಲಿ ಪ್ರಳಯ ಸಮುದ್ರದಲ್ಲಿ ಯೋಗ ನಿದ್ರೆಯನ್ನು ಧಾರಣೆಮಾಡಿ ನಿದ್ರಿಸುತ್ತಿದ್ದಾಗ ನಾಭಿಯಲ್ಲಿ ಕಮಲವು ಹುಟ್ಟಿತು. ಆ ಕಮಲದಿಂದ ಪ್ರಜಾಪತಿಗಳ ಪತಿಯಾದ ಬ್ರಹ್ಮನು ಹುಟ್ಟಿದನು. ಹದಿನಾಲ್ಕು ಲೋಕಗಳು ವಿರಾಟ್‌ಪುರುಷನ ಅಂಗಗಳಿಂದ ಹುಟ್ಟಿದವು. ಈ ರೂಪವು ಶುದ್ಧ ಸತ್ವಗುಣದಿಂದ ಕೂಡಿದುದು. ಸಹಸ್ರ ಪಾದಗಳು, ತೊಡೆಗಳು, ಭುಜಗಳು, ಮುಖಗಳು, ಶಿರಸ್ಸುಗಳು, ಕಿವಿಗಳು ನೇತ್ರಗಳು, ಮಸ್ತಕಗಳೂ ಉಳ್ಳ ಈ ವಿರಾಡ್ರೂಪವು ಪರಮ ಅದ್ಭುತವಾದುದು. ಇದರ ಪ್ರತಿಯೊಂದು ಅವಯವದಲ್ಲಿ ಕಿರೀಟ, ಕುಂಡಲ,

ಮುಂತಾದ ಅಭರಣಗಳು ಶೋಭಿಸುತ್ತಿವೆ. ಇದನ್ನು ಯೋಗಿಗಳು ಜ್ಞಾನ ನೇತ್ರದಿಂದ ಮಾತ್ರ ನೋಡಬಲ್ಲರು ಈ ಆದಿ ಪುರುಷರೂಪವು ಎಲ್ಲಾ ಅವತಾರಗಳಿಗೂ ಆ ಶ್ರ ಯ ಸ್ಥಾ ನ ವೂ ಆದಿ ಬೀಜವೂ ಆಗಿದೆ. ಅಂದರೆ ಎಲ್ಲಾ ಅವತಾರಗಳೂ ಇಲ್ಲಿಂದಲೇ ಹುಟ್ಟಿ ತಮ್ಮ ತಮ್ಮ ಕಾರ್ಯಗಳಾದ ನಂತರ ಇಲ್ಲಿಯೇ ಅಡಗುತ್ತವೆ. ಬ್ರಹ್ಮ, ಮರೀಚಿ, ಮುಂತಾದವರು ಇದರ ಅಂಶದ ಅಂಶವಾಗಿ ದೇವ, ಮನುಷ್ಯ, ಪಶು, ಪಕ್ಷಿ, ಮುಂತಾದ ಸೃಷ್ಟಿಯನ್ನು ಮಾಡುತ್ತಿರುತ್ತಾರೆ.

**ಈ ಆದಿ ದೇವನೇ** ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ, ಎಂಬ ಕುಮಾರ ರೂಪವನ್ನು ಧಾರಣೆಮಾಡಿ, ಯಾರೂ ಮಾಡದಂತಹ ಅಖಂಡ ಬ್ರಹ್ಮಚರ್ಯ ವ್ರತವನ್ನು ಪಾಲನೆ ಮಾಡಿದನು.

**ಎರಡನೆಯಾವೃತ್ತಿ**—ಪಾತಾಳದಲ್ಲಿ ಬಿದ್ದುಹೋಗಿದ್ದ ಭೂಮಿಯನ್ನು ಮೇಲಕ್ಕೆ ಎತ್ತಲು ವರಾಹ(ಹಂದಿ) ರೂಪವನ್ನು ಧರಿಸಿದನು

**ಮೂರನೆಯಾವೃತ್ತಿ**—ಋಷಿಗಳ ಸೃಷ್ಟಿಯಲ್ಲಿ ದೇವರ್ಷಿ ನಾರದನಾಗಿ ಹುಟ್ಟಿ ಕರ್ಮ ಬಂಧ ನಿವೃತ್ತಿ ರೂಪವಾದ ವೈಷ್ಣವ ತಂತ್ರವಾದ ನಾರದ ಪಾಂಚರಾತ್ರ ತಂತ್ರಶಾಸ್ತ್ರವನ್ನು ಸಿದ್ಧಮಾಡಿದನು.

**ನಾಲ್ಕನೆಯಾವೃತ್ತಿ**—ಧರ್ಮನ ಪತ್ನಿಯಲ್ಲಿ ನರನಾರಾಯಣಾತಾರ ಮಾಡಿ ಆತ್ಮಶಾಂತಿಕರವಾದ ಘೋರ ತಪಸ್ಸನ್ನು ಮಾಡಿದನು

**ಐದನೆಯಾವೃತ್ತಿ**—ಸಿದ್ಧೇಶ್ವರನಾದ ಕಪಿಲ ಮುನಿಯ ಅವತಾರ ಮಾಡಿ ಉತ್ತಮವಾಗಿದ್ದ ಸಾಂಖ್ಯ ಶಾಸ್ತ್ರವನ್ನು ಉದ್ಧಾರ ಮಾಡಿದನು.

**ಆರನೆಯಾವೃತ್ತಿ**—ಅತ್ರಿ ಋಷಿಯ ಪ್ರಾರ್ಥನೆಯಂತೆ ಆತನ ಪುತ್ರನಾದ ದತ್ತಾತ್ರೇಯನಾಗಿ ಅವತರಿಸಿ ಅಲರ್ಕ, ಪ್ರಹ್ಲಾದ, ಮುಂತಾದವರಿಗೆ ಆತ್ಮ ವಿದ್ಯೆಯನ್ನು ಉಪದೇಶ ಮಾಡಿದನು.

**ಏಳನೆಯಾವೃತ್ತಿ**—ಋಚಿ ಪ್ರಜಾಪತಿಯ ಹೆಂಡತಿಯಾದ ಆಕೂತಿ

ರುಚಿಯವರಲ್ಲಿ ಯಜ್ಞ ಎಂಬ ಹೆಸರಿನಿಂದ ಉತ್ಪನ್ನನಾಗಿ ಸ್ವಾಯಂಭುವಮನ್ವಂತರದಲ್ಲಿ ಯಮಾದಿ ದೇವತೆಗಳಿಂದೊಡಗೂಡಿ ಇಂದ್ರ ಪದವಿಯಲ್ಲಿ ವಿರಾಜಮಾನನಾಗಿ ಲೋಕವನ್ನು ರಕ್ಷಿಸಿದನು.

**ಎಂಟನೆಯಾವೃತ್ತಿ**—ನಾಭಿರಾಜನ ಪತ್ನಿಯಾದ ಮೇರು ದೇವಿಯಲ್ಲಿ ವೃಷಭಾವತಾರಮಾಡಿ ಪರಮಪೂಜ್ಯ ಪರಮಹಂಸ ಧರ್ಮವನ್ನು ಉಪದೇಶ ಮಾಡಿದನು.

**ಒಂಭತ್ತನೆಯಾವೃತ್ತಿ**—ಋಷಿಗಳ ಪ್ರಾರ್ಥನೆಯಂತೆ ಪೃಥುರಾಜನ ಅವತಾರವಮಾಡಿ ಭೂಮಿಯನ್ನು ಗೋವನ್ನಾಗಿಮಾಡಿ ಓಷಧಿ, ವನಸ್ಪತಿಗಳನ್ನೆಲ್ಲಾ ಅವರಿಂದ ಅಮೃತದಂತೆ ಕರೆದು ಜಗದುದ್ಧಾರ ಮಾಡಿದನು. ಈ ಅವತಾರವು ಬಹಳ ಸುಂದರವಾದುದು.

**ಹತ್ತನೆಯಾವೃತ್ತಿ**—ಚಾಕ್ಷುಷಮನ್ವಂತರದ ಕೊನೆಯಲ್ಲಿ ಸಮುದ್ರವು ಮೇಲೆ ಉಬ್ಬಿ ಭೂಮಿಯನ್ನು ಮುಳುಗಿಸಿದಾಗ ಮತ್ಸ್ಯಾವತಾರ ಮಾಡಿ ಭೂಮಿ ಎಂಬ ನಾವೆಯಲ್ಲಿ ವೈವಸ್ವತ ಮನುವನ್ನು ಹತ್ತಿಸಿ ಅವನನ್ನು ರಕ್ಷಿಸಿದನು.

**ಹನ್ನೊದಂನೆಯಾವೃತ್ತಿ**—ದೇವದೇವನು ಅಮೃತಕ್ಕಾಗಿ ಸಮುದ್ರ ಮಥನಮಾಡಿದಾಗ ಮಂತಿನಂತಿದ್ದ ಮಂದರಾಚಲವು ಭಾರದಿಂದ ಮುಳುಗಿಹೋಗುತ್ತಿರಲು ಕೂರ್ಮರೂಪದಿಂದ ಕೆಳಕ್ಕೆ ಹೋಗಿ ಅದನ್ನು ಮೇಲಕ್ಕೆತ್ತಿದನು.

**ಹನ್ನೆರಡನೆಯಾವೃತ್ತಿ**—ಧನ್ವಂತರಿಯವತಾರ.

**ಹದಿಮೂರನೆಯಾವೃತ್ತಿ**—ದೇವ ದಾನವರಲ್ಲಿ ಅಮೃತಕ್ಕಾಗಿ ವ್ಯಾಜ್ಯವಾಗಲು ದಾನವರನ್ನು ವಂಚಿಸಿ ದೇವತೆಗಳಿಗೆ ಅಮೃತವನ್ನು ಕೊಟ್ಟ ಸ್ತ್ರೀ—ಮೋಹಿನೀ ಅವತಾರವು.

**ಹದಿನಾಲ್ಕನೆಯಾವೃತ್ತಿ**—ಶಕ್ತನಾದ, ಅಭಿಮಾನಿಯಾದ, ಹಿರಣ್ಯಕಶಿಪುವನ್ನು ಚಾಪೆಯ ಹುಲ್ಲಿನಂತ ತನ್ನ ನಖಗಳಿಂದ (ಉಗುರು)

ಸೀಳಿಹಾಕಿದ ನೃಸಿಂಹಾವತಾರವು.

**ಹದಿನೈದನೆಯಾವೃತ್ತಿ**—ಬಲಿಚಕ್ರವರ್ತಿಯ ಯಜ್ಞದಲ್ಲಿ ಹೋಗಿ ಇಂದ್ರನಿಗೆ ಲೋಕತ್ರಯಾಧಿಪತ್ಯ ಕೊಡಲು ಮೂರು ಹೆಜ್ಜೆ ಭೂಮಿಯನ್ನು ದಾನ ಬೇಡಿದ ವಾಮನಾವತಾರವು.

**ಹದಿನಾರನೆಯಾವೃತ್ತಿ**—ಇಪ್ಪತ್ತೊಂದಾವೃತ್ತಿ ಕ್ಷತ್ರಿಯರಾಜರನ್ನು ನಾಶಮಾಡಿದ ಪರಶುರಾಮಾವತಾರವು.

**ಹದಿನೇಳನೆಯಾವೃತ್ತಿ**—ಸತ್ಯವತಿಯ ಮಗನಾಗಿ ಮಂದಬುದ್ಧಿಗಳಾದ ಜನರಿಗೆ ಅನುಕೂಲವಾಗುವಂತೆ ವೇದಗಳನ್ನು ಅನೇಕ ಶಾಖೆಗಳಾಗಿ ವಿಂಗಡಿಸಿದ ವ್ಯಾಸಾವತಾರವು.

**ಹದಿನೆಂಟನೆಯಾವೃತ್ತಿ**— ಸಮುದ್ರದಲ್ಲಿ ಸೇತುವೆಯನ್ನು ದೇವಕಾರ್ಯಕ್ಕಾಗಿ ಕಟ್ಟಿದ ರಾಮಾವತಾರವು.

**ಹತ್ತೊಂಬತ್ತನೇ ಮತ್ತು ಇಪ್ಪತ್ತನೇ ಆವೃತ್ತಿಗಳಲ್ಲಿ**—ಯದುಕುಲದಲ್ಲಿ ಶ್ರೀಕೃಷ್ಣ ಬಲರಾಮ ರೂಪದಿಂದ ಲೋಕೋದ್ಧಾರ ಮಾಡಿದುದು.

ಪುನಃ ಕಲಿಯುಗದ ಆದಿಯಲ್ಲಿ ಕೀಕಟದೇಶದಲ್ಲಿ ಜಿನಸುತ ಬುದ್ಧನೆಂಬ ಅವತಾರವೂ ಕಲಿಯುಗಾಂತ್ಯದಲ್ಲಿ ಮತ್ತು ಕೃತಯುಗದ ಆದಿಯ ಸಂಧಿಯಲ್ಲಿ ಕಲ್ಕಿ ಅವತಾರಗಳೂ ಆಗುವುವು. ಅಕ್ಷಯ ಸರೋವರದಲ್ಲಿ ಸಹಸ್ರಾರು ಸಣ್ಣ ಸಣ್ಣ ಹೊಳೆಗಳು ಹರಿಯುವಂತೆ ಆದಿಪುರುಷನಲ್ಲಿ ಲೆಕ್ಕವಿಲ್ಲದಷ್ಟು ಅವತಾರಗಳಾಗಿ ಹೋಗುತ್ತಿವೆ. ಇವುಗಳು ಯುಗ ಯುಗದಲ್ಲಿಯೂ ಧರ್ಮೋದ್ಧರಣಕ್ಕಾಗಿ, ದುಷ್ಟ ಶಿಕ್ಷಣೆಗಾಗಿ ಆಗಿರುವ ಆಗುತ್ತಿರುವ ಅಂಶಕಲಾವತಾರಗಳು. ಆದರೆ ಶ್ರೀಕೃಷ್ಣಾವತಾರವು ಮಾತ್ರ **ಪರಮಾತ್ಮನ ಸಂಪೂರ್ಣ ಶಕ್ತಿಯುಕ್ತ ಪೂರ್ಣಾವತಾರವು.**

ಪ್ರತಿದಿನವೂ ಯಾರು ಬೆಳಗ್ಗೆ, ಸಾಯಂಕಾಲ ಸ್ನಾನಾದಿಗಳಿಂದ

ಶುಚಿರ್ಭೂತರಾಗಿ ಏಕಾಗ್ರಚಿತ್ತರಾಗಿ ಈ ಅವತಾರಗಳನ್ನು ಕೀರ್ತನೆ ಮಾಡುವರೋ ಅವರು ಸಮಸ್ತ ಪಾಪಗಳಿಂದಲೂ ಬಿಡಲ್ಪಡುತ್ತಾರೆ.

ರೂಪರಹಿತನಾದ ಸಚ್ಚಿದಾನಂದ ಸ್ವರೂಪ ಪರಮಾತ್ಮನ ಈ ವಿರಾಟ್ ರೂಪವು ಮಾಯೆಯ ಗುಣಗಳಿಂದ ಮಹತ್ತತ್ವ ಮುಂತಾದುವುಗಳಿಂದ ತನ್ನಲ್ಲಿಯೇ ವಿರಚಿತವಾಗಿದೆ, ಅಂದರೆ ಮಾಯಾ ಕಲ್ಪಿತವಾಗಿದೆ.

ಶೌನಕ—ನಿರ್ಗುಣನು ಹೇಗೆ ಸಗುಣನಾಗ ಬಲ್ಲನು ?

**ಸೂತ**—ಶೂನ್ಯವಾದ ಆಕಾಶದಲ್ಲಿ ಮೇಘವೂ, ವಾಯುವಿನಲ್ಲಿ ಧೂಳೂ ಹೇಗೆ ಕಲ್ಪಿತಗಳೋ, ಹಾಗೆಯೇ ಮಾಯೆಗೂ ಅದರ ಕಾರ್ಯಗಳಾದ ದೇಹಾದಿಗಳಿಗೂ ಸಾಕ್ಷಿಯಾದ ಆತ್ಮನಲ್ಲಿ ಆಕಾಶ ವಾಯುಗಳಂತೆ ಸಂಬಂಧವು ಕಲ್ಪಿತವಾದುದು. ಈ ಸ್ಥೂಲ ಶರೀರಕ್ಕಿಂತ ಹೆಚ್ಚಾದ ಮತ್ತೊಂದು ಶರೀರವಿದೆ. ಅದಕ್ಕೆ ಕರಚರಣಾದಿ ಅವಯವಗಳಿಲ್ಲ. ಅದು ಪರಮ ಸೂಕ್ಷ್ಮವಾಗಿದೆ. ನೋಡುವುದಕ್ಕೆ ಕಾಣದು ಕಿವಿಯಿಂದ ಕೇಳಲಾಗದು. ಈ ವಾಸನಾಮಯವಾದ ಅವ್ಯಕ್ತ ಶರೀರ ವನ್ನು ಲಿಂಗ ಶರೀರವೆನ್ನುತ್ತಾರೆ; ಜೀವನೆಂದು ಹೇಳುತ್ತಾರೆ. ಇದರ ಸಂಬಂಧದಿಂದಲೇ ಆತ್ಮನಿಗೆ ಜನ್ಮಾದಿಗಳ ಸಂಬಂಧವಿದೆ. ಅವಿದ್ಯಾ ಕಲ್ಪಿತಗಳಾದ ಈ ಸ್ಥೂಲಸೂಕ್ಷ್ಮ ಶರೀರಗಳು ಸ್ವಸ್ವರೂಪ ಜ್ಞಾನದಿಂದ ನಷ್ಟವಾದರೆ ಅದನ್ನೇ ಬ್ರಹ್ಮಜ್ಞಾನವೆಂದೂ, ಮೋಕ್ಷವೆಂದೂ ಕರೆಯುವರು. ಮಾಯೆಯ ಎರಡು ರೂಪಗಳಿಂದ ಈ ಸ್ಥೂಲ ಸೂಕ್ಷ್ಮಗಳು ನಾಶವಾದರೆ ಜೀವನು ತನ್ನ ನಿಜರೂಪವಾದ ಪರಬ್ರಹ್ಮನಲ್ಲಿ ಲೀನವಾಗುತ್ತಾನೆ ಆಗ ಈ ಮಾಯೆಯು ಕಟ್ಟಿಗೆಯು ಉರಿದು ಹೋಗಿರುವ ಅಗ್ನಿಯಂತೆ ತನಗೆ ತಾನೇ ಶಾಂತವಾಗುತ್ತದೆ. ಇದೇ ಜೀವನ್ಮುಕ್ತಾವಸ್ಥೆಯು. ಇದನ್ನೇ ತುರೀಯವೆಂದೂ ಕರೆಯುತ್ತಾರೆ ವೇದ ರಹಸ್ಯನಾದ ನಿರ್ಗುಣ ನಿರ್ವಿಕಾರನಾದ ಪರ ಬ್ರಹ್ಮನ ಜನ್ಮ ಕರ್ಮಗಳ ರಹಸ್ಯವನ್ನು ಲೋಕೋದ್ಧಾರಕ್ಕಾಗಿ ನಿರ್ಗುಣನು ಸಗುಣನಾದ ರಹಸ್ಯವನ್ನು ಕವಿಗಳು ಹಾಡಿ ಹೊಗಳುತ್ತಾರೆ

**ಶೌನಕ**—ಹಾಗಾದರೆ ಜನ್ಮಗಳು ಬರುವುದಾದರೆ ಜೀವನಿಗೂ ಪರಮಾತ್ಮನಿಗೂ ಹೆಚ್ಚುಗಾರಿಕೆಯೇನು ?

**ಸೂತ**—ಜೀವನು ಲಿಂಗಶರೀರದ ಸಂಬಂಧದಿಂದ ಜನ್ಮವೆತ್ತುತ್ತಾನೆ. ಆತನು ಪರಾಧೀನನು, ಅಂದರೆ ಮಾಯೆಯ ಗುಣಗಳಿಗೆ ಅಧೀನನು ವಾಸನಾರೂಪವಾದ ಸಂಕಲ್ಪ ಚಕ್ರದೊಳಗೆ ಸಿಕ್ಕಿ ಜನ್ಮ ಮರಣಗಳ ಸುಳಿಯಲ್ಲಿ ಮುಳುಗುತ್ತಾ ಬೀಳುತ್ತಾ ಸಂಕಟಪಡುತ್ತಾನೆ. ಪರಮಾತ್ಮನು ಸ್ವತಂತ್ರನು. ಮಾಯೆಯು ಅವನಿಗೆ ಅಧೀನವಾಗಿ ಆತನು ಹೇಳಿದಂತೆ ಕೇಳುತ್ತದೆ. ಆತನು ಅಮೋಘ ಲೀಲೆಯಿಂದಲೇ ಈ ಜಗತ್ತನ್ನು ಸೃಷ್ಟಿಮಾಡುತ್ತಾನೆ. ಇದರ ಪಾಲನೆಯು ಆತನಿಗೆ ಒಂದು ಲೀಲೆಯೇ. ಇದರ ಲಯವೂ—ನಾಶವೂ ಸಹ ಆತನ ಲೀಲಾ ನಾಟಕದ ಒಂದು ಅಂಕ ಮಾತ್ರ. ಪ್ರಾಣಿಗಳ ಹೃದಯದಲ್ಲಿ ನಿಂತು ಇಂದ್ರಿಯ ಭೋಗಗಳನ್ನು ಅನುಭವಿಸಿದರೂ ಆತನು ಸರ್ವಸ್ವತಂತ್ರನು. ಇವೆಲ್ಲವನ್ನೂ ಮೀರಿರುವುದರಿಂದ ಈ ಜಗತ್ತಿನ ಮಾಯೆಯ ಗುಣಗಳ ಲೇಪವಾತನಿಗಾಗದು.

ದಡ್ಡನಿಗೆ ನಾಟಕದಲ್ಲಿನ ನಟನ ಲೀಲಾ ವೇಷ ಭೂಷಣಗಳ ರಹಸ್ಯವು ಗೊತ್ತಾಗುವುದೆ ? ಹಾಗೆಯೇ ಈ ಜಗನ್ನಿಯಾಮಕನ ಲೀಲೆಗಳನ್ನು ಅಜ್ಞಾನಿಯು ತರ್ಕ ವಿತರ್ಕಗಳಿಂದ ತಿಳಿಯಲಾರನು. ಆ ಪರಮೇಶ್ವರನು ಮನಸ್ಸು ಮತ್ತು ಮಾತುಗಳಿಂದ ಅನೇಕ ನಾಮರೂಪಗಳಾಗಿ ಹರಡಿದ್ದಾನೆ. ನಿಶ್ಚಲ ಭಾವದಿಂದ—ಸರಳ ಭಾವದಿಂದ—ನಿರಂತರ ಭಕ್ತಿಯಿಂದ ಪರಮಾತ್ಮನ ಭಜನೆಯನ್ನು ಯಾವಾತನು ಮಾಡುವನೋ ಆತನೊಬ್ಬನೇ ದೇವನ ಪದವಿಯನ್ನು ಅರ್ಥಮಾಡಿಕೊಳ್ಳಬಲ್ಲನು, ಅಂದರೆ ಭಕ್ತಿಮಾರ್ಗವು ಎಲ್ಲಕ್ಕೂ ಸುಲಭವಾದ ಸರಳ ಮಾರ್ಗವು ಆದರಿಂದಲೇ ಭಗವತ್ತತ್ವ ತಿಳಿಯಲು ಬಹಳ ಅನುಕೂಲವಾಗುವುದು. ಆದುದರಿಂದ ಎಲೈ ಮುನಿಗಳೇ ! ನೀವು ಧನ್ಯರು ! ವಿಶ್ವನಾಥನಾದ ವಾಸುದೇವನಲ್ಲಿ ನಿಮ್ಮ ಮನಸ್ಸನ್ನಿಡಿರಿ. ಪುನಃ ಜನ್ಮ, ಮರಣಗಳ

ಚಕ್ರಕ್ಕೆ ಸಿಕ್ಕಲಾರಿರಿ.

**ಶೌನಕ**—ಸೂತ ಪುರಾಣಿಕರೆ! ನಿಮ್ಮಿಂದ ನಾವು ಧನ್ಯರು. ನಿಜವಾಗಿಯೂ ನೀವು ಅದ್ಭುತ ಭಕ್ತಿಶಾಸ್ತ್ರವನ್ನು ಹೇಳುತ್ತಿರುವಿರಿ.

**ಸೂತ**—ನಿಜ! ಇದು ನಿಜವಾಗಿಯೂ ಅದ್ಭುತ ಶಾಸ್ತ್ರವೇ ಸರಿ. ಏಕೆಂದರೆ ಈ ಭಾಗವತವೆಂಬ ಹೆಸರಿನ ಪುರಾಣವು ವೇದಕ್ಕೆ ಸಮಾನವಾದುದು. ಇದರಲ್ಲಿ ಈಶ್ವರ ಚರಿತ್ರೆಯೆಲ್ಲ ಚೆನ್ನಾಗಿ ವರ್ಣಿಸಲ್ಪಟ್ಟಿದೆ. ವೇದವ್ಯಾಸ ಮುನಿಯು ಇದನ್ನು ರಚಿಸಿದವರು. ಬ್ರಹ್ಮಜ್ಞಾನಿಗಳಲ್ಲೊಬ್ಬನಾದ ತನ್ನ ಮಗ ಶುಕಮಹಾಮುನಿಗಳಿಗೆ ಲೋಕ ಕಲ್ಯಾಣಕ್ಕಾಗಿ ಇದನ್ನು ಬೋಧಿಸಿದರು. ಆತನು ಗಂಗಾತಟದಲ್ಲಿ ಋಷಿ, ಮುನಿಗಳಿಂದ ಒಡಗೂಡಿದ ಪರೀಕ್ಷಿತ್ ರಾಜನಿಗೆ ಉಪದೇಶಮಾಡಿ ಆತನನ್ನು ಉದ್ಧರಿಸಿದರು. ಶ್ರೀಕೃಷ್ಣಪರಮಾತ್ಮನು ತಾನು ಪರಂಧಾಮಕ್ಕೆ ಹೋಗುವಾಗ, ಧರ್ಮ, ಜ್ಞಾನಾದಿಗಳನ್ನು ತನ್ನೊಡನೆಯೇ ತೆಗೆದುಕೊಂಡು ಹೋಗಲು ಜನಗಳು ಅಜ್ಞಾನಿಗಳಾದರು. ಅವರ ಬುದ್ಧಿಯು ಮಂದವಾಯಿತು. ಇಂತಹವರ ಉದ್ಧಾರಕ್ಕಾಗಿಯೇ ಈ ಪುರಾಣರೂಪ ಸೂರ್ಯನ ಉದಯವಾಯಿತೆಂದು ಹೇಳಬಹುದು. ಪರಮ ತೇಜಸ್ವಿಯಾದ ಶುಕಮುನಿಯು ಪರೀಕ್ಷಿದ್ರಾಜನಿಗೆ ಇದನ್ನು ಹೇಳುತ್ತಿದ್ದಾಗ ನಾನೂ ಅಲ್ಲಿಗೆ ಹೋದೆನು. ಅಲ್ಲಿ ನಾನು ಶ್ರವಣಮಾಡಿದ ಈ ಶಾಸ್ತ್ರವನ್ನು ನನ್ನ ಬುದ್ಧಿಗೆ ತೋಚಿದಂತೆ ನಿಮ್ಮಗಳಿಗೆ ಹೇಳುವೆನು ಕೇಳಿರಿ.



# ದ್ವಿತೀಯ ಕಿರಣ

---

ಸೂತರು ಭಾಗವತವನ್ನು ಪ್ರಾರಂಭ ಮಾಡಬೇಕೆಂದು ಸಿದ್ಧವಾದಾಗ ಆ ಋಷಿಗಳಲ್ಲಿ ಶ್ರೇಷ್ಠರಾದ ಶೌನಕರು ಈ ರೀತಿ ಪ್ರಶ್ನೆ ಮಾಡಿದರು.

**ಶೌನಕ**—ಮ ಹಾ ಭಾ ಗ ! ಸೂತರೇ ! ನೀವು ವಕ್ತೃ ಶ್ರೇಷ್ಠರು ! ಪರಮಾತ್ಮನ ಚರಿತ್ರೆಯನ್ನು ನಮಗೆ ಹೇಳಿರಿ. ಯಾವ ಯುಗದಲ್ಲಿ ಯಾವ ಸಂದರ್ಭದಲ್ಲಿ ವ್ಯಾಸರು ಈ ಗ್ರಂಥವನ್ನು ರ ಚಿ ಸಿ ದ ರು ? ಆತನ ಮಗನಾದ ಶುಕಯೋಗಿಯು ಬ್ರಹ್ಮನಿಷ್ಠರು. ಸಮದರ್ಶಿಗಳು. ಭೇದರಹಿತರು. ಆತ್ಮಾನುಭವಿಗಳು. ಮಾಯಾ ಮೋಹದಿಂದ ಮುಕ್ತರು. ಬಾಲೋನ್ಮತ್ತರಂತೆ ಸಂಚಾರಮಾಡುವವರೆಂದು ಕೇಳಿದ್ದೇವೆ. ಹುಟ್ಟುತ್ತಲೇ ಸಂನ್ಯಾಸಗ್ರಹಣಮಾಡಿ ವನಕ್ಕೆ ಹೊರಟಾಗ ಆತನ ನಿರ್ಲಿಪ್ತತೆಯನ್ನು ಅಪ್ಸರ ಸ್ತ್ರೀಯರು ಪರಿಚಯಮಾಡಿಕೊಟ್ಟ ರೆಂದೂ ಕೇಳಿದ್ದೇವೆ. ಅವರು ಹಸುವಿನ ಹಾಲು ಕರೆಯುವಷ್ಟು ಹೊತ್ತೂ ಒಂದು ಸ್ಥಳದಲ್ಲಿ ನಿಲ್ಲುವುದಿಲ್ಲವೆಂಬೂ ಕೇಳಿರುವೆವಲ್ಲ! ಅಂ ತ ಹು ದ ರ ಲ್ಲಿ ಅವರು ಹುಚ್ಚರಂತೆ ಜನಸಂಪರ್ಕ ವಿಹೀನವಾದ ಸ್ಥಳದಲ್ಲಿ ತಿರುಗುತ್ತಿರುವುದನ್ನು ಬಿಟ್ಟು ಗಂಗಾ ತಟದಲ್ಲಿ—ರಾಜ ಸಭೆಯಲ್ಲಿ ನಿಜವಾಗಿಯೂ ಕುಳಿತು ಈ ಶಾಸ್ತ್ರವನ್ನು ಬೋಧಿಸಿದರೆಂಬುದನ್ನು ನಂಬುವುದು ಹೇಗೆ ? ಅಭಿಮನ್ಯು ಪುತ್ರನಾದ ಪರೀಕ್ಷಿದ್ರಾಜನು ಪರಮ ಭಗವದ್ಭಕ್ತನೆಂದು ಕೇಳಿದ್ದೇವೆ. ಪಾಂಡವ ವಂಶದ ಕೀರ್ತಿಯನ್ನು ಪ್ರಕಾಶಪಡಿಸುವ ಆ ರಾಜನು ಯೌವನದಲ್ಲಿ ರಾಜ್ಯ ಸುಖ ಭೋಗಗಳನ್ನು ತ್ಯಜಿಸಿ ಗಂಗಾತಟದಲ್ಲಿ ಪ್ರಾಣತ್ಯಾಗಕ್ಕೆ ಉದ್ಯುಕ್ತನಾದನೆ ? ಆತನ ಚ ರಿ ತ್ರೆ ಯ ನ್ನೆ ಲ್ಲಾ ವಿಸ್ತಾರವಾಗಿ ಹೇಳಿರಿ. ನಾವು ಕೇಳಿದುದಕ್ಕೆಲ್ಲಾ ಮತ್ತು ಕೇಳದೆ ಬಿಟ್ಟಿರುವುದಕ್ಕೆಲ್ಲಾ ತಕ್ಕ

ಉತ್ತರ ಸಮಾಧಾನಗಳನ್ನು ಕೊಟ್ಟು ಅನುಗ್ರಹಿಸಿ.

**ಸೂತರು**—ತ್ರೇತಾಯುಗದ ಕೊನೆಯಾಗಿ ದ್ವಾಪರಯುಗವು ಪ್ರಾರಂಭವಾದಾಗ ಉಪರಿಚರವಸುವಿನ ವೀರ್ಯದಿಂದ ಹುಟ್ಟಿದ ಪರಾಶರರಿಂದ ಸತ್ಯವತಿಯಲ್ಲಿ ವ್ಯಾಸರ ಜನ್ಮವಾಯಿತು. ಆ ವ್ಯಾಸರು ಒಂದಾವೃತ್ತಿ ಸೂರ್ಯೋದಯಾನಂತರ ಸ್ನಾನ-ಅರ್ಘ್ಯಾದಿ ನಿತ್ಯಕರ್ಮಗಳನ್ನು ಮಾಡಿ ಸರಸ್ವತೀ ನದಿಯ ಪವಿತ್ರ ತೀರದಲ್ಲಿ ಒಂದು ಕಡೆ ಏಕಾಂತದಲ್ಲಿ ಕುಳಿತಿದ್ದರು. ಭೂತ, ಭವಿಷ್ಯತ್ ವರ್ತಮಾನಗಳನ್ನು ಬಲ್ಲ ಆ ಮಹಾಜ್ಞಾನಿಯು ದಿವ್ಯದೃಷ್ಟಿಯಿಂದ ಮುಂದಿನ ಯುಗದಲ್ಲಿ ಯುಗಧರ್ಮವು ತಲೆಕೆಳಗಾಗುವುದೆಂಬುದನ್ನೂ, ಜನಗಳು ಭಕ್ತಿ, ಶ್ರದ್ಧಾ, ಶಕ್ತಿ, ತೇಜಸ್ಸುಗಳಿಲ್ಲದೆ ಅಲ್ಪಾಯುಗಳಾಗಿ ಹುಟ್ಟುವುದನ್ನೂ ತಿಳಿದು ಎಲ್ಲಾ ವರ್ಣಾಶ್ರಮಗಳವರ ಅನುಗ್ರಹಕ್ಕಾಗಿ ಯೋಚಿಸಲಾರಂಭಿಸಿದನು. ವೇದ ವಿಧಿಯನ್ನನುಸರಿಸಿ ಯಜ್ಞಾದಿ ಕರ್ಮಗಳನ್ನು ಮಾಡುವುದಕ್ಕೆ ಅನುಕೂಲವಾಗುವಂತೆ ವೇದಗಳನ್ನು ನಾಲ್ಕು ವಿಭಾಗವಾಗಿ ಮಾಡಿದರು. ಇತಿಹಾಸ ಪುರಾಣ ರೂಪವಾದ ಐದನೆಯ ವೇದವನ್ನು ಸಿದ್ಧಮಾಡಿದರು. ನಾಲ್ಕು ವೇದಗಳಲ್ಲಿ ಋಗ್ವೇದವನ್ನು ಪೈಲ ಋಷಿಗೂ, ಯಜುರ್ವೇದವನ್ನು ವೈಶಂಪಾಯನಿಗೂ, ಸಾ ಮ ವೇ ದ ವ ನ್ನು ಜೈಮಿನಿಗೂ, ಅಭಿಚಾರಮೂಲವಾದ ಅಥರ್ವಣವೇದವನ್ನು ಆಂಗಿರಸ ವಂಶಜನಾದ ಸುಮಂತು ಋಷಿಗೂ ಕೊಟ್ಟು, ಐದನೆಯ ವೇದವಾದ ಇತಿಹಾಸ ಪುರಾಣಗಳನ್ನೇ ನನ್ನ ತಂದೆಯಾದ ರೋಮಹರ್ಷಣ ಮಹಾಮುನಿಗೆ ಉಪದೇಶಮಾಡಿದರು. ಆಯಾ ಋಷಿಗಳು ತಮ ತಮಗೆ ಬಂದ ವೇದಗಳನ್ನು ಅನೇಕ ಶಾಖೆಗಳನ್ನಾಗಿ ಮಾಡಿ ತಮ್ಮ ಶಿಷ್ಯರಿಗೆ ಹೇಳಿಕೊಟ್ಟುದರಿಂದ ಈಗ ವೇದಗಳಲ್ಲಿ ಅನೇಕ ಶಾಖೆಗಳಾಗಿವೆ. ವ್ಯಾಸರು ದೀನದಯಾಳುಗಳು. ಸ್ತ್ರೀ, ಶೂದ್ರ ಮುಂತಾದ ವೇದ್ಯ ಶಾಸ್ತ್ರಜ್ಞಾನವಿಲ್ಲದ ಜನಗಳಿಗಾಗಿ ಬಹಳ ಕರುಣೆಯಿಂದ ವೇದಗಳ ಸಾರವನ್ನೆಲ್ಲಾ ಭಾರತ ಆಖ್ಯಾನದಲ್ಲಿ ತುಂಬಿ ಅದರಿಂದ ಬಹು ದೊಡ್ಡ ಲೋಕೋಪಕಾರಮಾಡಿದ್ದಾರೆ. ಹ ಗ ಲಿ ರು ಳೂ ಅವರ

ಯೋಚನೆಯೊಂದೇ. ಅದು ದೀನ ದುಃಖಿಗಳ ಸಂಕಟನಿವಾರಣೋ ಪಾಯವನ್ನು ಹುಡುಕುತ್ತಿರುವುದು. ಇಷ್ಟು ಮಾಡಿದರೂ ಅವರಿಗೆ ತೃಪ್ತಿಯಾಗಲಿಲ್ಲ. ಒಂದು ದಿನ ಸರಸ್ವತೀ ನದೀ ತೀರದಲ್ಲಿ ಕುಳಿತು ತಮ್ಮಲ್ಲಿಯೇ 'ನಾನು ವೇದಗಳನ್ನೆಲ್ಲಾ ವಿಭಾಗಮಾಡಿದೆ. ಇತಿಹಾಸ, ಪುರಾಣಗಳನ್ನೆಲ್ಲಾ ಬರೆದು ಅವುಗಳಲ್ಲಿ ಧರ್ಮ ರಹಸ್ಯಗಳನ್ನು ತುಂಬಿ ದ್ದೇನೆ. ಮಹಾಭಾರತದಲ್ಲಿ ಧರ್ಮ, ಜ್ಞಾನ, ನೀತಿ, ವೈರಾಗ್ಯ, ವೇದಾಂತಗಳನ್ನೆಲ್ಲಾ ಅಡಕಮಾಡಿದ್ದೇನೆ. ಆದರೂ ನನಗೆ ಸಮಾಧಾನವಾಗಲೊಲ್ಲದು. ಮಾಡುವುದೇನೋ ಇನ್ನೂ ಬಾಕಿ ಇದೆ ಎಂದೇ ತೋರುತ್ತದೆ. ಏನು ಮಾಡಲಿ!' ಎಂದು ಯೋಚಿಸು ತ್ತಿರುವಷ್ಟರಲ್ಲಿ ನಾರದ ಮಹರ್ಷಿಗಳು ವ್ಯಾಸಾಶ್ರಮಕ್ಕೆ ಬಂದರು. ವೀಣಾಪಾಣಿಯಾದ ಆ ದೇವರ್ಷಿಯು ವ್ಯಾಸರ ಸಮೀಪದಲ್ಲಿ ಕುಳಿತು ಮುಗುಳುನಗೆ ನಗುತ್ತಾ ಹೇಳಿದರು.

**ನಾರದ**—ಹೇ ಪರಾಶರಪುತ್ರ! ಮಹಾಭಾಗ! ನಿನ್ನ ಶರೀರಾಭಿಮಾನಿಯಾದ ಜೀವಾತ್ಮನು ಶರೀರದಿಂದಲೂ, ಮನೋಮಯ ಪರಮಾತ್ಮಾ ಮನಸ್ಸಿನಿಂದಲೂ ಸುಖಿಯಾಗಿದ್ದಾನೆಯೇ? ತಿಳಿಯಬೇಕಾದ ಧರ್ಮ ಗಳೆಲ್ಲಾ ನಿಮಗೆ ತಿಳಿದೇ ಇವೆ. ಮಹಾಭಾರತ ರೂಪಿ ಸಮುದ್ರ ದೊಳಗೆ ನೀವು ನಿಮ್ಮ ಜ್ಞಾನವೆಲ್ಲವನ್ನೂ ಅಡಕಮಾಡಿಬಿಟ್ಟಿದ್ದೀರಿ. ಬ್ರಹ್ಮ ತತ್ವವನ್ನು ತಿಳಿದಿದ್ದೀರಿ. ಆದರೂ ನೀವು ಏನನ್ನೋ ಚಿಂತಿಸು ತ್ತಿರುವಂತೆ ತೋರುತ್ತಿದೆ. ಅದೇತಕ್ಕೆ?

**ವ್ಯಾಸ**—ಹೇ ಶಿವ! ನಾರದ ಮಹರ್ಷಿ! ನೀವು ಹೇಳುವುದೆಲ್ಲಾ ಸತ್ಯ. ನಾನು ಎಲ್ಲ ಧರ್ಮಗಳನ್ನೂ ವಿಚಾರಮಾಡಿ ತಿಳಿದಿದ್ದೇನೆ. ಬ್ರಹ್ಮ ತತ್ವವನ್ನೂ ತಿಳಿದಿದ್ದೇನೆ. ಆದರೂ ನನ್ನ ಆತ್ಮನಿಗೆ ಶಾಂತಿ ಯಿಲ್ಲ. ನಾನು ಮಾಡಬೇಕಾದುದಾವುದೋ ಬಾಕಿ ಉಳಿದಿರುವಂತೆ ತೋರುತ್ತಿದೆ. ನೀವು ಬ್ರಹ್ಮ ಮಾನಸ ಪುತ್ರರು. ನಿಮಗೆ ತಿಳಿಯದ ರಹಸ್ಯವಾವುದೂ ಇಲ್ಲ; ಏಕೆಂದರೆ ಜಗತ್ಪತಿಯಾದ, ಸೃಷ್ಟಿ, ಸ್ಥಿತಿ,

ಲಯ ಕರ್ತೃವಾದ ಪರಮಾತ್ಮನನ್ನು ಉಪಾಸನೆಮಾಡಿ ಮಾಯಾ ಮೋಹದಿಂದ ಬಿಡಲ್ಪಟ್ಟಿರುವಿರಿ. ಲೋಕತ್ರಯಗಳಲ್ಲಿಯೂ ಸೂರ್ಯ ನಂತೆ ಜ್ಞಾನದ ಪ್ರಕಾಶವನ್ನು ಬೀರುತ್ತಿರುವಿರಿ. ಜಗತ್ತಿನ ಒಳಗೂ ಹೊರಗೂ ಸಂಚರಿಸುವ ವಾಯುವಿನಂತೆ ಎಲ್ಲರ ಹೃದಯದ ಭಾವನೆ ಗಳನ್ನೂ ತಿಳಿಯಬಲ್ಲಿರಿ. ನನ್ನ ಮನಸ್ಸಮಾಧಾನವಾಗುವಂತೆ ನಾನು ಮಾಡಬೇಕಾದ ಕಾರ್ಯವಿನ್ನಾವುದಿದೆ? ದಯವಿಟ್ಟು ಅಪ್ಪಣೆ ಕೊಡಿಸಿ.

ನಾರದ— ನನ್ನ ಅಭಿಪ್ರಾಯದಲ್ಲಿ ನೀವು ಪರಮಾತ್ಮನ ನಿರ್ಮಲ ಯಶಸ್ಸನ್ನು ಹೆಚ್ಚಾಗಿ ವರ್ಣಿಸುವ ಗ್ರಂಥವನ್ನು ರಚಿಸಿಲ್ಲವೆಂದು ತೋರುತ್ತದೆ. ಅದೇ ಮನಸ್ಸಿನ ಅಸಂತೋಷಕ್ಕೆ ಕಾರಣವಿರಬಹುದು. ನೀವು ವ್ರತ, ಧರ್ಮ, ಕರ್ಮಗಳನ್ನು ಬೇಕಾದಷ್ಟು ಮಾಡಿರಬಹುದು. ಅವುಗಳ ಆಚರಣೆಯನ್ನು ಪ್ರಚಾರಮಾಡಿರಬಹುದು. ಭಗವಂತನ ಯಶಸ್ಸನ್ನು ಚೆನ್ನಾಗಿ ವರ್ಣನೆಮಾಡದೆ, ಎಂತಹ ಕರ್ಮವನ್ನು ಮಾಡಿದರೂ ಅದನ್ನು ನಿಷ್ಫಲವೆಂದೇ ಭಾವಿಸುತ್ತೇನೆ. ನೀವು ಅಲ್ಲಲ್ಲಿ ಪರಮಾತ್ಮನ ಕೀರ್ತನೆಮಾಡಿರಬಹುದು; ಎಷ್ಟು ಮಾಡಬೇಕೋ ಅಷ್ಟು ಮಾಡಿರ ಲಿಲ್ಲವೆಂದು ಕಾಣುತ್ತದೆ. ವೃದು ಮಧುರ ವಚನಗಳು ಪರಮಾತ್ಮನ ಗುಣ ವರ್ಣನೆಯಿಂದ ಬೆರೆಯದಿದ್ದರೆ ಕಾಕತೀರ್ಥವೆಂದೇ ತಿಳಿಯಲ್ಪಡು ವುದು. ಕಾಗೆಯು ಕೊಚ್ಚೆಯ ಗುಂಡಿಯ ಸ್ನಾನವನ್ನು ಪ್ರೀತಿಸುವಂತೆ ವಿಷಯ ಲೋಲುಪರಾದವರು ಅದನ್ನು ಪ್ರೀತಿಸಬಹುದು. ಪರಮ ಹಂಸರಾದ ಜ್ಞಾನಿಗಳು ಅದಕ್ಕೆ ಬೆಲೆಕೊಡುವುದಿಲ್ಲ. ಕೇಳುವುದಕ್ಕೆ ಕಠಿಣವಾಗಿದ್ದರೂ ಅಸಂಬದ್ಧವಾದಂತೆ ಕಂಡರೂ ಹರಿಚರ್ಚೆಯಿಂದ ಮತ್ತು ಈಶ್ವರ ನಾಮದಿಂದೊಡಗೂಡಿದ ವಾಣಿಯು ಪರಮ ಶ್ರೇಷ್ಠವಾದುದು; ಮತ್ತು ಪಾಪ ಪಂಕವನ್ನು ತೊಳೆಯ ಬಲ್ಲುದು. ಆದುದರಿಂದಲೇ ಸಾಧು—ಮಹಾತ್ಮರು ಪರಮಾತ್ಮನ ಪವಿತ್ರ ನಾಮ ಗಳನ್ನು ಕೇಳುತ್ತಾರೆ. ಹಾಡುತ್ತಾರೆ. ಮತ್ತು ಕೀರ್ತನೆ ಮಾಡುತ್ತಾರೆ. ಭಕ್ತಿಹೀನ ಕರ್ಮವು ಬಂಧನ ರೂಪವು. ಉಪಾಧಿಗಳನ್ನೆಲ್ಲಾ ಬಿಡ

ಸುವ ಬ್ರಹ್ಮಜ್ಞಾನವೂ ಸಹಾ ಪರಮಾತ್ಮಭಕ್ತಿಯಿಂದ ಬೇರೆಯದಿಷ್ಟರೆ ನಿಷ್ಫಲವೆಂದೇ ತಿಳಿಯಲ್ಪಡುವಾಗ ಸಾಧನ ಕಾಲದಲ್ಲಿಯೂ ಫಲಕಾಲ ದಲ್ಲಿಯೂ ದುಃಖಪ್ರದಗಳಾದ ಯಜ್ಞಾದಿ ಕರ್ಮಗಳ ವಿಷಯವನ್ನು ಏನು ಹೇಳೋಣ? ಆದುದರಿಂದ ಭಕ್ತಿಯೊಡಗೂಡದಿರುವ ಕರ್ಮ ವೆಲ್ಲಾ ವ್ಯರ್ಥವೇ ಸರಿ.

ಎಲೈ ಮಹಾಭಾಗ! ವ್ಯಾಸಮಹರ್ಷಿ! ನಿಮ್ಮ ಬುದ್ಧಿಯು ಅಮೋಘ ವಾದುದು! ನೀವು ಪವಿತ್ರ ಯಶಸ್ಸುಳ್ಳವರು! ಸತ್ಯವಾದಿಗಳು ದೃಢವ್ರತರು. ಆದುದರಿಂದ ಸಂಪೂರ್ಣ ಸಂಸಾರಬಂಧನ ದಿಂದ ಬಿಡಿಸಲ್ಪಡುವಂತಹ ಮೋಕ್ಷವನ್ನು ಹೊಂದುವುದಕ್ಕೆ ಅನು ಕೂಲವಾಗುವಂತೆ ಏಕಾಗ್ರಚಿತ್ತದಿಂದ ಈಶ್ವರನನ್ನು ಧ್ಯಾನಮಾಡಿ ಕಲಿ ಕಲ್ಮಷವನ್ನು ನಾಶಮಾಡುವಂತಹ ಹರಿಯ ಯಶಸ್ಸನ್ನೇ ವರ್ಣನೆ ಮಾಡಿರಿ! ಪರಮಾತ್ಮನ ಚರಿತ್ರೆಯನ್ನು ಬಿಟ್ಟು ಅನ್ಯ ವಿಷಯಗಳನ್ನು ವರ್ಣನೆ ಮಾಡುವುದಕ್ಕೆ ಪ್ರಯತ್ನ ಪಡುವವನು ಅಂತಹ ವರ್ಣನೆಗೆ ಸಂಬಂಧಿಸಿದ ನಾಮರೂಪಗಳ ಚಾಂಚಲ್ಯಕ್ಕೆ ಸಿಕ್ಕಿ ವಾಯುವಿನ ಹೊಡೆತಕ್ಕೆ ಸಿಕ್ಕಿದ ನಾವೆಯಂತೆ ಅವಸ್ಥೆಪಡುತ್ತಾನೆ.

ಪ್ರಾಣಿಗಳಿಗೆ ಸ್ವಭಾವವಾಗಿಯೇ ಪ್ರವೃತ್ತಿಮಾರ್ಗದಲ್ಲಿ ಅಲ್ಪಸುಖಗಳನ್ನು ಕೋರುವ ಕಾಮ್ಯ ಕರ್ಮಗಳಲ್ಲಿ ಆಸಕ್ತಿ ಇರುತ್ತದೆ. ನೀವು ಹೆಚ್ಚಾಗಿ ಪ್ರವೃತ್ತಿ ಮಾರ್ಗಕ್ಕೆ ಧರ್ಮಾರ್ಥಗಳಿಗೆ ಉತ್ತೇಜನ ಕೊಡುವಂತಹ ಮಹಾಭಾರತವನ್ನು ಬರೆದಿರುವುದರಿಂದ ನಿಷ್ಕಾಮ ಕರ್ಮರೂಪೀ ನಿವೃತ್ತಿಮಾರ್ಗವನ್ನು ಬ್ರಹ್ಮಜ್ಞಾನಿಗಳು ಹೇಳಿದರೂ ವ್ಯಾಸ ಮಹರ್ಷಿ ಯಂತಹ ಮಹಾನುಭಾವನೇ ಪ್ರವೃತ್ತಿಮಾರ್ಗಕ್ಕೆ ಪ್ರಾಧಾನ್ಯತೆ ಕೊಟ್ಟಿರುವಾಗ ಜನಗಳು ನಿವೃತ್ತಿಮಾರ್ಗವನ್ನು ನಂಬುವಂತೆಯೇ ಇಲ್ಲ. ವಿಚಕ್ಷಣ—ವಿವೇಕಿಯಾದವನು ಮಾತ್ರ ನಿವೃತ್ತಿಮಾರ್ಗದ ಸುಖವನ್ನು ತಿಳಿಯಬಲ್ಲನು. ಅಜ್ಞಾನಿಯು ಅರಿಯಲಾರನು. ಆದುದರಿಂದ ಅಜ್ಞಾನಿಗಳಿಗೆ ಉಪಕಾರವಾಗುವಂತೆ ನಿರ್ಗುಣ

ನಿರ್ವಿಕಾರನಾದ ಪರಮೇಶ್ವರನ ಸಗುಣ ರೂಪದ ಸಂಬಂಧವುಳ್ಳ ಚರಿತ್ರೆಯನ್ನು ವರ್ಣಿಸಿರಿ ! ಮನುಷ್ಯನು ತನ್ನ ವರ್ಣಾಶ್ರಮ ಸಂಬಂಧವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು ತ್ಯಾಗ ಮಾಡಿದರೂ ಚಿಂತೆಯಿಲ್ಲ. ಭಗವದ್ಭಕ್ತಿಯನ್ನು ಮಾತ್ರ ಬಿಡಬಾರದು. ಏಕೆಂದರೆ ಭಕ್ತಿ ಮಾಡುತ್ತಾ ಇದ್ದು ಪೂರ್ಣ ಫಲವನ್ನು ಪಡೆಯದೆ ಮರಣ ಹೊಂದಿದರೆ ಮುಂದಿನ ಜನ್ಮದಲ್ಲಿ ಭಕ್ತನಾಗಿಯೇ ಹುಟ್ಟಿ ತನ್ನ ಸಾಧನೆಯ ಫಲವನ್ನು ಪಡೆಯುತ್ತಾನೆ. ಇದಕ್ಕೆ ಪ್ರತಿಯಾಗಿ ತನ್ನ ಜಾತಿಯ ವರ್ಣ ಧರ್ಮವನ್ನೇ ಅನುಸರಿಸುತ್ತಾ ಭಗವದ್ಭಕ್ತಿಯಲ್ಲಿ ಉದಾಸೀನನಾಗಿದ್ದು ಮರಣ ಹೊಂದಿದರೆ ಕರ್ಮಗಳ ಫಲರೂಪವಾದ ಅಶಾಶ್ವತೆವಾದ ಸ್ವರ್ಗಭೋಗವನ್ನು ಕೆಲವು ಕಾಲ ಅನುಭವಿಸಿ ನಂತರ ಸಂಸಾರ ಚಕ್ರದಲ್ಲಿಯೇ ಬೀಳುತ್ತಾನೆ. ಹದಿನಾಲ್ಕು ಲೋಕಗಳನ್ನು ಸುತ್ತಿ ಸುತ್ತಿ ಬಂದರೂ ಮೋಕ್ಷವು ಸಿಕ್ಕುವುದಿಲ್ಲ. ಜಗತ್ತಿನ ಸ್ವರ್ಗಾದಿ ಸುಖಗಳೆಲ್ಲಾ ಸಹಜವಾಗಿಯೇ ಒದಗುತ್ತವೆ. ಅವುಗಳಿಗೆ ಹೆಚ್ಚು ಪ್ರಯತ್ನವು ಬೇಡ. ಆದರೆ ಮೋಕ್ಷ ಪ್ರಾಪ್ತಿಗೆ ಮಾತ್ರ ಕೈಲಾದಷ್ಟು ಪ್ರಯತ್ನಿಸಬೇಕು. ಭಗವದ್ಭಕ್ತನು ಎಂದಿಗೂ ಸಂಸಾರ ಚಕ್ರದಲ್ಲಿ ಸಿಕ್ಕುವುದಿಲ್ಲ. ಹಿಂದಿನ ಜನ್ಮದಲ್ಲಿ ಭಕ್ತಿರಸದ ಸವಿಯನ್ನು ಅನುಭವಿಸಿದ್ದರೆ ಈ ಜನ್ಮದಲ್ಲಿ ಒಂದು ವೇಳೆ ನೀಚ ಯೋನಿಯಲ್ಲಿ ಹುಟ್ಟಿದರೂ ಹಿಂದಿನ ಜನ್ಮದ ಜ್ಞಾನವಿರುತ್ತದೆ. ಆದುದರಿಂದ ಆತನು ಪರಮಾತ್ಮನ ಅಮೃತ ರಸಮಯ ಚರಣ ಕಮಲಗಳನ್ನು ಬಿಡಲಾರನು.

ಶ್ರೀ ವ್ಯಾಸ ಮಹರ್ಷಿಯೇ ! ಜಗತ್ತು ಈಶ್ವರಮಯವಾದರೂ ಆತನು ಇದರೊಳಗೆ ಸಿಕ್ಕಿಲ್ಲ. ಆತನು ಇದರೊಳಗಿದ್ದರೂ ಅದರ ಬಲೆಯಲ್ಲಿ ಸಿಕ್ಕದೆ ಇದರ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಿದ್ದಾನೆಂಬುದು ನಿಮಗೆ ತಿಳಿದೇ ಇರುವುದಾದರೂ ಪುನಃ ಜ್ಞಾಪಿಸಲಿಚ್ಛಿಸುತ್ತೇನೆ. ನೀವು ಪರಮಾತ್ಮನ ಅಂಶಾವತಾರರು. ಜಗತ್ತಿನ ಕಲ್ಯಾಣಕ್ಕಾಗಿಯೇ ಆತನಿಂದ ಉತ್ಪನ್ನರಾಗಿದ್ದೀರಿ. ನಿಮ್ಮ ಜ್ಞಾನ ದೃಷ್ಟಿಯು ಅಮೋಘವಾಗಿದೆ. ನಿಮ್ಮ ಹೃದಯದಲ್ಲಿ ಬ್ರಹ್ಮ ವಿಚಾರ ಮಾಡಿರಿ. ಹರಿಲೀಲೆ

ಗಳನ್ನು ಜಗತ್ತಿನ ಕಲ್ಯಾಣಕ್ಕಾಗಿಯೇ ವರ್ಣಿಸಿರಿ. ಮನುಷ್ಯನು ತಪಸ್ಸು ಮಾಡಲಿ; ಪುರಾಣವನ್ನು ಕೇಳಲಿ; ನಿತ್ಯ ಕರ್ಮಗಳನ್ನು ಚೆನ್ನಾಗಿ ಆಚರಿಸಲಿ; ಇವೆಲ್ಲವುಗಳ ಆತನ ತೀಕ್ಷ್ಣ ಬುದ್ಧಿ ಮುಂತಾದುವುಗಳ ಫಲವು ಕೇವಲ ಪರಮಾತ್ಮನ ಗುಣ ಗಾನಮಾಡುವ ಭಕ್ತಿಯಲ್ಲಿಯೇ ಕೊನೆ ಮುಟ್ಟಬೇಕು.

ಎಲೈ ಪರಮ ಋಷಿಗಳೆ! ನನ್ನ ಹಿಂದಿನ ಚರಿತ್ರೆಯನ್ನು ನಿಮಗೆ ಈಗ ಹೇಳುತ್ತಿದ್ದೇನೆ. ಸಾವಧಾನರಾಗಿ ಕೇಳಿರಿ. ನಾನು ಪೂರ್ವ ಜನ್ಮದಲ್ಲಿ (ಹಿಂದಿನ ಕಲ್ಪದಲ್ಲಿ) ಒಬ್ಬ ದಾಸೀ ಪುತ್ರನಾಗಿದ್ದೆನು. ನನ್ನ ಗ್ರಾಮಕ್ಕೆ ಒಮ್ಮೆ ಕೆಲವರು ಮಹಾತ್ಮರು ಚಾತುರ್ಮಾಸ್ಯಕ್ಕಾಗಿ (ವರ್ಷಾ ಕಾಲದ ನಾಲ್ಕು ತಿಂಗಳು ಏಕಾಂತ ಭಗವತ್ಸೇವೆ ಮಾಡುವ ಸಂಪ್ರದಾಯ) ಬಂದರು. ನನ್ನ ತಾಯಿಯು ನನ್ನನ್ನು ಅವರ ಸೇವೆಗೆ ಕಳುಹಿಸಿದಳು. ಎಲ್ಲ ಹುಡುಗರಂತೆ ನಾನು ಆಟ ಪಾಟಗಳಲ್ಲಿ ಸಿಕ್ಕದೆ ಅವರ ಸೇವೆಯನ್ನೇ ನನ್ನ ಶೈಲಾದಮಟ್ಟಿಗೆ ಮಾಡುತ್ತಿದ್ದೆನು. ಹೆಚ್ಚು ಮಾತನಾಡದೆ ಶಾಂತ ಸ್ವಭಾವದಿಂದಿರುತ್ತಿದ್ದೆನು. ಆದುದರಿಂದ ಆ ಋಷಿಗಳು ಸಮದರ್ಶಿಗಳಾದರೂ ನನ್ನ ಮೇಲೆ ಹೆಚ್ಚು ಪ್ರೇಮ ಮಾಡಲಾರಂಭಿಸಿದರು. ಅವರ ಆಜ್ಞೆಯಿಂದ ನಾನು ಅವರು ಭೋಜನಮಾಡಿ ಉಳಿದ ಉಚ್ಛಿಷ್ಟವನ್ನು (ಪ್ರಸಾದವನ್ನು) ಊಟ ಮಾಡುತ್ತಿದ್ದೆನು. ಆದರಿಂದ ನನ್ನ ಹಿಂದಿನ ಪಾಪವೆಲ್ಲಾ ನಷ್ಟ ವಾಯಿತು. ದಿನವೂ ಅದನ್ನು ಭೋಜನ ಮಾಡುತ್ತಿದ್ದುದರಿಂದ ನನ್ನ ಚಿತ್ತವು ಶುದ್ಧವಾಗಲಾರಂಭಿಸಿತು. ಮೆಲ್ಲ ಮೆಲ್ಲಗೆ ಅವರ ನಿತ್ಯ ಭಜನೆ, ಪೂಜೆಗಳಲ್ಲಿ ನನಗೆ ಆಸಕ್ತಿಯು ಹೆಚ್ಚಾಗುತ್ತಾ ಬಂದಿತು ಅವರುಗಳು ದಿನವೂ ಶ್ರದ್ಧಾಪ್ರೇಮಗಳಿಂದ ಪರಮಾತ್ಮನ ದಿವ್ಯ ಚರಿತೆಯನ್ನು ವರ್ಣಿಸುತ್ತಿದ್ದರು. ನಾನು ಶ್ರದ್ಧೆಯಿಂದ ಅದನ್ನು ಕೇಳುತ್ತಿದ್ದೆನು. ನನಗೂ ಪರಮಾತ್ಮನಲ್ಲಿ ಭಕ್ತಿ, ಪ್ರೇಮಗಳ ರುಚಿಯು ಹತ್ತುತ್ತಿತ್ತು. ನನಗೆ ಈಶ್ವರನಲ್ಲಿ ಪ್ರೇಮವೂ, ರುಚಿಯೂ ಹುಟ್ಟಿ ದಂತೆಲ್ಲಾ ಭಕ್ತಿಯು ದೃಢವಾಗುತ್ತಿತ್ತು. ಇದರಿಂದ ಈ ಚರಾಚರ

ಪ್ರಪಂಚವೆಲ್ಲಾ ಆ ಪರಮಾತ್ಮನಲ್ಲಿ ಮಾಯೆಯಿಂದ ಕಲ್ಪಿತ ವಾಗಿರು ವುದೆಂಬುವದರ ಅನುಭವವಾಗತೊಡಗಿತು. ಆ ಮಹಾತ್ಮರು ವರ್ಷ ಋತು, ಶರದೃತುಗಳೆರಡರಲ್ಲಿಯೂ ನಿತ್ಯವೂ ಪ ರ ಮಾ ತ್ಮ ನ ಗುಣ ಗಾನ ಮಾಡುತ್ತಿದ್ದುದರಿಂದ ಅದನ್ನು ನಾನು ಪ್ರೇಮ ಪೂರ್ವಕವಾಗಿ ಕೇಳುತ್ತಿದ್ದುದರಿಂದ ನನ್ನ ಅಂತಃಕರಣದಲ್ಲಿಯೂ ತಮೋಗುಣದ, ರಜೋಗುಣದ ದೋಷಗಳೆಲ್ಲಾ ಹೋಗಿ ಶುದ್ಧ ಸಾತ್ವಿಕ ಭಕ್ತಿಯು ಹುಟ್ಟಿತು. ಆ ಮಹಾತ್ಮರು ಅಲ್ಲಿಂದ ಹೊರಡುವಾಗ ದೃಢ ಭಕ್ತಿ ಯಿಂದಲೂ, ವಿನಯದಿಂಲೂ, ಶ್ರದ್ಧೆಯಿಂದಲೂ ಕೂಡಿ ಪಾಪ ಮುಕ್ತ ನಾದ, ಶಾಂತನಾಗ, ದಾಸೀಪುತ್ರನಾದ ನನ್ನ ಮೇಲೆ ದಯೆಯಿಂದ ಭಗವಂತನ ಅನುಗ್ರಹದಿಂದಲೇ ಅವರಿಗೆ ತಿಳಿದಿರುವ ಪರಮ ರಹಸ್ಯ ಜ್ಞಾನವನ್ನು ನನಗೆ ಉಪದೇಶವಾಡಿದರು. ಅವರಿಂದ ಜ್ಞಾನೋಪ ದೇಶವಾದಮೇಲೆ ನನಗೆ ಪರಮ ಪದವನ್ನು ದೊರಕಿಸಿ ಕೊಡುವ ಭಗವನ್ಮಾಯೆಯ ಸ್ವರೂಪವು ಗೊತ್ತಾಯಿತು. ಶಾಸ್ತ್ರವಿಹಿತ ಕಾರ್ಮ್ಯ ಗಳೆಲ್ಲಾ ಜನ್ಮ ಮರಣಗಳ ಜಾಲದಲ್ಲಿ (ಬಲೆಯಲ್ಲಿ) ಸಿಕ್ಕಿಸುವುವು. ಆದರೆ **ಅವೇ ಕರ್ಮಗಳೇ ಕೃಷ್ಣಾರ್ಪಣವಾಗಿ** ಮಾಡಲ್ಪಟ್ಟರೆ ಮೋಕ್ಷ ಕಾರಣಗಳಾಗುವುವು.

"ಪರಮಾತ್ಮನಿಗೆ ಅರ್ಪಣ ಮಾಡಲ್ಪಟ್ಟ ಕರ್ಮಗಳು ಭಕ್ತಿಯೋಗದಿಂದ ಒಡಗೂಡಿದ ಜ್ಞಾನವನ್ನು ಕೊಟ್ಟು ಮೋಕ್ಷಕ್ಕೆ ಸಹಾಯ ಮಾಡು ವುವು. ಆದುದರಿಂದ ಭಕ್ತರು ಕರ್ಮ ಮಾಡಿದರೂ ಭಗವದ್ಪ್ರೀತಿ ಯಲ್ಲಿ ಪರಮಾತ್ಮನು ಅಪ್ಪಣೆ ಕೊಡಿಸುವಂತೆ ಆ ಕರ್ಮಗಳನ್ನೆಲ್ಲಾ ದೇವರಿಗೇ ಅರ್ಪಿಸಿ ಆತನ ಪ ವಿ ತ್ರ ಗು ಣ, ನಾಮ, ಸಂಕೀರ್ತನೆ ಮಾಡುವರು. "ಹೇ ದೇವ! ವಾಸುದೇವ! ನಿನ್ನನ್ನು ಧ್ಯಾನಿಸು ತ್ತೇನೆ. ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣಾ,ರೂ ಪ ಗ ಳಿ ಗೆ ವಂದಿಸುತ್ತೇನೆ." ಎಂದು ಅಮೂರ್ತಿಯಾದವರೂ ಮಂತ್ರಮೂರ್ತಿ ಯಾದ ಯಜ್ಞಪುರುಷನನ್ನು ಭಜಿಸುವವನೇ ಜ್ಞಾನಿಯೆನ್ನಲ್ಪಡುತ್ತಾನೆ. ಹೀಗೆ ಭಜನೆ ಮಾ ಡಿ ದು ದ ರಿಂ ದ ಕೇಶವನು ಜ್ಞಾನರೂಪವಾದ

ಐಶ್ವರ್ಯವನ್ನು-ತನ್ನ ಭಕ್ತಿಯನ್ನು ನನಗೆ ದಯಪಾಲಿಸಿದನು.

**ವ್ಯಾಸ**—ನಾರದಮಹರ್ಷಿ! ನಿಮ್ಮ ಚರಿತ್ರೆಯು ಆನಂದವನ್ನು ಹುಟ್ಟಿಸು ತ್ತಿದೆ. ಆ ಸಾಧುಗಳು ನಿಮ್ಮ ಗ್ರಾಮವನ್ನು ಬಿಟ್ಟು ಹೋದ ಮೇಲೆ ಬಾಲಕರಾದ ನೀವೇನು ಮಾಡಿದಿರಿ? ನಿಮ್ಮ ಮುಂದಿನ ಜೀವನ ವನ್ನು ಹೇಗೆ ಸಾಗಿಸಿದಿರಿ? ಕಾಲವಶರಾಗುವಾಗ ನಿಮ್ಮ ಆ ದಾಸೀ ಪುತ್ರ ದೇಹವನ್ನು ಹೇಗೆ ತ್ಯಾಗ ಮಾಡಿದಿರಿ? ಈ ಜನ್ಮದಲ್ಲಿಯೂ ಆ ಹಿಂದಿನ ಜನ್ಮದ ಕಥೆಯು ಹೇಗೆ ಜ್ಞಾಪಕಕ್ಕೆ ಬಂದಿತು?

**ನಾರದ**—ನನ್ನ ತಾಯಿಯು ಹೆಚ್ಚು ತಿಳಿದವಳಲ್ಲವಾದರೂ ಒಬ್ಬನೇ ಮಗ ನಾದುದರಿಂದ ನನ್ನ ಮೇಲೆ ಬಹಳ ಪ್ರೇಮವಿತ್ತು. ಅವಳಿಗೆ ನನ್ನನ್ನು ಕ್ಷಣವೂ ಬಿಟ್ಟಿರಲಾಗುತ್ತಿರಲಿಲ್ಲ. ಆದರೂ ಕರ್ಮವಶದಿಂದ ಕೆಲಸಕ್ಕೆ ಹೋಗಬೇಕಾಗುತ್ತಿತ್ತು. ಮಹಾತ್ಮರ ಅನುಗ್ರಹದಿಂದ ಜ್ಞಾನವು ವೃದ್ಧಿಯಾಗುತ್ತಿದ್ದುದರಿಂದ ತಾಯಿಯ ಈ ಮೋಹಪಾಶ ದಿಂದ ಹೇಗೆ ಬಿಡುಗಡೆ ಹೊಂದುವುದು ಎಂದೇ ಯೋಚಿಸುತ್ತಿರುವಾಗ ಒಂದು ದಿನ ನನ್ನ ತಾಯಿಯು ಹಸುವಿನ ಹಾಲು ಕರೆಯಲು ಹೋಗಿ ದಾರಿಯಲ್ಲಿ ಹಾವನ್ನು ತುಳಿದಳು. ಮೃತ್ಯುವಿನ ಆಜ್ಞೆಯಂತೆ ಅದು ಅವಳನ್ನು ಕಚ್ಚಲು ಮೃತಳಾದಳು. ನಂತರ ಭಕ್ತೋದ್ಧಾರಕನಾದ ಹರಿಯ ಅನುಗ್ರಹವಾಯಿತೆಂದು ತಿಳಿದು ನಾನು ಉತ್ತರ ದಿಕ್ಕನ್ನು ಕುರಿತು ಪ್ರಯಾಣಮಾಡಿದೆನು. ಪಟ್ಟಣ, ಗ್ರಾಮ, ಹೊಲ, ತೋಟ, ಗದ್ದೆಗಳು, ವನ, ಉಪವನ, ಜಲಾಶಯ ಮುಂತಾದುವು ಗಳನ್ನೆಲ್ಲಾ ದಾಟಿ ಭಯಂಕರ ವನವೊಂದನ್ನು ಹೊಕ್ಕೆನು. ಬಹು ದೂರ ನಡೆದು ಆಯಾಸವಾಗಿದ್ದುದರಿಂದ ಹಸಿವಾಯಿತು. ಬಾಯಾರಿಕೆಯಾಯಿತು. ಅದರಲ್ಲಿ ಸ್ನಾನಮಾಡಿ ನೀರು ಕುಡಿದ ಮೇಲೆ ಆಯಾಸವು ಕಡಿಮೆಯಾಯಿತು.

ನಾನು ಒಂದು ಅರಳಿ ಮರದ ಕೆಳಗೆ ಕುಳಿತು ಪರಮಾತ್ಮ ಸ್ವರೂಪವನ್ನು

ಗುರುಗಳಿಂದ ಹೇಗೆ ಕೇಳಿದ್ದೆನೋ ಹಾಗೆಯೇ ಚಿಂತಿಸಲಾರಂಭಿಸಿದೆನು. ನಾನು ಭಕ್ತಿಭಾವದಿಂದ ಚಿತ್ತವನ್ನು ಏಕಾಗ್ರವಾಗಿಮಾಡಿ ಪರಮಾತ್ಮನ ಚರಣಕಮಲಗಳನ್ನು ಧ್ಯಾನಮಾಡಲಾರಂಭಿಸಿದೆನು. ಆಗ ಪ್ರೇಮವು ಉಕ್ಕಿಬರಲು ನೇತ್ರದಿಂದ ಆನಂದಾಶ್ರುಗಳು ತುಂಬಿಹರಿದುವು. ಮೆಲ್ಲ ಮೆಲ್ಲಗೆ ಸಾಧನೆ ಮುಂದುವರಿಯುತ್ತಿರಲು ಒಂದಾವೃತ್ತಿ ಪರಮಾತ್ಮನ ಪವಿತ್ರ ಮೂರ್ತಿಯು ಪ್ರಕಟವಾಗಿಬಿಟ್ಟಿತು. ಪ್ರೇಮ ವೇಗದಿಂದ ಮೈಯೆಲ್ಲಾ ರೋಮಾಂಚನವಾಯಿತು. ಪರಮಾನಂದವಾಯಿತು. ಆನಂದ ಸಾಗರದಲ್ಲಿ ಮುಳುಗಿದೆನು. ಜಗತ್ತು ಇದೆಯೋ ಇಲ್ಲವೋ ಎಂಬುದು ಗೊತ್ತಾಗಲಿಲ್ಲ. ಇದ್ದಕ್ಕಿದ್ದಂತೆಯೇ ಪರಮಾತ್ಮನ ಆ ದಿವ್ಯ ರೂಪವು ಅಂತರ್ಧಾನವಾಗಲು ನನಗೆ ಮೂರ್ತಿಯು ಕಾಣದೆ ಬಹಳ ದುಃಖವಾಯಿತು, ತುಂಬಾ ನಿರಾಶೆಯಾಯಿತು. ಆ ರೂಪವನ್ನು ಮತ್ತೊಮ್ಮೆ ನೋಡಲು ಉತ್ಸುಕನಾಗಿ ಮನಸ್ಸನ್ನು ಏಕಾಗ್ರವಾಗಿ ಮಾಡಿ ಧ್ಯಾನಿಸಲಾರಂಭಿಸಿದೆನು. ಎಷ್ಟು ಪ್ರಯತ್ನಿಸಿದರೂ ಮೂರ್ತಿಯು ಪ್ರಕಟವಾಗದಿರಲು ಅಸಂತುಷ್ಟನಾದುದರಿಂದ ಪರಮಾತ್ಮನನ್ನು ದರ್ಶನ ಮಾಡಿಯೇ ತೀರಬೇಕೆಂಬ ಉತ್ಕಟೇಚ್ಛೆಯು ಹೆಚ್ಚಾಯಿತು. ಆಗ ನಿರ್ಜನ ವನದಲ್ಲಿ ದೇವನ ದರ್ಶನಕ್ಕಾಗಿ ಬಾರಿ ಬಾರಿಗೂ ಪ್ರಯತ್ನಮಾಡಲಾರಂಭಿಸಿದೆನು. ಆಗ ಗಂಭೀರ—ಮೃದು ಸ್ವರದಿಂದ ನನ್ನ ಶೋಕವನ್ನು ಶಾಂತಮಾಡುವಂತಹ ರೀತಿಯಲ್ಲಿ ಈ ಆಕಾಶ ವಾಣಿಯಾಯಿತು.

"ಎಲೈ ಬಾಲಕ! ಈ ಜನ್ಮದಲ್ಲಿ ನಿನಗೆ ನನ್ನ ದರ್ಶನವಾಗಲಾರದು. ಏಕೆಂದರೆ ಯಾರ ಅಂತಃಕರಣವು ಕಾಮ ಕ್ರೋಧಾದಿಗಳಿಂದ ರಹಿತ ವಾಗಿ ನಿರ್ಮಲವಾಗುವುದಿಲ್ಲವೋ ಅಂತಹ ಅಪಕ್ವ ಯೋಗಿಯು ನನ್ನ ದರ್ಶನವನ್ನು ಪಡೆಯಲಾರನು. ನಿನಗೆ ಒಮ್ಮೆ ಅಂತಃಕರಣದಲ್ಲಿ ದರ್ಶನವಾದುದು ಕೇವಲ ಅನುಗ್ರಹಕ್ಕಾಗಿ—ನಿನ್ನ ಭಕ್ತಿಯನ್ನು ವೃದ್ಧಿಮಾಡುವುದಕ್ಕಾಗಿ ಮಾತ್ರ. ನನ್ನ ಪ್ರೇಮೀ ಭಕ್ತನು ಮೆಲ್ಲ ಮೆಲ್ಲಗೆ ಕಾಮ ಕ್ರೋಧಾದಿ ದೋಷಗಳಿಂದ ಮುಕ್ತನಾಗುತ್ತಾನೆ.

ನಿನಗೆ ಸ್ವಲ್ಪ ಕಾಲದ ಸತ್ಸಂಗದಿಂದಲೇ ಇಂತಹ ದೃಢ ಭಕ್ತಿಯು ಉತ್ಪನ್ನವಾಗಿದೆ. ನೀನು ಈ ನಿಂದನೀಯ ದೇಹವನ್ನು ತ್ಯಾಗಮಾಡಿ ನನ್ನ ಸಂಪೂರ್ಣ ಭಕ್ತನಾಗುವೆ; ನನ್ನಲ್ಲಿ ನಿನ್ನ ಬುದ್ಧಿಯು ಅಚಲವಾಗುವುದು; ನನ್ನ ಕೃಪೆಯಿಂದ ನಿನಗೆ ಕಾಲಾಂತರದಲ್ಲಿಯೂ ಈ ಜನ್ಮದ ಸ್ಮರಣೆಯು ಇರುವುದು."

ಹೀಗೆ ಹೇಳಿ ಆ ಪರಮ ತತ್ವ ರೂಪವಾದ ಅಶರೀರ ವಾಣಿಯು ಸುಮ್ಮನಾಯಿತು. ನಾನೂ ಸಹ ಆ ದೇವ ದೇವನಿಗೆ ತಲೆತಗ್ಗಿಸಿ ನಮಸ್ಕರಿಸಿ ಕೃತಾರ್ಥನಾಗಿದ್ದೇನೆಂದೇ ಭಾವಿಸಿದೆನು. ಲಜ್ಜಾತ್ಯಾಗ ಮಾಡಿ ಈಶ್ವರನ ಪರಮ ಗುಪ್ತ ಕಲ್ಯಾಣ ರೂಪವಾದ ನಾಮವನ್ನೂ, ಲೀಲೆಯನ್ನೂ, ಕೀರ್ತನೆಮಾಡುತ್ತಾ—ಸ್ಮರಣೆಮಾಡುತ್ತಾ ನಿಶ್ಚಲ ಮನಸ್ಸಿನಿಂದ ಸಂತೋಷದೊಡನೆ ಈರ್ಷ್ಯಾ ದ್ವೇಷಗಳನ್ನು ತ್ಯಾಗಮಾಡಿ ಕಾಲದ ಅಂತ್ಯ ದಿನಗಳನ್ನು ನಿರೀಕ್ಷಣೆಮಾಡಲಾರಂಭಿಸಿದೆನು. ಹೀಗೆ ಶ್ರೀ ಕೃಷ್ಣನಲ್ಲಿ ಮನಸ್ಸನ್ನಿಟ್ಟು ಸಂಸಾರದ—ಜಗತ್ತಿನ ಸಂಗವನ್ನೇ ತ್ಯಾಗಮಾಡಿ ಶುದ್ಧ ಚಿತ್ತದಿಂದ ಸಂಚರಿಸುತ್ತಿರಲು ಯುಕ್ತ ಸಮಯದಲ್ಲಿ ತಟ್ಟನೆ ಆಕಾಶದಲ್ಲಿ ಮಿಂಚು ಹೊಳೆಯುವಂತೆ ಮೃತ್ಯುವು ಪ್ರಕಟವಾಯಿತು. ನನ್ನ ಕರ್ಮ ಬಂಧನ ರೂಪವಾದ ದೇಹವು ಭೂಮಿಗೆ ಬಿದ್ದುಬಿಟ್ಟು ದಿವ್ಯ ದೇಹವು ಪ್ರಾಪ್ತವಾಯಿತು.

**ವ್ಯಾಸ**—ದಿವ್ಯ ದೇಹವು ಹೇಗೆ ಪ್ರಾಪ್ತವಾಯಿತು ?

**ನಾರದ**—ಬ್ರಹ್ಮಕಲ್ಪದ ಕೊನೆಯಲ್ಲಿ ಜಗತ್ತನ್ನೆಲ್ಲಾ ತನ್ನೊಳಗೆ ಲೀನಮಾಡಿಕೊಂಡು ಪ್ರಳಯ ಸಮುದ್ರದಲ್ಲಿ ನಿದ್ರಿಸುವ ಬ್ರಹ್ಮನ ಶರೀರದಲ್ಲಿ ಶ್ವಾಸ ರೂಪದಿಂದ ನಾನು ಪ್ರವೇಶಿಸಿದೆನು. ಸಹಸ್ರ ಯುಗಗಳ ಕೊನೆಯಲ್ಲಿ ಬ್ರಹ್ಮನು ನಿದ್ರೆಯಿಂದ ಎಚ್ಚೆತ್ತಾಗ ಪುನಃ ಜಗತ್ತನ್ನು ಸೃಷ್ಟಿಸಲಾರಂಭಿಸಿದನು. ಆಗ ಆತನ ಶ್ವಾಸದಿಂದ ನಾನೂ, ಮರೀಚಿ ಮುಂತಾದ ಬ್ರಹ್ಮರುಗಳೂ ಹುಟ್ಟಿದೆವು. ಆಗಿನಿಂದ ನಾನು ಅಖಂಡ ಬ್ರಹ್ಮಚರ್ಯ ವ್ರತವನ್ನು ಧಾರಣೆಮಾಡಿ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಲೋಕ

ತ್ರಯಗಳ ಒಳಗೂ ಹೊರಗೂ ಮನಬಂದಂತೆ ಸಂಚರಿಸುತ್ತಿರುವೆನು. ಮಹಾವಿಷ್ಣುವಿನ ಕೃಪೆಯಿಂದ ನನ್ನ ಗತಿಯನ್ನಾರೂ ತಡೆಯುವವರಿಲ್ಲ. ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟ ಈ ಶಬ್ದಬ್ರಹ್ಮಮಯವಾದ ವೀಣೆಯನ್ನು ಬಾರಿಸುತ್ತಾ ಹರಿಕಥಾ ಕೀರ್ತನೆ ಮಾಡುತ್ತಾ ಎಲ್ಲೆಲ್ಲಿಯೂ ಸಂಚರಿಸುತ್ತಿರುವೆನು. ನಾನು ಯಾವಾಗ ಈ ಮಂಗಳ ಮಯ ವೀಣೆಯನ್ನು ಬಾರಿಸುವೆನೋ ಆಗ ಕರೆದು ಕೂಗಿದರೆ ಬರುವಂತೆ ದೇವದೇವನು ದರ್ಶನಕೊಡುವನು.

ವಿಷಯ ಭೋಗದ ಇಚ್ಛೆಯಿಂದ ಗಳಿಗೆ ಗಳಿಗೆಗೂ ಚಂಚಲ ಹೃದಯರಾಗುವ—ಸಂಸಾರ ವಿಷಯಗಳಲ್ಲಿಯೇ ಆಸಕ್ತರಾಗಿರುವ ಜನಗಳಿಗೆ—ಸಂಸಾರ ಸಮುದ್ರವನ್ನು ದಾಟುವುದಕ್ಕೆ **ಕೇವಲ ಹರಿ ಚರ್ಚೆ—ಪರಮಾತ್ಮನ ಅದ್ಭುತ ಲೀಲಾವರ್ಣನೆಯೇ** ನಾವೆಯಂತಿರುವುದು. (ಆದುದರಿಂದಲೇ ಲೋಕ ಕಲ್ಯಾಣಕ್ಕಾಗಿಯೂ ನಾನು ಹರಿ ಗುಣಗಳ ಗಾನಮಾಡುತ್ತಿರುವುದು.) ಯಮ, ನಿಯಮಗಳಿಂದೊಡಗೂಡಿದ ಯೋಗಮಾರ್ಗದಿಂದಲೂ ದುರ್ಲಭವಾದ ಆತ್ಮಶಾಂತಿಯು, ಕಲಿಯುಗದಲ್ಲಿ ಕೇವಲ **ಹರಿ ಸೇವೆಯಿಂದಲೇ** ಸಾಧ್ಯವಾಗುವುದು. ಎಲೈ ಪುಣ್ಯಪುರುಷ! ವ್ಯಾಸ ಮಹರ್ಷಿ! ನೀನು ಕೇಳಿದ ನನ್ನ ಆತ್ಮ ಚರಿತ್ರೆಯನ್ನು ನಿನಗೆ ಈಗ ತಿಳಿಸಿದ್ದೇನೆ. ನಿನ್ನ ಆತ್ಮವು ಸಂತೋಷಹೊಂದುವ ಉಪಾಯವನ್ನು ತಿಳಿಸಿದ್ದೇನೆ.

ಎಂದು ಹೇಳುತ್ತಾ ನಾರದ ಮಹರ್ಷಿಯು ವ್ಯಾಸರ ಅಪ್ಪಣೆಯಿಂದ ವೀಣೆಯನ್ನು ಬಾರಿಸುತ್ತಾ ಹೊರಟುಬಿಟ್ಟನು.



# ತೃತೀಯ ಕಿರಣ

ನಾರದರು ಹೊರಟುಹೋದ ನಂತರ ವ್ಯಾಸ ಮಹರ್ಷಿಗಳು ಬ್ರಹ್ಮನದಿಯಾದ ಸರಸ್ವತಿಯ ಪಶ್ಚಿಮ ತಟದಲ್ಲಿರುವ ಶಮ್ಯಾಪ್ರಾಸವೆಂಬ ತಮ್ಮ ಬದರೀ ವೃಕ್ಷಸಹಿತವಾದ ಆಶ್ರಮದಲ್ಲಿ ಕುಳಿತು ಶುದ್ಧಾಚಮನಮಾಡಿ ಮುಂದೇನು ಮಾಡಬೇಕೆಂದು ಯೋಚಿಸಲಾರಂಭಿಸಿದರು. ಭಕ್ತಿಯೋಗದಿಂದ ತಮ್ಮ ಶುದ್ಧಾಂತಃಕರಣದಲ್ಲಿ ಮುಂಚೆ ತಮ್ಮ ಪರಮಪುರುಷನಾದ ಪರಮೇಶ್ವರನನ್ನೂ—ನಂತರ ಆತನ ಮಾಯೆಯನ್ನೂ ನೋಡಿದರು. ಆ ಮಾಯೆಯಿಂದ ಮೋಹಿತನಾದ ಜೀವನು ಆ ಪರಮೇಶ್ವರನ ಅಂಶವಾದಾಗ್ಯೂ ತಾನು ತ್ರಿಗುಣಾತ್ಮಕವಾದ ದೇಹಧಾರಿಯೆಂದು ತಿಳಿದಿರುವುದರಿಂದ ತನ್ನ ಆ ದೇಹಾಭಿಮಾನದಿಂದ ಕರ್ಮವಶನಾಗಿ ಗುಣ ಕರ್ಮಗಳ ಸಂಕೋಲೆಗಳಿಂದ ಕಟ್ಟಲ್ಪಟ್ಟು ಸುಖ ದುಃಖಗಳನ್ನು ಭೋಗಿಸುತ್ತಾನೆಯಾದುದರಿಂದ ಈ ಅನರ್ಥಮೂಲ ಜನ್ಮ—ಮರಣಗಳಿಂದ ತಪ್ಪಿಸಿಕೊಳ್ಳಲು ಸಹಾಯವಾಗುವ ಭಾಗವತ ಸಂಹಿತೆಯನ್ನು ರಚಿಸಿದರು. ಇದನ್ನು ಶ್ರದ್ಧೆಯಿಂದ ಶ್ರವಣಮಾಡಿದರೆ ಶೋಕ, ಮೋಹ, ಭಯಗಳನ್ನು ನಾಶಮಾಡುವ ಶ್ರೀ ಕೃಷ್ಣಭಕ್ತಿಯು ಹುಟ್ಟುವುದು. ವ್ಯಾಸರು ಈ ಭಾಗವತ ಸಂಹಿತೆಯನ್ನು ರಚಿಸಿ ಶುದ್ಧ ನಿವೃತ್ತಿ ಮಾರ್ಗದಲ್ಲಿ ನಿಂತಿರುವ ತಮ್ಮ ಪುತ್ರ ಶುಕ ಮಹರ್ಷಿಗಳಿಗೆ ಉಪದೇಶಮಾಡಿದರು.

**ಶೌನಕ**—ಸೂತ ಪುರಾಣಿಕರೆ! ಶುಕರು ಸ್ವತಸ್ಸಿದ್ಧರು. ಜೀವನ್ಮುಕ್ತರು. ಅಂತಹವರಿಗೆ ಈ ಭಾಗವತ ಪುರಾಣದಲ್ಲಿ ಲಾಭವೇನು ?

**ಸೂತ**—ಆತ್ಮಾರಾಮರಾದ ಮಹಾತ್ಮರು ಜೀವನ್ಮುಕ್ತರಾದರೂ ಸಹ ಪರಮಾತ್ಮನಲ್ಲಿ ನಿಷ್ಕಾಮ ಭಕ್ತಿಯನ್ನಾಚರಿಸುವರು. ಪರಮಾತ್ಮನ ಗುಣಗಳು ಬಹಳ ಮನ ಮೋಹಕವಾದುವು. ಭಕ್ತನಿಗೆ ಎಷ್ಟು ಸಾರ್ತಿ ಅವುಗಳನ್ನು ವರ್ಣಿಸಿದರೂ ತೃಪ್ತಿಯೇ ಇರುವುದಿಲ್ಲ. ವಿಷ್ಣು ಭಕ್ತರಿಗೆ ಪ್ರಿಯರಾದ ವ್ಯಾಸಮಹರ್ಷಿಗಳು ತಾವು ಸ್ವತಃ ಈ ಭಾಗವತವನ್ನು

ರಚಿಸಿದರೂ ಪ್ರತಿ ನಿತ್ಯವೂ ಇದನ್ನು ಗಾನಮಾಡುತ್ತಿರುವರು. ಎಲೈ ಋಷಿಗಳಿರಾ! ರಾಜರ್ಷಿಯಾದ ಪರೀಕ್ಷಿತನ ಜನ್ಮಕರ್ಮಗಳನ್ನೂ, ಆತನಿಗೆ ಮುಕ್ತಿ ಯಾದುದನ್ನೂ ಹೇಳುವೆನು. ಸಾವಧಾನವಾಗಿ ಕೇಳಿರಿ!

ಭಾರತ ಯುದ್ಧದಲ್ಲಿ ಕೌರವ–ಪಾಂಡವ ಪಕ್ಷದ ವೀರರು ವೀರಗತಿಯನ್ನು ಹೊಂದಿದ ನಂತರ–ಭೀಮಸೇನನ ಗದಾಪ್ರಹಾರದಿಂದ ದುರ್ಯೋಧನನ ತೊಡೆಗಳು ಮುರಿದುಹೋದ ನಂತರ ಅಶ್ವತ್ಥಾಮನು ದುರ್ಯೋಧನನಿಗೆ ಈ ಕಾರ್ಯದಿಂದ ಸಂತೋಷವಾಗುವುದೆಂದು ಭಾವಿಸಿ ರಾತ್ರಿಯ ಹೊತ್ತಿನಲ್ಲಿ ಪಾಳಯದಲ್ಲಿ ನಿದ್ರಿಸುತ್ತಿದ್ದ ದ್ರೌಪದಿಯ ಐವರು ಮಕ್ಕಳ ತಲೆಗಳನ್ನು ಕತ್ತರಿಸಿಕೊಂಡು ದುರ್ಯೋಧನನಿಗೆ ತಂದು ಒಪ್ಪಿಸಿದನು. ಆದರೆ ಅದರಿಂದ ದುರ್ಯೋಧನನಿಗೆ ಸಮಾಧಾನವಾಗಲಿಲ್ಲ; ಅಸಮಾಧಾನವೇ ಆಯಿತು. ನಿದ್ರಿಸುತ್ತಿರುವವರ ತಲೆಗಳನ್ನು ಕತ್ತರಿಸು ವಂತಹ ನೀಚ ಕಾರ್ಯವನ್ನು ಶತ್ರುವಾಗಲಿ, ಮಿತ್ರನಾಗಲಿ ಎಲ್ಲರೂ ತಿರಸ್ಕರಿಸುತ್ತಾರೆ. ತಾಯಿಯಾದ ದ್ರೌಪದಿಗೆ ಮಕ್ಕಳ ಮರಣದಿಂದ ಬಹಳ ದುಃಖವಾಗಿ ವಿಲಾಪಮಾಡಲಾರಂಭಿಸಿದಳು ಅವಳ ಕಣ್ಣು ಗಳಿಂದ ದುಃಖಾಶ್ರುಗಳು ಬರಲಾರಂಭಿಸಿದುವು. ಆಕೆಯನ್ನು ಸಮಾಧಾನಪಡಿಸುವುದಕ್ಕಾಗಿ ಅರ್ಜುನನು 'ಎಲೈ ಭದ್ರೇ! ಆತತಾಯಿ ಯಾದ ಈ ಬ್ರಾಹ್ಮಣನ—ಅಶ್ವತ್ಥಾಮನ ತಲೆಯನ್ನು ಕತ್ತರಿಸಿ ನಿನಗೆ ತೋರಿಸುವೆನು. ಪುತ್ರಶೋಕ ಪೀಡಿತಳಾದ ನೀನು ಅದರ ಮೇಲೆ ನಿಂತು ಸ್ನಾನಮಾಡುವೆ!' ಎಂದು ಹೇಳುತ್ತಾ ಕವಚ ಧನುಸ್ಸು ಗಳನ್ನು ತೆಗೆದುಕೊಂಡು ಸಾರಥಿಯಾದ ಶ್ರೀಕೃಷ್ಣನ ಸಮೇತ ರಥ ವನ್ನು ಹತ್ತಿ ಆ ಗುರುಪುತ್ರನನ್ನು ಹಿಂಬಾಲಿಸಿದನು. ಮಕ್ಕಳನ್ನು ಕೊಂದ ಅಶ್ವತ್ಥಾಮನು ತನ್ನನ್ನು ಬೆನ್ನಟ್ಟಿಬರುತ್ತಿರುವ ಅರ್ಜುನನನ್ನು ನೋಡುತ್ತಲೇ ರುದ್ರನ ಭಯದಿಂದ ಓಡಿಹೋದ ಸೂರ್ಯನಂತೆ ಭಯ ಪಟ್ಟು ಓಡಲಾರದೆ ಸೋತು ನಿಂತುಬಿಟ್ಟಾಗ ಪ್ರಾಣರಕ್ಷಣೆಗೆ ಬೇರೆ ಮಾರ್ಗಕಾಣಲಾರದೆ ಉಪಸಂಹಾರಮಾಡುವುದು ತಿಳಿಯದಿದ್ದರೂ

ಯತ್ನವಿಲ್ಲದೆ ಆಚಮನಮಾಡಿ, ಏಕಾಗ್ರಚಿತ್ತದಿಂದ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟುಬಿಟ್ಟನು. ಆಗ ಪ್ರಚಂಡ ತೇಜಸ್ಸು ಪ್ರಕಟವಾಗಿ ಸುತ್ತಲೂ ಆವರಿಸಿಕೊಂಡುಬಿಟ್ಟಿತು. ಆಗ ಅರ್ಜುನನು ಶ್ರೀ ಕೃಷ್ಣ ಪರಮಾತ್ಮನನ್ನು ಸ್ತೋತ್ರಮಾಡಲಾರಂಭಿಸಿದನು.

"ದೇವ ದೇವ! ಆದಿಪುರುಷ! ಮಾಯಾರಹಿತ! ನೀನು ಸಾಕ್ಷಾತ್ ಜಗದೀಶ್ವರನು. ನಿನ್ನ ಚಿಚ್ಛಕ್ತಿಯಿಂದ ಮಾಯೆಯನ್ನು ಮೀರಿ ನಿನ್ನ ಕೈವಲ್ಯ–ಜ್ಞಾನಮಯ ಸ್ವರೂಪದಲ್ಲಿ ನಿಂತಿರುವೆ. ನಿನ್ನ ಸ್ವಶಕ್ತಿಯಿಂದ ಮಾಯಾಮೋಹಿತರಾದ ಜೀವರಾಶಿಗಳನ್ನು ಉದ್ಧರಿಸುತ್ತಿರುವೆ ನಿನ್ನ ಈಗಿನ ಅವತಾರವೂ ಸಹ ಭೂಭಾರಹರಣಕ್ಕಾಗಿಯೂ ನಿನ್ನ ಅನನ್ಯ ಭಕ್ತರ ಕಲ್ಯಾಣಕ್ಕಾಗಿಯೂ ಧ್ಯಾನಾದಿ ಸೇವೆಗಳ ಅನುಕೂಲಕ್ಕಾಗಿಯೂ ಆಗಿರುವುದು. ದೇವ! ಈ ಮಹಾ ತೇಜಸ್ಸು ಎಲ್ಲಿಂದ ಬಂದಿದೆಯೋ ತಿಳಿಯದು. ಯಾರಿಂದ ಇದು ಪ್ರಾಪ್ತವಾಗಿದೆಯೋ ಅದೂ ಗೊತ್ತಿಲ್ಲ. ನಾಲ್ಕು ಕಡೆಗಳಿಂದಲೂ ಈ ಉಗ್ರ ತೇಜಸ್ಸು ನನ್ನ ಕಡೆಗೇ ಬರುತ್ತಿರುವುದಲ್ಲಾ! ಏನುಮಾಡಲಿ ? ಹೇಳು "

"ಅರ್ಜುನ! ಇದು ದ್ರೋಣ ಪುತ್ರನಾದ ಅಶ್ವತ್ಥಾಮನಿಂದ ಬಿಡಲ್ಪಟ್ಟ ಬ್ರಹ್ಮಾಸ್ತ್ರವು ಆತನಿಗೆ ಇದನ್ನು ಉಪಸಂಹಾರ ಮಾಡುವುದು ತಿಳಿಯದಿದ್ದರೂ ಪ್ರಾಣ ರಕ್ಷಣೆಯ ಗಾಬರಿಯಿಂದ ಪ್ರಯೋಗಮಾಡಿ ಬಿಟ್ಟಿದ್ದಾನೆ. ಮತ್ತಾವ ಅಸ್ತ್ರದಿಂದಲೂ ಇದು ಶಾಂತವಾಗಲಾರದು. ಆದುದರಿಂದ ನೀನು ಬ್ರಹ್ಮಾಸ್ತ್ರದಿಂದಲೇ ಇದನ್ನು ಸಂಹಾರಮಾಡಬೇಕು. ನೀನು ಅಸ್ತ್ರವಿದ್ಯೆಯಲ್ಲಿ ನಿಪುಣನಾಗಿದ್ದೀಯೆ" ಎಂದು ಶ್ರೀ ಕೃಷ್ಣನು ಅಪ್ಪಣೆಕೊಡಿಸಲು ಅರ್ಜುನನು ಆಚಮನಮಾಡಿ ದೇವನಿಗೆ ಬಲವಂದು ಬ್ರಹ್ಮಾಸ್ತ್ರವನ್ನು ಅನುಸಂಧಾನಮಾಡಿಬಿಟ್ಟನು. ಎರಡು ಬ್ರಹ್ಮಾಸ್ತ್ರಗಳೂ ಸೇರಿ ಉಗ್ರ–ಭಯಂಕರ ತೇಜಸ್ಸಿನಿಂದ ಜಗತ್ತನ್ನು ಸುಡಲಾರಂಭಿಸಿದವು. ಭೂಮ್ಯಾಕಾಶಗಳನ್ನು ಆವರಿಸಿ ಪ್ರಳಯಾಗ್ನಿಯಂತೆಯೂ ಆದಿಶೇಷನ ಮುಖದಿಂದ ಉಗುಳಲ್ಪಡುತ್ತಿರುವ ಭಯಂಕರ ವಿಷದಂತೆಯೂ, ಒಟ್ಟಿಗೇ ದಹಿಸುತ್ತಿರುವ ಸೂರ್ಯಾಗ್ನಿಗಳಂತೆಯೂ

ಉರಿಯಲಾರಂಭಿಸಿದಾಗ ಸ್ವಲ್ಪಕಾಲದಲ್ಲಿಯೇ ಎಲ್ಲವೂ ನಾಶವಾಗುವುದೆಂದು ಬಗೆದು ಅರ್ಜುನನು ಆ ಎರಡು ಅಸ್ತ್ರಗಳನ್ನೂ ಒಟ್ಟಿಗೇ ಉಪಸಂಹಾರಮಾಡಿಬಿಟ್ಟನು. ನಂತರ ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿಕೊಂಡು ಓಡಿಹೋಗಿ ಆ ಪಾಪಕರ್ಮಿಯಾದ ಅಶ್ವತ್ಥಾಮನನ್ನು ಬಲಿಪಶುವಿನಂತೆ ಹಿಂಗಟ್ಟು ಮುರಿಕಟ್ಟಿ ತನ್ನ ರಥದಲ್ಲಿ ಹಾಕಿಕೊಂಡು ತನ್ನ ಪಾಳಯಕ್ಕೆ ಹೊರಟನು. ಶ್ರೀ ಕೃಷ್ಣ ಪರಮಾತ್ಮನಿಗೆ ಈ ಬ್ರಾಹ್ಮಣಾಪಮಾನವು ಸಹಿಸಲಿಲ್ಲ. ಆಗ ವ್ಯಂಗ್ಯವಾಗಿ ಹೇಳಿದನು.

" ಅರ್ಜುನ! ಇವನನ್ನು—ಈ ಬ್ರಾಹ್ಮಣನನ್ನು ಕೊಂದುಹಾಕು. ರಾತ್ರಿಯಲ್ಲಿ ಮಲಗಿದ್ದ ಮಕ್ಕಳನ್ನು ಕೊಂದ ಈತನನ್ನು ಉಳಿಸಬೇಡ. ಧರ್ಮಜ್ಞರು ಅಜಾಗರೂಕರಾದ ನಿದ್ರಿತ, ಬಾಲಕ, ಜಡ, ಶರಣಾಗತ, ರಥಹೀನ, ಭಯದಿಂದ ಓಡುತ್ತಿರುವ ಶತ್ರುವನ್ನೂ ಸಹ ಕೊಲ್ಲುವುದಿಲ್ಲ ಯಾವ ನಿರ್ದಯನಾದ ದುಷ್ಟಪುರುಷನು ಇತರರ ಪ್ರಾಣದಿಂದ ತನ್ನ ಪ್ರಾಣವನ್ನು ಪೋಷಣೆಮಾಡಿಕೊಳ್ಳುತ್ತಾನೆಯೋ ಅಂತಹವನಿಗೆ ವಧೆಯೇ ಸರಿಯಾದ ಪ್ರಾಯಶ್ಚಿತ್ತವು. ನೀನೂ ಸಹ ಈತನ ತಲೆಯನ್ನು ಕತ್ತರಿಸಿ ತಂದುಕೊಡುವೆನೆಂದು ಪ್ರತಿಜ್ಞೆಮಾಡಿರುವೆ. ಈ ಪಾಪಿಯು ನಿನ್ನ ವಂಶವನ್ನು ಹಾಳುಮಾಡಿದನು. ದುರ್ಯೋಧನನಿಗೂ ಇದರಿಂದ ಪ್ರಿಯವಾಗಲಿಲ್ಲ " ಹೀಗೆ ತನ್ನ ಧರ್ಮ ಪರೀಕ್ಷೆಮಾಡುತ್ತಿರುವ ಶ್ರೀ ಕೃಷ್ಣನ ಮಾತುಗಳಿಂದ ಅರ್ಜುನನಿಗೆ ಅಶ್ವತ್ಥಾಮನನ್ನು ಕೊಲ್ಲಲು ಮನಸ್ಸುಬರಲಿಲ್ಲ. ಅವನನ್ನು ತನ್ನ ಬಿಡಾರದೊಳಕ್ಕೆಳೆದುಕೊಂಡುಹೋಗಿ ಪುತ್ರ ಶೋಕದಿಂದ ಅಳುತ್ತಿರುವ ದ್ರೌಪದಿಯ ಎದುರಿಗೆ ನಿಲ್ಲಿಸಿದನು. ತನ್ನ ಆ ನೀಚಕರ್ಮದಿಂದ ನಾಚಿಕೆಯಾಗಿದ್ದ ಈಗ ಮಿತಿಮೀರಿದ ಅಪಮಾನಕ್ಕೆ ಗುರಿಯಾಗಿದ್ದ ಅಶ್ವತ್ಥಾಮನು ತಲೆ ತಗ್ಗಿಸಿಕೊಂಡೇ ನಿಂತಿದ್ದನು. ಇವನನ್ನು ನೋಡುತ್ತಲೇ ದ್ರೌಪದಿಗೆ ಕರುಣೆಬಂದಿತು. ಹೇಳಿದಳು. " ಅರ್ಜುನ! ಇವನನ್ನು ಮುಂಚೆ ಬಿಟ್ಟುಬಿಡು! ಇವನು ನಿನ್ನ ಗುರುಪುತ್ರನು; ಬ್ರಾಹ್ಮಣನು. ನೀನು ಯಾರಿಂದ ಧನುರ್ವೇದವನ್ನು ಸಾಂಗೋಪಾಂಗವಾಗಿ ಕಲಿತಿರುವೆಯೋ

ಆ ನಿನ್ನ ಆಚಾರ್ಯ ದ್ರೋಣನ ರಕ್ತವೇ ಮೂರ್ತಿಮತ್ತಾಗಿ—ಆತನೇ ನಿನ್ನೆದುರಿಗೆ ನಿಂತಿರುವನಲ್ಲವೆ ? ಈತನ ತಾಯಿ—ಪ ತಿ ವ್ರ ತೆ ಯಾ ದ ಗೌತಮಿಗೆ ಪುತ್ರ ಶೋಕವಾಗುವುದಿಲ್ಲವೆ ? ನನ್ನಂತೆ ಆಕೆಯೂ ದುಃಖಿಸುವಳಲ್ಲವೆ ? ನೀನು ಧರ್ಮಜ್ಞನು. ನಿನಗೆ ತಿಳಿಯದುದಾವುದೂ ಇಲ್ಲ. ನಮಗೆ ಗುರುಕುಲವೇ ಪವಿತ್ರ ! ಗುರುಗೃಹವಿದ್ದ ದಿಕ್ಕಿಗೇ ನಮಸ್ಕರಿಸಬೇಕಲ್ಲವೆ ? ಗುರುಪತ್ನಿಗೆ—ಗುರುಕುಲಕ್ಕೆ ದುಃಖವನ್ನುಂಟು ಮಾಡಬಾರದು. ಮನಸ್ಸಿನ ಉದ್ವೇಗವನ್ನು ತಡೆಯಲಾರದ ಕ್ಷತ್ರಿಯ ರಾಜನಿಂದ ಬ್ರಹ್ಮ ವಂಶಕ್ಕೆ ದುಃಖವಾದರೆ ಆ ದುಃಖದಿಂದ ಹುಟ್ಟಿದ ಬ್ರಹ್ಮ ಕೋಪವು ಆತನ ವಂಶವನ್ನು ನಾಶಮಾಡುವುದಲ್ಲಾ. ”

ಧರ್ಮ, ನ್ಯಾಯ, ದಯಾ, ಸತ್ಯ, ಸಮತೆಗಳಿಂದ ಕೂಡಿದ ದ್ರೌಪದಿಯ ಈ ಮಾತುಗಳಿಂದ ಧರ್ಮರಾಯನಿಗೆ ಬಹಳ ಸಂತೋಷವಾಯಿತು ಅವಳನ್ನು ಬಹಳವಾಗಿ ಹೊಗಳಿದನು. ನಕುಲ, ಸಹದೇವ, ಅರ್ಜುನ ಶ್ರೀಕೃಷ್ಣರುಗಳು ಬಹಳ ಸಂತೋಷಪಟ್ಟರು. ಆದರೆ ಉಗ್ರರೂಪ ನಾದ ಭೀಮಸೇನನಿಗೆ ಇದು ಸರಿಬೀಳಲಿಲ್ಲ. 'ಮಲಗಿ ನಿದ್ರಿಸುತ್ತಿದ್ದ ಬಾಲಕರನ್ನು ಕೊಂದವನೀತ. ಈತನಿಂದ ಸ್ವಹಿತವಾಗಲಿ ಸ್ವಾಮಿ ಹಿತವಾಗಲಿ ನಡೆಯಲಿಲ್ಲ, ಆದುದರಿಂದ ಇವನನ್ನು ಕೊಲ್ಲುವುದೇ ನ್ಯಾಯ ಎಂದು ಹೇಳಿದನು.

ಭೀಮಸೇನನ ಮತ್ತು ದ್ರೌಪದಿಯ ಮಾತುಗಳೆರಡನ್ನೂ ಅನುಮೋದಿಸು ವಂತೆ ಮುಗುಳುನಗೆನಗುತ್ತಾ ಭಗವಂತನು 'ಬ್ರಾಹ್ಮಣನನ್ನು ಕೊಲ್ಲು ವುದು ಯೋಗ್ಯವಲ್ಲ. ಆತತಾಯಿ-ಕಡುಪಾಪಿಯನ್ನು ಕೊಲ್ಲುವುದು ಯೋಗ್ಯ. ಈ ಎರಡೂ ನನ್ನ ವಾಕ್ಯಗಳೇ. ಇವೆರಡನ್ನೂ ಉಳಿಸು ವಂತೆ ನೀನು ಮಾಡು. ದ್ರೌಪದಿಯ ಎದುರಿಗೆ ಮಾಡಿದ ಪ್ರತಿಜ್ಞೆಯೂ ಭೀಮಸೇನನ ಇಷ್ಟಾರ್ಥವೂ ದ್ರೌಪದಿಯ ಮಾತುಗಳು ಸಾರ್ಥಕವೂ ಆಗುವಂತೆಮಾಡು' ಎಂದು ಅಪ್ಪಣೆಮಾಡಿದನು. ಇಂಗಿತಜ್ಞನಾದ ಅರ್ಜುನನು ವಿವೇಕವನ್ನುಪಯೋಗಿಸಿ ಅಶ್ವತ್ಥಾಮನ ತಲೆಯಲ್ಲಿದ್ದ

ಚೂಡಾರತ್ನವನ್ನು ತನ್ನ ಕತ್ತಿಯಿಂದ ಕತ್ತರಿಸಿ ಬಾಲಹತ್ಯೆಯ ಪಾಪ ದಿಂದ ತೇಜೋಹೀನನಾದ ಅಶ್ವತ್ಥಾಮನನ್ನು ಪಾಳಯದಿಂದ ಹೊರಪಾಡಿದನು.

**ಶೌನಕ**—ಇದರಿಂದ ಅವನನ್ನು ಕೊಂದಂತಾಯಿತೆ?

**ಸೂತ**—ಓಹೋ ಅದಕ್ಕೇನು ಸಂದೇಹ! ಬ್ರಾಹ್ಮಣನನ್ನು ಹೊಡೆಯುವುದು, ಕೊಲ್ಲುವುದು ಶಾಸ್ತ್ರಸಮ್ಮತವಲ್ಲ. ತಲೆಬೋಳಿಸಿ ಆತನ ಆಸ್ತಿ ಯನ್ನೆಲ್ಲಾ ತೆಗೆದುಕೊಂಡು ಸ್ಥಾನದಿಂದ ಹೊರದೂಡಿಬಿಟ್ಟರೆ ಆತ ನನ್ನು ಕೊಂದಂತೆಯೇ ಎಂದು ಶಾಸ್ತ್ರಕಾರರು ಹೇಳುತ್ತಾರೆ. ಇರಲಿ, ಮುಂದೆ ಹೋಗೋಣ.

ಪುತ್ರಶೋಕದಿಂದ ದುಃಖಿತಳಾದ ದ್ರೌಪದಿಯಿಂದೊಡಗೂಡಿದ ಸ್ತ್ರೀಯರೊಡನೆ ಯುದ್ಧದಲ್ಲಿ ಮಡಿದ ಬಂಧುಬಾಂಧವರಿಗೆ ಉತ್ತರ ಕ್ರಿಯೆಗಳನ್ನು ಮಾಡುವುದಕ್ಕಾಗಿ ಪಾಂಡವರು ಗಂಗಾ ತಟಕ್ಕೆ ಹೊರಟರು. ಅಲ್ಲಿ ಎಲ್ಲರೂ ತಿಲೋದಕ ಪಿಂಡಪ್ರದಾನಗಳನ್ನು ಸತ್ತವರಿಗಾಗಿ ಮಾಡಿದರು. ಶ್ರೀಕೃಷ್ಣಪರಮಾತ್ಮನು ಋಷಿಗಳೊ ಡನೆ ಸಂತೈಸಿ ಕಾಲಗತಿಯನ್ನಾರೂ ಮೀರಲಾರರೆಂದು ಹೇಳುತ್ತಾ ದುಃಖಿತರಾದ ವಿದುರ, ಧೃತರಾಷ್ಟ್ರ, ಧರ್ಮರಾಜಾದಿಗಳನ್ನು ಸಮಾಧಾನಪಡಿಸಿ ದುರ್ಯೋಧನಾದಿಗಳಿಂದ ಅಪಹರಿಸಲ್ಪಟ್ಟಿದ್ದ ರಾಜ್ಯಕ್ಕೆ ಧರ್ಮರಾಜನನ್ನು ಅಭಿಷೇಕಮಾಡಿಸಿ ಆತನಿಂದ ಮೂರಾ ವೃತ್ತಿ ಅಶ್ವಮೇಧಯಾಗವನ್ನುಮಾಡಿಸಿ ಆತನ ಕೀರ್ತಿಲತೆಯು ಲೋಕತ್ರಯಗಳಲ್ಲಿಯೂ ಹಬ್ಬುವಂತೆ ಮಾಡಿದನು. ವ್ಯಾಸ ಮಹರ್ಷಿ ಗಳನ್ನು ಪೂಜಿಸಿ ಅವರಿಂದ ತಾನೂ ಕೈಂಕರ್ಯವನ್ನು ಸ್ವೀಕರಿಸಿ ಪಂಚ ಪಾಂಡವರ ಅನುಮತಿಯನ್ನು ಹೊಂದಿದ ನಂತರ ಸಾತ್ಯಕಿ, ಉದ್ಧವ ರೊಡನೆ ದ್ವಾರಕಗೆ ಹೊರಡಲನುವಾದನು. ಅಷ್ಟರಲ್ಲಿ ಅಭಿಮನ್ಯು ಪತ್ನಿ—ಉತ್ತರೆಯು ಓಡಿಬಂದು ನಮಸ್ಕರಿಸುತ್ತಾ "ದೇವದೇವ! ಮಹಾಯೋಗಿ! ಜಗತ್ಪತೆ! ಕಾಪಾಡು! ಕಾಪಾಡು! ನೀನಲ್ಲದೆ

ಇನ್ನಾರೂ ನನ್ನನ್ನು ರಕ್ಷಿಸಲಾರರು. ಏಕೆಂದರೆ ಇವರಲ್ಲರೂ ಮೃತ್ಯು ವಶರೇ. ನನ್ನನ್ನು ಮೃತ್ಯುವಿನಿಂದ ಇವರು ಹೇಗೆ ರಕ್ಷಿಸಬಲ್ಲರು ?

ಈ ಉಕ್ಕಿನ ಬಾಣವು ಬೆಂಕಿಯ ಕೊಳ್ಳಿಯಂತೆ ನನ್ನೆದುರಿಗೆ ಬರುತ್ತಿರುವುದಲ್ಲಾ! ದೇವ! ಇದು ನನ್ನನ್ನು ಸುಟ್ಟುಹಾಕಿದರೂ ಚಿಂತೆಯಿಲ್ಲ, ನನ್ನ ಗರ್ಭವನ್ನು ನಷ್ಟಮಾಡದಿರಲಿ! ” ರಕ್ಷಿಸು ಎಂದು ಪ್ರಾರ್ಥಿಸಿಕೊಂಡಳು.

ದೇವನು ಉತ್ತರೆಯ ದುಃಖಕ್ಕೆ ಕಾರಣವು ಪಾಂಡವರ ವಂಶನಾಶಕ್ಕಾಗಿ ಅಶ್ವತ್ಥಾಮನಿಂದ ಬಿಡಲ್ಪಟ್ಟ ಬ್ರಹ್ಮಾಸ್ತ್ರವೆಂದು ತಿಳಿದನು. ಪಾಂಡವರೆದುರಿಗೆ ಬರುತ್ತಿದ್ದ ಐದು ಅಸ್ತ್ರಗಳೊಡನೆ ಇದನ್ನೂ ಸಹ ತನ್ನ ಸುದರ್ಶನ ಚಕ್ರದಿಂದ ನಿಗ್ರಹಿಸಿ ತನ್ನ ಅನನ್ಯ ಭಕ್ತರಾದ ಅವರನ್ನೆಲ್ಲಾ ಉಳಿಸಿದನು. ಎಲ್ಲಾ ಪ್ರಾಣಿಗಳ ಅಂತಃಕರಣದಲ್ಲಿಯೂ ಆತ್ಮರೂಪದಿಂದ ನಿಂತಿರುವ ಯೋಗೇಶ್ವರನಾದ ಆ ಹರಿಯು ತನ್ನ ಮಾಯೆಯಿಂದ ಉತ್ತರೆಯ ಗರ್ಭವನ್ನು ಪ್ರವೇಶಿಸಿ ಕುರು—ಪಾಂಡವ ವಂಶದ ಆ ಬೀಜವನ್ನು ರಕ್ಷಿಸಿದನು. ಬ್ರಹ್ಮಾಸ್ತ್ರಕ್ಕೆ ಪ್ರತಿಕ್ರಿಯೆಯಿಲ್ಲದಿದ್ದರೂ ಅದು ಯಾವ ಸಂದರ್ಭದಲ್ಲಿಯೂ ನಿಷ್ಫಲವಾಗದಿದ್ದರೂ ವಿಷ್ಣು ತೇಜಸ್ಸಿನಿಂದ ಅದು ಶಾಂತವಾಯಿತು. ಜನ್ಮರಹಿತನಾಗಿ ಅನಾದಿಯಾಗಿರುವ ಆ ಪರಮಾತ್ಮನು ತನ್ನ ದಿವ್ಯ ಮಾಯೆಯಿಂದ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಿರುವಾಗ ಉತ್ತರೆ ಗರ್ಭವನ್ನು ಪ್ರವೇಶಮಾಡಿ ಬ್ರಹ್ಮಾಸ್ತ್ರದಿಂದ ರಕ್ಷಿಸುವುದೇನಾಶ್ಚರ್ಯ! ಬ್ರಹ್ಮಾಸ್ತ್ರದಿಂದ ರಕ್ಷಿಸಲ್ಪಟ್ಟ ಪಾಂಡವರು ದ್ರೌಪದಿ ಇವರುಗಳಿಂದ ಬೀಳ್ಕೊಂಡು ಪ್ರಯಾಣಕ್ಕೆ ಸಿದ್ಧವಾಗುವಷ್ಟರಲ್ಲಿ ಪರಮ ಪತಿವ್ರತೆಯಾದ ಕುಂತಿಯು ಹೇಳಿದಳು—“ ಎಲೈ ಪರಮಾತ್ಮ! ನೀನು ಮಾಯಾರಹಿತನು ನೀನು ಎಲ್ಲಾ ಪ್ರಾಣಿಗಳ ಹೊರಗೂ ಒಳಗೂ ತುಂಬಿಕೊಂಡಿರುವೆ. ಆದರೂ ನಿನ್ನನ್ನಾರೂ ಗುರ್ತಿಸಲಾರರು. ಪರಮಪುರುಷನಾದ ನಿನ್ನನ್ನು ನಮಸ್ಕರಿಸುತ್ತೇನೆ. ನೀನು ಮಾಯಾ

ರೂಪವಾದ ಪರೆದೆಯಿಂದ ಮುಚ್ಚಲ್ಪಟ್ಟಿರುವ ಇಂದ್ರಿಯಾಧೀಶನಾದ ನೀನು ಸಚ್ಚಿದಾನಂದನಾಗಿ ಜ್ಞಾನಸ್ವರೂಪನಾಗಿರುವೆ. ಇಂದ್ರಿಯ ಲೋಲುಪರಾದ ಅಜ್ಞಾನಿಗಳು ನಿನ್ನನ್ನು ನೋಡಲಾರರು. ಇಂದ್ರ ಜಾಲಮಾಡುವ ಯವನನನ್ನು ಇತರರು ಹೇಗೆ ನೋಡಲಾರರೋ ಹಾಗೆಯೇ ನೀನಾರಿಗೂ ಕಾಣಲಾರೆ. ನೀನು ನಿರ್ಮಲ ಚಿತ್ತರಾದ ಪರಮಹಂಸರಾದ ಮುನಿಗಳ ಭಕ್ತಿಯೋಗಕ್ಕಾಗಿಯೇ ಪೃಥ್ವಿಯಲ್ಲಿ ಅವತಾರಮಾಡಿಬಂದಿದ್ದೀಯೆ. ನನ್ನಂತಹ ಅಜ್ಞಾನಿಯಾದ ಹೆಂಗಸು ನಿನ್ನನ್ನು ಹೇಗೆ ತಿಳಿಯಬಲ್ಲಳು? ಹೇ ಕೃಷ್ಣ! ವಾಸುದೇವ! ದೇವಕೀ ಪುತ್ರ! ನಂದ ನಂದನ! ಗೋವಿಂದ! ನಿನ್ನನ್ನು ಬಾರಿ ಬಾರಿಗೂ ನಮಸ್ಕರಿಸುತ್ತೇನೆ. ಕಮಲನಾಭನೇ! ನಿನಗೆ ಪ್ರಣಾಮ ಗಳು, ಕಮಲ ಮಾಲಾ ಧಾರಿಯೇ! ಕಮಲ ಲೋಚನನೇ! ನಿನ್ನ ಪಾದಕಮಲಗಳಿಗೆ ನಮಸ್ಕಾರ. ದೇವ! ಹೃಷೀಕೇಶ! ದೇವಕೀ ದೇವಿಯನ್ನು ದುಷ್ಟ ಕಂಸನು ಬಹಳ ಕಾಲದವರೆಗೂ ಸೆರೆಯಲ್ಲಿಟ್ಟು ಪೀಡಿಸಿದಾಗ ನೀನು ಹೇಗೆ ಆಕೆಯನ್ನು ರಕ್ಷಿಸಿದೆಯೋ ಹಾಗೆ ನೀನು ನನ್ನನ್ನೂ, ನನ್ನ ಮಕ್ಕಳನ್ನೂ ಅನೇಕ ಬಾರಿ ವಿಪತ್ತುಗಳಿಂದ ರಕ್ಷಿಸಿದ್ದೀಯೆ ಹಾಗೆಯೇ ವಿಷದಿಂದ, ಅರಗಿನಮನೆಯ ಬೆಂಕಿಯಿಂದ, ಹಿಡಿಂಬ ಮುಂತಾದ ರಾಕ್ಷಸರಿಂದ, ದುರ್ಯೋಧನಾದಿ ದುಷ್ಟರ ಸಭೆ ಯಿಂದ, ವನವಾಸದ ಕಷ್ಟಗಳಿಂದ, ಯುದ್ಧದಲ್ಲಿ ಅನೇಕ ಮಹಾರಥರು ಗಳ ಘೋರಾಸ್ತ್ರಗಳಿಂದ ನನ್ನ ಮಕ್ಕಳನ್ನು ಬದುಕಿಸಿದ್ದೀಯೆ. ಈಗಲೂ ಸಹ ಅಶ್ವತ್ಥಾಮನ ಭಯಂಕರವಾದ ಅಸ್ತ್ರದಿಂದ ರಕ್ಷಿಸಿದೆ. ಎಲೈ ಜಗದ್ಗುರುವೇ! ನಮ್ಮ ಆಶೆಯೇನೆನ್ನುವೆಯೋ ನಮ್ಮನ್ನು ಹೆಜ್ಜೆ ಹೆಜ್ಜೆಗೂ ದುಃಖಗಳು ಬಂದು ಮುಟ್ಟಲಿ. ಅದರಿಂದ ನಮಗೆ ಸಂಸಾರದ ದುಃಖಗಳಿಂದ ಬಿಡಿಸಲ್ಪಡುವ ದೇವ ದುರ್ಲಭವಾದ ನಿನ್ನ ದರ್ಶನವು ಸಿಕ್ಕುತ್ತಿರಲಿ. ಕಷ್ಟವನ್ನು ನಾನೇಕೆ ಕೋರುತ್ತಿರುವೆನೆಂದು ಕೇಳುತ್ತಿರುವೆಯಲ್ಲವೇ. ಮನುಷ್ಯನಿಗೆ ಸುಖವು ಬಂದಾಗ, ಆತನಾಗ ಜನ್ಮ, ಐಶ್ವರ್ಯಲಕ್ಷ್ಮೀ, ಕುಟುಂಬ ಮುಂತಾದ ಅಭಿಮಾನದಿಂದ

ಮತ್ತನಾಗಿ ಕಣ್ಣುಕಾಣದವನಾಗುತ್ತಾನೆ. ಆದುದರಿಂದಲೇ ನಿನ್ನ ನಾಮವು ಅಕಿಂಚನ ಗೋಚರವು. ಅಂದರೆ ದೀನ, ದುಃಖಿಗಳಿಗೆ ಮಾತ್ರ ನಿನ್ನ ದಯೆಯು ಲಭಿಸುವುದು ಆದುದರಿಂದ ದೀನರಿಗೆ ಧನದಂತಿರುವ ನಿರ್ಗುಣನಾಗ, ಆತ್ಮಾರಾಮನಾದ, ಶಾಂತಸ್ವರೂಪನಾದ ಕೈವಲ್ಯ–ಮೋಕ್ಷಪ್ರದನಾದ ನಿನ್ನನ್ನು ವಂದಿಸುತ್ತೇನೆ ದೇವ! ನಿನ್ನನ್ನು ಕಾಲಸ್ವರೂಪನೆಂದೇ–ಎಲ್ಲವನ್ನೂ ಸಂಹಾರ ಮಾಡುವ ಆದ್ಯಂತರಹಿತನಾದ ಸಮದರ್ಶಿಯಾದ ಸರ್ವವ್ಯಾಪಿಯೆಂದೇ–ತಿಳಿಯುತ್ತೇನೆ. ನಿನ್ನನ್ನು ತಿಳಿಯಲಾರದೆ, ನಿನ್ನ ವಿಷಯದಲ್ಲಿ ಜನಗಳು ಮತಮತಾಂತರ ರೂಪವಾದ ವಿವಿಧ ವಿವಾದಗಳನ್ನು ಮಾಡುತ್ತಾರೆ. ಪರಮಾತ್ಮ! ಮನುಷ್ಯನಂತೆ ಆಟವಾಡುತ್ತಿರುವ ನಿನ್ನ ಕರ್ತವ್ಯವೇನೆಂಬುದನ್ನು ಯಾರೂ ತಿಳಿಯಲಾರರು ನಿನಗೆ ಶತ್ರುಗಳೂ ಇಲ್ಲ. ಮಿತ್ರರೂ ಇಲ್ಲ. ಶತ್ರು ಮಿತ್ರರುಗಳಲ್ಲಿ ಮನುಷ್ಯರ ಬುದ್ಧಿಯು ವ್ಯತ್ಯಾಸವಾಗುವುದರಿಂದ ಈ ಭಾವಗಳೆರಡನ್ನೂ ಮೀರಿದ ನಿನ್ನನ್ನು ಪುರುಷೋತ್ತಮನೆಂದೂ ಸಮದರ್ಶಿಯೆಂದೂ ತಿಳಿಯುತ್ತಾರೆ. ಎಲೈ ವಿಶ್ವರೂಪಿಯೇ! ಜನ್ಮರಹಿತನಾದ ನಿರ್ಗುಣನಾದ ನೀನು ಪಶು, ಪಕ್ಷಿ, ಮನುಷ್ಯ, ಜಲಜಂತು ಮುಂತಾದ ಯೋನಿಗಳಲ್ಲಿ ಹುಟ್ಟುವುದು, ಅದನ್ನನುಸರಿಸಿದ ಧರ್ಮ ಕರ್ಮಗಳಂತೆ ಆಚರಿಸುವುದು ಲೀಲಾಮಾತ್ರವೇ ಅಲ್ಲವೆ? ನೀನು ಮಡಕೆಯನ್ನೊಡೆದು ಮೊಸರನ್ನು ಚೆಲ್ಲಿದಾಗ ನಿನ್ನ ಅಪರಾಧಕ್ಕಾಗಿ ಶಿಕ್ಷೆಮಾಡಬೇಕೆಂದು ಯಶೋದೆಯು ನಿನ್ನನ್ನು ಕಟ್ಟಿಹಾಕಲು ಹಗ್ಗವನ್ನು ಹಿಡಿದು ನಿಂತಾಗ ಭಯಸ್ವರೂಪವಾದ ಮೃತ್ಯುವಿಗೂ ಮೃತ್ಯುವಾದ ನೀನು ಸಾಧಾರಣವಾದ ಹುಡುಗನಂತೆ ಭಯದ ಭಾವನೆಯನ್ನುನಟಿಸುತ್ತಾ, ಕಣ್ಣಿನ ಕಾಡಿಗೆಯೊಡನೆ ಹರಿಯುತ್ತಿರುವ ಅಶ್ರುಬಿಂದುಯುಕ್ತವಾದ ಕಮಲ ನೇತ್ರಗಳಿಂದ ತಾಯಿಯನ್ನು ನೋಡುತ್ತಾ ನಿಂತಿರುವ ಆ ಸೌಂದರ್ಯವು ನನ್ನನ್ನು ಈಗಲೂ ಭ್ರಾಂತಿಗೊಳಿಸುತ್ತಿರುವುದಲ್ಲವೆ? ಕೆಲವರು ನಿನ್ನನ್ನು ಜನ್ಮರಹಿತನಾದ ಈಶ್ವರನೆನ್ನುತ್ತಾರೆ. ನೀನು ನಿನ್ನ ಪ್ರಿಯನಾದ

ಪವಿತ್ರ ಕೀರ್ತಿಶಾಲಿಯಾದ ಯುಧಿಷ್ಠಿರನ ಕೀರ್ತಿಯನ್ನು ಬೆಳಗಿಸು ವುದಕ್ಕಾಗಿ ಮಲಯಾಚಲದಲ್ಲಿ ಚಂದ್ರನು ಹುಟ್ಟಿದಂತೆ ಯದುಕುಲ ದಲ್ಲಿ ಹುಟ್ಟಿದ್ದೀಯೆ, ಎನ್ನುತ್ತಾರೆ. ವಸುದೇವ ದೇವಕಿಯರು ಹಿಂದಿನ ಜನ್ಮದಲ್ಲಿ ಪೃಶ್ನಿ, ಸುತಪ ಎಂಬ ಹೆಸರುಳ್ಳವರಾಗಿದ್ದು ಅವರ ಪ್ರಾರ್ಥನೆ ಯನ್ನನುಸರಿಸಿ ಅವರನ್ನು ಅನುಗ್ರಹಿಸುವುದಕ್ಕಾಗಿಯೂ, ದಾನವ ನಾಶಕ್ಕಾಗಿಯೂ ಅವರ ಪುತ್ರನಾಗಿ ಹುಟ್ಟಿಬಂದಿರುವೆ ಎನ್ನುತ್ತಾರೆ. ಸಮುದ್ರದಲ್ಲಿ ಮುಳುಗುತ್ತಿರುವ ನೌಕೆಯಂತೆ ಭಾರವಾದ ಭೂಮಿಯ ಭಾರವನ್ನು ತಗ್ಗಿಸುವುದಕ್ಕಾಗಿ ಬ್ರಹ್ಮನ ಪ್ರಾರ್ಥನೆಯಂತೆ ಅವತಾರ ಮಾಡಿರುವೆಯೆಂದೂ ಹೇಳುತ್ತಾರೆ. ಈ ಜಗತ್ತಿನಲ್ಲಿ ಅಜ್ಞಾನ, ಕಾಮನೆ, ಕಾರ್ಯಬಂಧನಗಳಿಂದ ದುಃಖಿಸುತ್ತಿರುವ ಜೀವರುಗಳನ್ನು ಉದ್ಧರಿಸುವುದಕ್ಕಾಗಿ ಸ್ಮರಣ, ಶ್ರವಣ, ಕೀರ್ತನಗಳಿಗೆ ಅನುಕೂಲ ವಾಗುವಂತಹ ಚರಿತ್ರೆಯನ್ನು ಸಿದ್ಧಮಾಡುವುದಕ್ಕಾಗಿ ನಿನ್ನ ಅವತಾರವು ಸಿದ್ಧವಾಗಿದೆಯೆಂದು ಹೇಳುತ್ತಾರೆ. ಯಾರು ನಿನ್ನ ಲೀಲೆಯನ್ನು ಕೇಳುತ್ತಾರೆಯೋ, ಹಾಡುತ್ತಾರೆಯೋ, ಕೀರ್ತನೆ ಮಾಡುತ್ತಾರೆಯೋ, ಬಾರಿಬಾರಿಗೂ ಸ್ಮರಣೆಮಾಡುತ್ತಾ ಸಂತೋಷ ಪಡುತ್ತಾರೆಯೋ ಅವರೇ ಈ ಸಂಸಾರ ಚಕ್ರದಿಂದ ಉದ್ಧಾರಮಾಡುವ ನಿನ್ನ ಚರಣ ಕಮಲಗಳನ್ನು ಜಾಗ್ರತೆಯಾಗಿ ಹೊಂದಬಲ್ಲರು. ಎಲೈ ! ಸ್ವಯಂಲೀಲಾರೂಪನಾದ ಸ್ವಾಮಿಯೇ ನೀನೀಗ ನಮ್ಮನ್ನು ಬಿಟ್ಟು ಹೋಗಲು ಇಚ್ಛಿಸುತ್ತೀಯೆ. ನಾವು ನಿನ್ನ ಮಿತ್ರರು. ಅನು ಜೀವಿಗಳು. ನಿನ್ನ ಚರಣಕಮಲಗಳಲ್ಲದೆ ನಮಗಿನ್ನಾವ ಆಶ್ರಯವೂ ಇಲ್ಲ. ನಾವೀಗ ಎಲ್ಲಾ ರಾಜರುಗಳನ್ನೂ ದುಃಖಕ್ಕೀಡುಮಾಡಿ ಅವರ ವೈರವನ್ನೇ ಸಂಪಾದಿಸಿದ್ದೇವೆ. ನೀನು ನಮಗೆ ಸಹಾಯಕನಾಗಿ ನಮ್ಮ ಜೊತೆಯಲ್ಲಿಲ್ಲದಿದ್ದರೆ ನಮಗೆ ಈ ಪಾಂಡವ, ಯಾದವರಿಗೆ ಐಶ್ವರ್ಯಾದಿಗಳಲ್ಲಿ ಏನು ಪ್ರಯೋಜನ ? ಜೀವಾತ್ಮನು ಹೊರಟು ಹೋದ ನಂತರ ಇಂದ್ರಿಯ ಶಕ್ತಿಯೆಲ್ಲಾ ಹೇಗೆ ಉಡುಗಿಹೋಗು ವುದೋ ನಿನ್ನ ವಿಯೋಗದಿಂದ ನಮಗೂ ಹಾಗೇ ಆಗುವುದು.

ಎಲೈ ಗದಾಧರನೇ! ನಿನ್ನ ಈ ವಿಲಕ್ಷಣ ಲಕ್ಷಣಯುಕ್ತ ಚರಣಗಳಿಂದ ಈ ಭೂಮಿಯು ಈಗ ಬೆಳಗುವಂತೆ ನೀನು ದ್ವಾರಕೆಗೆ ಹೋದಮೇಲ ಶೋಭಿಸಲಾರದು. ಈ ಸುಪಕ್ವವಾದ ಓಷಧಿಯು ಲತಾ, ವೃಕ್ಷ ಗಳಿಂದ ಶೋಭಿತವಾದ ಪುರ, ನಗರ, ವನ, ಪರ್ವತ, ನದಿ, ಸಮುದ್ರ ಮುಂತಾದುವು ನಿನ್ನ ಕೃಪಾವೃಷ್ಟಿಯೊಂದರಿಂದಲೇ ಉನ್ನತಿಯನ್ನೂ, ಐಶ್ವರ್ಯವನ್ನೂ ಹೊಂದಬಲ್ಲವು ನಿನ್ನ ಪ್ರಯಾಣ ದಿಂದ ಪಾಂಡವರಿಗೂ, ನೀನು ಹೋಗದಿದ್ದರ ಯಾದವರಿಗೂ ದುಃಖವಾಗುವುದು ಆದುದರಿಂದ ಎಲೈ ಜಗದೀಶನೇ! ವಿಶ್ವಾತ್ಮನೇ! ವಿಶ್ವರೂಪನೇ! ನನ್ನ ಮನಸ್ಸಿನಲ್ಲಿರುವ ಈ ಬಂಧ-ಸ್ನೇಹ ಪಾಶವನ್ನು ಕತ್ತರಿಸಿಬಿಡು ಎಲೈ ಯಾದವೇಶ ನಿನ್ನಲ್ಲಿ ನನಗೆ ಅನನ್ಯ ಭಕ್ತಿಯು ವೃದ್ಧಿಯಾಗಲಿ. ಗಂಗಾಪ್ರವಾಹವು ಸಮುದ್ರದಲ್ಲಿ ಲೀನವಾಗುವಂತೆ, ನನ್ನ ಮನಸ್ಸು ನಿನ್ನಲ್ಲಿ ಲೀನವಾಗಲಿ. ಹೇ! ಶ್ರೀಕೃಷ್ಣ! ಅರ್ಜುನಸಖ! ಯಾದವಶ್ರೇಷ್ಠ! ಭೂಭಾರ ರೂಪ ಕ್ಷತ್ರಿಯವಂಶನಾಶಕ! ಗೋವಿಂದ! ಗೋಬ್ರಾಹ್ಮಣ ದೇವ ರಕ್ಷಣಾವತಾರ! ಜಗದೀಶ್ವರ! ಜಗದ್ಗುರು! ಐಶ್ವರ್ಯಮೂರ್ತಿ, ನಿನಗೆ ನಮಸ್ಕಾರ."

ಕುಂತಿಯು ಹೀಗೆ ಮಧುರ ಶಬ್ದಗಳಿಂದ ತನ್ನ ಮಹಿಮೆಯನ್ನೆಲ್ಲಾ ವರ್ಣನೆ ಮಾಡುತ್ತಿರಲು ದೇವದೇವನು ತನ್ನ ಮಾಯಾಮೋಹಕವಾದ ಮಂದ ಹಾಸದಿಂದ ಅವಳನ್ನು ಮನ್ನಿಸಿದನು. ಕುಂತಿಯ ಪ್ರಾರ್ಥನೆಯನ್ನು ಮನ್ನಿಸುವುದಕ್ಕಾಗಿ ಹಸ್ತಿನಾಪುರಕ್ಕೆ ಹಿಂದಿರುಗಿ ಉತ್ತರೆ ಮುಂತಾದ ಸ್ತ್ರೀಯರ ಅನುಮತಿಯನ್ನು ಪಡೆದು ದ್ವಾರಕೆಗೆ ಹೊರಡಲನುವಾಗಲು ಧರ್ಮರಾಜನು ಪ್ರೇಮವಶನಾಗಿ ಅವನನ್ನು ಪ್ರಯಾಣ ಮಾಡಿಸಲಿಲ್ಲ. ಆಗ ಈಶ್ವರ ಲೀಲಾ ಮಹಿಮೆಯನ್ನು ವ್ಯಾಸಮಹರ್ಷಿಯು ಅದ್ಭುತ ಮಹಿಮನಾದ ಶ್ರೀ ಕೃಷ್ಣನ ಅನೇಕ ಇತಿಹಾಸ ಉಪಾಖ್ಯಾನಗಳಿಂದ ಆತನನ್ನು ಸಂತೈಸಿದನು. ಆದರೂ ಯುಧಿಷ್ಠಿರನ ದುಃಖವು ಶಾಂತ

ಹೋಗಲಿಲ್ಲ. ತನ್ನ ಮಿತ್ರ, ಬಾಂಧವರ ಮರಣವನ್ನು ಸ್ಮರಿಸುತ್ತಾ ಸ್ನೇಹ, ಮೋಹಗಳಿಂದ ಚಿಂತಿಸಲಾರಂಭಿಸಿದನು. ನನ್ನ ಹೃದಯ ದಲ್ಲಿ ಎಂತಹ ಅಜ್ಞಾನವು ಬಂದುಸುಳಿತ್ತಿತು. ನಾಯಿ, ನರಿಗಳ ಆಹಾರ ರೂಪವಾದ ಈ ಶರೀರಕ್ಕಾಗಿ ನಾನು ಅನೇಕ ಅಕ್ಷೋಹಿಣಿ ಸೈನ್ಯಗಳನ್ನು ನಾಶಮಾಡಿಬಿಟ್ಟೆನಲ್ಲಾ! ಸಹಸ್ರಾರು ವರ್ಷಗಳ ತನಕ ನರಕ ಭೋಗಮಾಡಿದರೂ ನನಗೆ ಬಿಡುಗಡೆಯಿಲ್ಲವೆಂದೇ ತೋರುತ್ತದೆ. ಬಾಲಕ, ಬ್ರಾಹ್ಮಣ, ಸುಹೃತ್—ಇಷ್ಟಮಿತ್ರ, ಪಿತ, ಮಾತ, ಗುರು, ಎಲ್ಲರಿಗೂ ದ್ರೋಹಿಯಾಗಿದ್ದೇನೆ. "ಪ್ರಜಾಪಾಲಕನಾದ ರಾಜನು ಧರ್ಮಯುದ್ಧದಲ್ಲಿ ಶತ್ರುಗಳನ್ನು ಕೊಂದರೆ ದೋಷವಿಲ್ಲವೆಂಬ ವೇದ ವಾಕ್ಯವೂ ನನಗೆ ತೃಪ್ತಿಯನ್ನುಂಟುಮಾಡಲಾರದು. ನಾನು ಯಾರ್ಯಾರ ಬಂಧು, ಬಾಂಧವ, ಪತಿಗಳನ್ನು ಕೊಲ್ಲಿಸಿದ್ದೇನೋ ಅಂತಹ ಸ್ತ್ರೀಯರ ದುಃಖದಿಂದ ಉಂಟಾಗಿರುವ ಪಾಪವನ್ನು ಯಜ್ಞಾದಿಗಳು ತೊಳೆಯ ಲಾರವು. ಕೆಸರಿನಲ್ಲಿ ಅದ್ದಿದ ಬಟ್ಟೆಯನ್ನು ಕೆಸರಿನಲ್ಲಿ ಒಗೆದರೆ ಅದು ಹೇಗೆ ಶುದ್ಧಿಯಾಗಲಾರದೋ ಹಾಗೆಯೇ ಅಶ್ವಮೇಧಾದಿ ಹಿಂಸಾ ಮಯವಾದ ಯಜ್ಞಗಳಿಂದ ಪ್ರಾಣಿಹತ್ಯೆಯ ಪಾಪವು ದೂರವಾಗ ಲಾರದು.' ಹೀಗೆಂದು ಯೋಚಿಸುತ್ತಾ ಧರ್ಮರಾಜನು ಧರ್ಮ ಸ್ವರೂಪವನ್ನು ತಿಳಿಯುವುದಕ್ಕಾಗಿ ಶರಶಯ್ಯೆಯ ಮೇಲೆ ಮಲಗಿರುವ ಭೀಷ್ಮನನ್ನು ನೋಡಲು ಹೋದನು. ಪಂಚಪಾಂಡವರು ಸುಂದರವಾದ ಕುದುರೆಗಳಿಂದಲಂಕೃತವಾದ ಸುವರ್ಣ ಭೂಷಿತ ರಥಗಳನ್ನು ಹತ್ತಿದರು. ವ್ಯಾಸ ಧೌಮ್ಯಾದಿ ಬ್ರಾಹ್ಮಣವೃಂದವೂ ಹೊರಟಿತು. ಪರಮಾತ್ಮನೂ ಸಹ ಅರ್ಜುನನೊಡನೆ ರಥದಲ್ಲಿ ಹೊರಟನು. ಯಕ್ಷಸಮೂಹದ ಮಧ್ಯದಲ್ಲಿ ಕುಬೇರನಿರುವಂತೆ ಧರ್ಮರಾಜನು ಅವರು ಗಳ ಮಧ್ಯೆ ಶೋಭಿಸುತ್ತಿದ್ದನು. ಸ್ವರ್ಗದಿಂದ ಬಿದ್ದ ದೇವತೆಯಂತೆ ಭೀಷ್ಮನು ಶರಪಂಜರದಮೇಲೆ ಮಲಗಿರುವುದನ್ನು ಎಲ್ಲರೂ ನೋಡಿ ದರು. ಪಾಂಡವರು ಎಲ್ಲರೊಡನೆಯೂ ಭೀಷ್ಮನನ್ನು ನಮಸ್ಕರಿಸಿದರು.

ಅಷ್ಟು ಹೊತ್ತಿಗೆ ಭೀಷ್ಮಪಿತಾಮಹನ ದರ್ಶನಕ್ಕಾಗಿ ದೊಡ್ಡ ದೊಡ್ಡ

ಬ್ರಹ್ಮರ್ಷಿಗಳೂ, ರಾಜರ್ಷಿಗಳೂ ಬಂದರು. ಪರ್ವತ, ನಾರದ, ಧೌಮ್ಯ, ವ್ಯಾಸ, ಬೃಹದ್ಧ್ವಜ, ಭರದ್ವಾಜ, ಶಿಷ್ಯಸಹಿತನಾದ ಪರಶುರಾಮ, ವಸಿಷ್ಠ, ಇಂದ್ರಪ್ರಮದ, ತ್ರಿತ, ಗೃತ್ಸಮದ, ಅಸಿತ, ಕಕ್ಷೀವಾನ್, ಗೌತಮ, ಅತ್ರಿ, ವಿಶ್ವಾಮಿತ್ರ, ಸುದರ್ಶನ, ಕಶ್ಯಪ, ಅಂಗಿರ, ಬೃಹಸ್ಪತಿ, ಶುಕ ಮುಂತಾದ ಮುನಿಗಳು ಶಿಷ್ಯಸಹಿತರಾಗಿ ಅಲ್ಲಿಗೆ ಬಂದರು. ಮಹಾತ್ಮರಾದ ಋಷಿಗಳನ್ನೂ, ರಾಜರುಗಳನ್ನೂ ನೋಡಿ ವಸುಶ್ರೇಷ್ಠನಾದ ದೇಶಕಾಲಾನುರೂಪವಾದ ಧರ್ಮವನ್ನು ತಿಳಿದ ಭೀಷ್ಮನು ಎಲ್ಲರನ್ನೂ ಆದರ ಸತ್ಕಾರ ಕುಶಲ ಪ್ರಶ್ನೆಗಳಿಂದ ಗೌರವಿಸಿದನು. ಕೃಷ್ಣನ ಅಪಾರ ಮಹಿಮೆಯನ್ನು ತಿಳಿದಿರುವ ಆ ಭೀಷ್ಮನು ಮಾಯಾ ಮನುಷ್ಯ ರೂಪದಿಂದ ತನ್ನೆದುರಿಗೂ, ಆತ್ಮ ರೂಪದಿಂದ ಹೃದಯದೊಳಗೂ ನಿಂತಿರುವ ಶ್ರೀಕೃಷ್ಣನನ್ನು ಪೂಜಿಸಿದನು. ವಿನಯ ಪ್ರೇಮಗಳಿಂದ ಸಮೀಪದಲ್ಲಿ ಕುಳಿತಿರುವ ಪಾಂಡವರನ್ನು ನೋಡಿದಾಗ ಭೀಷ್ಮನ ನೇತ್ರಗಳಲ್ಲಿ ಮಾಯಾ ಮೋಹಜನಕವಾದ ಕಣ್ಣೀರು ತುಂಬಿತು. ಆಗ ಪಾಂಡವರನ್ನು ಕುರಿತು ಹೇಳಿದನು. "ನಿಮಗೆ ಮೊದಲಿನಿಂದಲೂ ಜೀವನದಲ್ಲಿ ದುಃಖವೇ ಪ್ರಾಪ್ತವಾಯಿತು. ಇದು ಅನ್ಯಾಯ. ನೀವು ಧರ್ಮಪುತ್ರ ರಾಗಿ ವಿಪ್ರ ಭಕ್ತರಾಗಿ ಧರ್ಮದಲ್ಲಿ ಅನುರಕ್ತರಾಗಿ ಕೃಷ್ಣನನ್ನು ಆಶ್ರಯಮಾಡಿದರೂ ನಿಮ್ಮ ದುಃಖವು ತಪ್ಪಲಿಲ್ಲ. ನಿಮ್ಮ ತಂದೆ ಮಹಾರಥಿಯಾದ ಪಾಂಡು ಪರಲೋಕಗತನಾದಾಗ ನೀವೆಲ್ಲರೂ ಹುಡುಗರಾಗಿದ್ದಿರಿ. ಆಗಿನಿಂದ ಮಕ್ಕಳನ್ನೂ ಸೊಸೆಯನ್ನೂ ಕಟ್ಟಿಕೊಂಡು ಕುಂತಿಯು ನಿಮಗಾಗಿ ಕಷ್ಟವನ್ನು ಸಹಿಸಿದಳು. ಧರ್ಮಾತ್ಮರಾದ ನಿಮಗೆ ದುಃಖವಾದುದು ಕಾಲಗತಿಯ ಪ್ರವಾಹವೇ ಸರಿ. ಆ ಕಾಲನು ಬಹು ಪ್ರಬಲನು. ಈ ಜಗತ್ತೆಲ್ಲಾ ವಾಯುವಿನ ಅಧೀನದಲ್ಲಿ ಮೇಘಮಂಡಲವಿರುವಂತೆ ಕಾಲವಶವಾಗಿದೆ. ಇಲ್ಲ ದಿದ್ದರೆ ಸಾಕ್ಷಾತ್ ಧರ್ಮಪುತ್ರನು ರಾಜನಾಗಿ, ಗದಾಪಾಣಿಯಾದ ಭೀಮಸೇನನು ಅವರಿಗೆ ಸಹಾಯಕನಾಗಿ ಅಸ್ತ್ರವಿದ್ಯಾನಿಪುಣನಾದ

ಅರ್ಜುನನಂತಹ ಸೋದರನಿದ್ದು ಗಾಂಡೀವದಂತಹ ಧನಸ್ಸೂ, ಶ್ರೀ ಕೃಷ್ಣನಂತಹ ಬಂಧುವೂ, ಇವುಗಳೆಲ್ಲ ಇರುವಾಗ ದುಃಖಕ್ಕೆ ಸ್ಥಾನವೆಲ್ಲಿದೆ? ಈ ಕಾಲರೂಪ ಶ್ರೀಕೃಷ್ಣನ ಕರ್ತವ್ಯವನ್ನಾರೂ ತಿಳಿಯಲಾರರು. ಅದನ್ನು ತಿಳಿಯಲಾರದೆ ದೊಡ್ಡದೊಡ್ಡ ಜ್ಞಾನಿಗಳೂ ಮೋಹಗೊಳ್ಳುತ್ತಾರೆ. ಆದುದರಿಂದ ಇದೆಲ್ಲಾ ಈಶ್ವರಾಧೀನವೆಂದು ತಿಳಿದು ಈಶ್ವರನ ಇಚ್ಛೆಯನ್ನನುಸರಿಸುವುದೇ. ಈ ಅನಾಥಪ್ರಜಾ ಸಮೂಹವನ್ನು ರಕ್ಷಣೆಮಾಡು. ನೀನೇ, ಈಗ ಇವರ ಸ್ವಾಮಿಯಾಗಿದ್ದೀಯೆ, ಮತ್ತು ರಕ್ಷಕನಾಗಿದ್ದೀಯೆ. ಶ್ರೀಕೃಷ್ಣನು ಸಾಕ್ಷಾತ್ ಭಗವಂತನು. ಆದಿಪುರುಷನಾದ ನಾರಾಯಣನು ತನ್ನ ಮಾಯೆಯಿಂದ ಲೋಕವನ್ನು ಮೋಹಿತವಾಗಿ ಮಾಡುತ್ತಾ ಯಾದವರಲ್ಲಿ ಗುಪ್ತನಾಗಿ ನಿಂತಿದ್ದಾನೆ. ಎಲೈ ರಾಜನೇ! ಈತನ ಪರಮರಹಸ್ಯವಾದ ಮಹಿಮೆಯನ್ನು ಪಾರ್ವತೀಪತಿಯೂ, ದೇವರ್ಷಿಯಾದ ನಾರದನು ಮತ್ತು ಭಗವದವತಾರವಾದ ಕಪಿಲಮುನಿಯೂ ಮುಂತಾದ ಯೋಗಿಗಳು ಮಾತ್ರ ತಿಳಿಯುವರು. ಈತನನ್ನು ನೀವು ಸೋದರಮಾವನ ಮಗನೆಂದೂ, ಮಿತ್ರ ಅಥವಾ ಬಂಧುವೆಂದೂ ಸ್ನೇಹಭಾವದಿಂದ ತಿಳಿದು ಭೃತ್ಯ, ದೂತ, ಸಾರಥಿ ಮುಂತಾದ ಕೆಲಸಗಳನ್ನು ಮಾಡಿಸಿದರು. 'ಈ ಕೆಲಸವು ನಮಗೆ ಸರಿಯಾದುದು ಅಥವಾ ಇಲ್ಲ.' ಎಂಬ ಮುಂತಾದ ವಿಷಮಬುದ್ಧಿಯು ಮನುಷ್ಯರಲ್ಲಿ ಮಾತ್ರವಿರುವುದು ಸರ್ವವ್ಯಾಪಿಯಾದ ಸಮಬುದ್ಧಿಯಾದ ಅದ್ವಿತೀಯನಾದ ಅಂಧಕಾರ ಶೂನ್ಯ ಪರಮಾತ್ಮನಲ್ಲಿ ಈ ವಿಕಾರಗಳಾವುವೂ ತೋರದು. ಆದರೂ ತನ್ನ ಏಕಾಂತಭಕ್ತರಮೇಲೆ ಆತನ ಅನುಗ್ರಹವು ಎಷ್ಟೆಂದು ಹೇಳೋಣ! ನನ್ನ ಮರಣಕಾಲದಲ್ಲಿ ಸಾಕ್ಷಾತ್ ದಯಮಾಡಿಸಿ ನನಗೆ ದರ್ಶನಕೊಟ್ಟಿದ್ದಾನೆ! ದೃಢಭಕ್ತಿಯಿಂದ ಆತನಲ್ಲಿ ಮನಸ್ಸಿಟ್ಟು ಅಂತ್ಯಕಾಲದಲ್ಲಿ ನಾಮಸಂಕೀರ್ತನೆಮಾಡುತ್ತಾ ಯೋಗಿಗಳು ದೇಹತ್ಯಾಗಮಾಡಿ ಕರ್ಮವಾಸನೆಯಿಂದ ಮುಕ್ತರಾಗುತ್ತಾರೆ. ಅದೇ ವಾಸುದೇವನೇ ಕಮಲ ನೇತ್ರಗಳಿಂದಲೂ, ಮಂದಹಾಸದಿಂದಲೂ

ಯುಕ್ತವಾದ ಚತುರ್ಭುಜಮೂರ್ತಿಯಿಂದ ಮರಣಕಾಲದವರೆಗೂ ನನ್ನ ಧ್ಯಾನದಲ್ಲಿ ನಿಂತಿರುವನು! ಎಂದು ಹೇಳಿದನಂತರ ಶರಶಯ್ಯೆ ಯಲ್ಲಿರುವ ಭೀಷ್ಮನನ್ನು ಧರ್ಮರಾಜನು ವಿವಿಧವಾದ ಧರ್ಮಗಳನ್ನೆಲ್ಲಾ ಕೇಳಲಾರಂಭಿಸಿದನು ಭೀಷ್ಮನು ಆಗ ಮನುಷ್ಯಜನ್ಮಕ್ಕೆ ವಿಹಿತ ವಾದ ಎಲ್ಲಾ ಧರ್ಮಗಳನ್ನು ಅಂದರೆ ಪ್ರವೃತ್ತಿಮಾರ್ಗ ನಿವೃತ್ತಿಮಾರ್ಗ ದಾನಧರ್ಮ, ಮೋಕ್ಷಧರ್ಮ, ಸ್ತ್ರೀಧರ್ಮ, ಭಕ್ತಿಧರ್ಮ ಮುಂತಾ ದುವುಗಳನ್ನೆಲ್ಲಾ ವಿಸ್ತಾರವಾಗಿ ತಿಳಿಸಿ ಧರ್ಮಾರ್ಥಕಾಮಮೋಕ್ಷರೂಪ ಪುರುಷಾರ್ಥಗಳನ್ನು ಉಪಾಖ್ಯಾನ, ಇತಿಹಾಸಗಳ ಮೂಲಕ ತಿಳಿಯ ಹೇಳಿದನು.

ಈ ರೀತಿ ಧರ್ಮಚರ್ಚೆಯು ನಡೆಯುತ್ತಿದ್ದಾಗ ಉತ್ತರಾಯಣವು ಪ್ರಾಪ್ತ ವಾಯಿತು. ಭೀಷ್ಮನು ದೇಹತ್ಯಾಗಕ್ಕೆ ಸಿದ್ಧನಾದನು. ಶಾಂತ ಚಿತ್ತನಾಗಿ ಮೌನಗ್ರಹಣಮಾಡಿ ಇಂದ್ರಿಯಗಳನ್ನೆಲ್ಲಾ ಒಳಕ್ಕೆಳೆದು ಕಣ್ಣುಮುಚ್ಚಿ ಪೀತಾಂಬರಧಾರಿಯಾದ ಶ್ರೀಕೃಷ್ಣನ ಚತುರ್ಭುಜ ಮೂರ್ತಿಯಲ್ಲಿ ನಿಲ್ಲಿಸಿ ಜನಾರ್ದನನನ್ನು ಸ್ತೋತ್ರಮಾಡಲಾರಂಭಿಸಿ ದನು.

"ಯಾವ ಆನಂದಮಯ ಪರಬ್ರಹ್ಮನಿಂದ ಮಾಯೆಯನ್ನು ಆಧಾರ ಮಾಡಿಕೊಂಡಿರುವ ಈ ಸೃಷ್ಟಿ ಪರಂಪರೆಯು ನಡೆಯುತ್ತಾ ಇರು ವುದೋ ಅಂತಹ ಯಾದವ ಶ್ರೇಷ್ಠನಾದ ಶ್ರೀ ಕೃಷ್ಣಪರಮಾತ್ಮನಲ್ಲಿ ನನ್ನ ನಿಷ್ಕಾಮ ಬುದ್ಧಿಯನ್ನು ಅರ್ಪಿಸುತ್ತಿದ್ದೇನೆ. ತ್ರಿಭುವನ ಸುಂದರನಾಗಿ ತಮಾಲ ತರುವಿನಂತೆ ಶ್ಯಾಮವರ್ಣವಾಗಿರುವ ಶರೀರವೂ ಸೂರ್ಯಕಿರಣದಂತೆ ಪ್ರಕಾಶಮಾನವಾದ ಗೌರವಸ್ತ್ರವೂ ಅಲಕಾವಳಿಯಿಂದಾವೃತವಾದ ಮುಖ ಕಮಲವೂ ಉಳ್ಳ ಅರ್ಜುನ ಸಖನಾದ ಶ್ರೀ ಕೃಷ್ಣನಲ್ಲಿ ನನಗೆ ನಿಷ್ಕಾಮಭಕ್ತಿಯು ನಿಲ್ಲಲಿ! ಯುದ್ಧರಂಗದಲ್ಲಿ ಕುದುರೆಗಳ ಕಾಲು ಗೊರಸಿನ ಧೂಳಿಯಿಂದ ಧೂಮ್ರವರ್ಣವಾದ ಮತ್ತು ಆಯಾಸದಿಂದ ಬೆವರೇರಿದ ಅಲುಗಾಡು ತ್ತಿರುವ ಮುಂಗುರುಳುಗಳಿಂದಲಂಕೃತವಾದ ಮುಖಕಮಲವೂ, ನನ್ನ

ಶೀತೋಕ್ಷ್ಣಬಾಣಗಳಿಂದ ಕವಚವು ಕತ್ತರಿಸಿ ಹೋದನಂತರ ಘಾಯ
ಗೊಂಡ ಚರ್ಮವುಳ್ಳ ರೂಪದ ಶ್ರೀ ಕೃಷ್ಣನಲ್ಲಿ ನನ್ನ ಮನಸ್ಸು
ರಮಿಸಲಿ! 'ನನ್ನ ಮಿತ್ರ ಶತ್ರುಸೇನೆಗಳ ಮಧ್ಯೆ ರಥವನ್ನು ತಂದು
ನಿಲ್ಲಿಸು' ಎಂದು ಅರ್ಜುನನು ಹೇಳಿದಾಗ ರಥವನ್ನು ಎರಡು
ಸೇನೆಗಳ ಮಧ್ಯೆ ನಿಲ್ಲಿಸಿ ಶತ್ರುಗಳನ್ನು ನೋಡಿದಾಗ ಅವರ
ಆವರ ಆಯುಸ್ಸನ್ನು ಹರಣಮಾಡಿದ ಅರ್ಜುನನಸಖನಲ್ಲಿ ನನ್ನ
ಮನಸ್ಸು ನೆಲಸಲಿ! ಯುದ್ಧದಲ್ಲಿ ಎದುರಾಗಿದ್ದ ಶತ್ರುಸೇನೆಯಲ್ಲಿನ
ಮಿತ್ರಬಾಂಧವರನ್ನು ನೋಡಿ ಮೋಹಪರನಾಗಿ ಯುದ್ಧಕ್ಕೆ ವಿಮುಖ
ನಾದ ಅರ್ಜುನನ ಕುಬುದ್ಧಿಯನ್ನು ನಿವಾರಿಸಿ ಆತನಿಗೆ ಜ್ಞಾನೋಪ
ದೇಶ ಮಾಡಿದ ಆ ಪರಮೇಶ್ವರನ ಚರಣ ಕಮಲಗಳಲ್ಲಿ ನನ್ನ ಮನಸ್ಸು
ನೆಲಸಲಿ! 'ಯುದ್ಧರಂಗದಲ್ಲಿ ನಾನು ಶಸ್ತ್ರಗ್ರಹಣಮಾಡುವುದಿಲ್ಲ"
ಎಂದು ತಾನು ಪ್ರತಿಜ್ಞೆಮಾಡಿದರೂ "ಶ್ರೀ ಕೃಷ್ಣನ ಕೈಯಲ್ಲಿ ಶಸ್ತ್ರವನ್ನು
ಹಿಡಿಸುತ್ತೇನೆ" ಎಂದು ನಾನು ಮಾಡಿದ ಪ್ರತಿಜ್ಞೆಯನ್ನು ನಡೆಸಿಕೊಟ್ಟು
ನನ್ನನ್ನು ಕೊಲ್ಲಲು ಚಕ್ರವನ್ನು ಹಿಡಿದು ಓಡಿಬಂದಾಗ ಮೈಮೇಲಿನ
ಉತ್ತರೀಯವು ಕಳಚಿ ಬಿದ್ದು ನೇತಾಡುತ್ತಿರಲು ಆನೆಯನ್ನು ಕೊಲ್ಲಲು
ಓಡಿಬರುತ್ತಿರುವ ಸಿಂಹದಂತೆ ತೋರುತ್ತಿದ್ದ ಆ ಭವ್ಯ ಮೂರ್ತಿಯನ್ನು
ಶರಣುಹೊಂದುತ್ತೇನೆ. ನನ್ನಿಂದ ಬಿಡಲ್ಪಟ್ಟ ಬಾಣಗಳಿಂದ ಕವಚವು
ಹರಿದುಹೋಗಿ ಶ್ಯಾಮಸುಂದರ ದೇಹವೆಲ್ಲಾ ರಕ್ತದಿಂದ ರಂಜಿತ
ವಾಗಿದ್ದಾಗ ನನ್ನೆದುರಿಗೆ ಓಡಿಬರುತ್ತಿದ್ದ ಆ ಭಕ್ತವತ್ಸಲ ಭಗವಂತನು
ನನಗೆ ರಕ್ಷಕನಾಗಲಿ. ಅರ್ಜುನನ ರಥದಮೇಲೆ ನಿಂತು ಕೈಯಲ್ಲಿ
ಚಾವಟಿಯನ್ನೂ ಮತ್ತೊಂದರಲ್ಲಿ ಕುದುರೆಗಳ ಲಗಾಮನ್ನೂ ಹಿಡಿದು
ಶೋಭಿಸುತ್ತಿದ್ದ ಆ ದರ್ಶನೀಯ ಶ್ರೀ ಕೃಷ್ಣಪರಮಾತ್ಮನಲ್ಲಿ ಆಸನ್ನ
ಮರಣನಾದ ನನಗೆ ರತಿಯುಂಟಾಗಲಿ! ಯಾವ ಸುಂದರ ಮೂರ್ತಿಯ
ಸೌಂದರ್ಯವನ್ನು ನೋಡುತ್ತಾ ಯುದ್ಧರಂಗದಲ್ಲಿ ಮರಣಹೊಂದಿದ
ಶೂರ–ವೀರರೆಲ್ಲಾ ಸಾರೂಪ್ಯ ಮುಕ್ತಿಯನ್ನೇ ಹೊಂದಿದರೋ ಅಂತಹ
ದೇವನು ನನ್ನನ್ನು ರಕ್ಷಿಸಲಿ! ತನ್ನ ಲಲಿತಗತಿವಿಲಾಸ, ಮನೋಹರ

ಮೃದುಹಾಸ ಪ್ರೇಮಮಯನಿರೀಕ್ಷಣ ಮುಂತಾದುವುಗಳಿಂದ ಗೋಪಿಯರನ್ನು ಮುಗ್ಧರನ್ನಾಗಿ ಮಾಡಿ ಇದ್ದಕ್ಕಿದ್ದಂತೆಯೇ ಅದೃಶ್ಯ ವಾಗಿ ಬಿಟ್ಟಾಗ, ಅವರು ವಿರಹದಿಂದ ತನ್ಮಯರಾಗಿ ಪವಿತ್ರ ಪ್ರೇಮದಲ್ಲಿ ಮಗ್ನರಾದಂತಹ ದೃಢಭಕ್ತಿಯಿಂದ ಮಾತ್ರ ಸಿಕ್ಕಬಲ್ಲ ಶ್ರೀ ಕೃಷ್ಣನಲ್ಲಿ ನನಗೆ ದೃಢಭಕ್ತಿಯು ನಿಲ್ಲಲಿ! ಯುಧಿಷ್ಠಿರನ ರಾಜಸೂಯ ಯಜ್ಞಭವನದಲ್ಲಿ ಋಷಿ, ಮುನಿ, ಮಹೀಪಾಲರುಗಳ ಮಧ್ಯೆ ಅಗ್ರಪೂಜೆಯನ್ನು ಸ್ವೀಕರಿಸಿದ ಸರ್ವಶ್ರೇಷ್ಠನಾದ ಜಗತ್ಪೂಜ್ಯ ಪರಬ್ರಹ್ಮನು ನನ್ನ ಕಣ್ಣೆದುರಿಗೆ ನಿಂತಿದ್ದಾನೆ! ಇದೆಂತಹ ಭಾಗ್ಯ! ನಾನು ಕೃತಾರ್ಥನಾದೆನು! ಜನ್ಮಕರ್ಮ ರಹಿತನಾದ, ಏಕರೂಪ ನಾದಾಗ್ಯೂ ಅನೇಕ ಪಾತ್ರೆಗಳಲ್ಲಿ ಬಿದ್ದ ಪ್ರತಿಬಿಂಬಗಳಲ್ಲಿ ಬಹು ರೂಪವಾಗಿ ಕಾಣುವ ಸೂರ್ಯನಂತೆ, ತಾನೇ ಸೃಷ್ಟಿ ಮಾಡಿದ ಜೀವರಾಶಿಗಳಲ್ಲಿ ಅನೇಕ ರೂಪವಾಗಿ ಕಾಣಬರುತ್ತಿರುವ ಆ ಈಶ್ವರನನ್ನು, ಭೇದ ದೃಷ್ಟಿಯನ್ನು ಬಿಟ್ಟು ಮೋಹಶೂನ್ಯ ಚಿತ್ತದಿಂದ ಶರಣು ಹೊಂದುತ್ತಿದ್ದೇನೆ." ಎಂದು ಹೇಳುತ್ತಾ ತನ್ನ ಆತ್ಮರೂಪ ನಾದ ಶ್ರೀ ಕೃಷ್ಣ ಪರಮಾತ್ಮನಲ್ಲಿ ಮನಸ್ಸನ್ನೂ, ಮಾತನ್ನೂ, ದೃಷ್ಟಿಯನ್ನೂ ನಿಲ್ಲಿಸಿ ಭೀಷ್ಮನು ಸುಮ್ಮನಾಗಿಬಿಟ್ಟನು ಆಗ ದೇವ ದುಂದುಭಿಗಳು ಮೊಳಗಿದವು. ಸಾಧುಗಳೆಲ್ಲಾ ಭೀಷ್ಮನನ್ನು ಪ್ರಶಂಸೆ ಮಾಡಿದರು. ಆಕಾಶದಿಂದ ಪುಷ್ಪವೃಷ್ಟಿಯಾಯಿತು.

ನಂತರ ಧರ್ಮರಾಜನು ಭೀಷ್ಮನ ಮೃತದೇಹಕ್ಕೆ ಅಂತ್ಯಸಂಸ್ಕಾರಗಳನ್ನು ಮಾಡಿ ಒಂದು ಮುಹೂರ್ತ ದುಃಖಿಸಿದನು. ಮುನಿಗಳು ಸಂತೋಷ ದಿಂದ ಶ್ರೀಕೃಷ್ಣನನ್ನು ಗುಪ್ತನಾಮಗಳಿಂದ ಸ್ತೋತ್ರಮಾಡಿದರು ಕೃಷ್ಣ ಪ್ರಾಣರಾದ ಆ ಋಷಿಗಳು ತಮ್ಮತಮ್ಮ ಆಶ್ರಮಗಳಿಗೆ ತೆರಳಿದರು ಶ್ರೀಕೃಷ್ಣಸಹಿತನಾದ ಧರ್ಮರಾಜನು ಹಸ್ತಿನಾಪುರಕ್ಕೆ ಹಿಂತಿರುಗಿ ಪುತ್ರ ಶೋಕದಿಂದ ವಿಹ್ವಲರಾದ ಧೃತರಾಷ್ಟ್ರ ಗಾಂಧಾರಿಯರನ್ನು ವಿನಯ ವಚನಗಳಿಂದ ಸಂತೈಸಿದನು

ಭೀಷ್ಮರ ಮರಣಾನಂತರ ಧರ್ಮರಾಜನು ಶ್ರೀಕೃಷ್ಣಪರಮಾತ್ಮ ಮತ್ತು ಭೀಷ್ಮಪಿತಾಮಹರ ಉಪದೇಶದಿಂದ ಶಾಂತಮನಸ್ಕನಾಗಿ ತಮ್ಮಂದಿರ ಸಹಾಯದಿಂದ ರಾಜ್ಯಭಾರವನ್ನು ನಡೆಸತೊಡಗಿದನು. ಆತನ ರಾಜ್ಯಭಾರದ ಕಾಲದಲ್ಲಿ ಮೇಘಗಳು ಕಾಲಕಾಲಕ್ಕೆ ಮಳೆಯನ್ನು ಸುರಿಸುತ್ತಿದ್ದುವು. ಭೂಮಿಯಲ್ಲಿ ಬಿತ್ತಿದ ಪ್ರತಿಯೊಂದು ಬೀಜವೂ ಶಕ್ತಿಯುಕ್ತವಾಗಿ ಹೇರಳವಾಗಿ ಬೆಳೆಯುತ್ತಿತ್ತು. ಹಸುಗಳು ಕೊಟ್ಟಿಗೆಯಲ್ಲೆಲ್ಲಾ ಹಾಲುಕರೆಯುವಷ್ಟು ಹೆಚ್ಚಾಗಿ ಹಾಲುಕೊಡುತ್ತಿದ್ದುವು. ನದಿ ಸಮುದ್ರ ಪರ್ವತಗಳಲ್ಲಿರುವ ಎಲ್ಲಾ ವನಸ್ಪತಿಗಳೂ, ಲತಾದಿಗಳೂ ಮತ್ತು ಧರ್ಮಕ್ಕೆ ತಕ್ಕಂತೆ ಹೂಹಣ್ಣುಗಳನ್ನು ಬಿಡುತ್ತಿದ್ದುವು. ಧರ್ಮರಾಜನ ರಾಜ್ಯದಲ್ಲಿ ದೈವಕೃತಕ್ಲೇಶವಾಗಲೀ, ಪ್ರಾಣಿಕೃತಪೀಡೆಯಾಗಲೀ ಮಾನಸಿಕಚಿಂತೆಯಾಗಲೀ, ಜನಗಳಿಗೆ ಆಗುತ್ತಿರಲಿಲ್ಲ.

ಶ್ರೀಕೃಷ್ಣಪರಮಾತ್ಮನು ಧರ್ಮರಾಜನನ್ನು ಸಂತೋಷಪಡಿಸಿ ಆತನ ಅನುಜ್ಞೆಯಿಂದ ದ್ವಾರಕಾಪಟ್ಟಣಕ್ಕೆ ಹೊರಡಲನುವಾದನು. ಧರ್ಮರಾಜನನ್ನು ನಮಸ್ಕರಿಸಿ ಅರ್ಜುನಾದಿಗಳಿಗೆ ಆಲಿಂಗನವನ್ನು ಕೊಟ್ಟು ಆತನನ್ನು ಬಿಡಲಾರದೆ ಉಕ್ಕಿಬರುತ್ತಿರುವ ಕಣ್ಣೀರನ್ನು ತಡೆಯುತ್ತಿರುವ ಅವರೆಲ್ಲರಿಂದಲೂ ಬೀಳ್ಕೊಂಡು ರಥವನ್ನು ಹತ್ತಿದನು. ಅರ್ಜುನನು ಶ್ವೇತಛತ್ರವನ್ನು ಹಿಡಿದನು. ಉದ್ಧವಸಾತ್ಯಕಿಯರು ಚಾಮರವನ್ನು ಬೀಸಲಾರಂಭಿಸಿದರು. ಬ್ರಾಹ್ಮಣರು ವೇದೋಕ್ತಮಂತ್ರಗಳಿಂದ ಆಶೀರ್ವದಿಸುತ್ತಿದ್ದರು. ಪಟ್ಟಣದ ಬೀದಿಗಳ ಎರಡುಕಡೆಗಳಲ್ಲಿಯೂ ಇರುವ ಮಹಡಿಮನೆಗಳ ಬಿಸಿಲುಮಚ್ಚಿನಮೇಲೆ ನಿಂತಿದ್ದ ಸ್ತ್ರೀಯರು ಪುಷ್ಪವೃಷ್ಟಿಯನ್ನು ಸುರಿಸುತ್ತಿದ್ದರು. ಶ್ರೀಕೃಷ್ಣಪರಮಾತ್ಮನಲ್ಲಿ ಭಕ್ತಿಯನ್ನಿಟ್ಟಿದ್ದ ಹಸ್ತಿನಾಪುರಿಯ ಸ್ತ್ರೀಯರು ತಮ್ಮತಮ್ಮಲ್ಲಿ ಈರೀತಿ ಮಾತನಾಡಿಕೊಳ್ಳುತ್ತಿದ್ದರು.

“ಎಲೈ ಸಖಿಯರೇ, ಸಂಪೂರ್ಣ ಜೀವೋಪಾಧಿಗಳ ಮೂಲರೂಪಗಳಾದ ಮಹತ್ತತ್ವಾದಿ ಶಕ್ತಿಗಳೂ ಯಾವಾತನಲ್ಲಿ ಲಯಹೊಂದುವುವೋ ಗುಣತ್ರಯಗಳೂ ಇಲ್ಲದಂತಾಗುವುವೋ, ಪ್ರಳಯಕಾಲದಲ್ಲಿಯೂ ಸ್ವಸ್ವ

ರೂಪದಿಂದಿರುವ ಪುರಾಣಪುರುಷನೇ ಈತನು! ಈತನು ತನ್ನ ಕಾಲ ರೂಪಶಕ್ತಿಯಿಂದ ಪ್ರೇರಿತವಾದ ಜಗನ್ಮೋಹಿನಿಯಾದ ಜಗದುತ್ಪತ್ತಿಕಾರಣವಾದ ಮಾಯೆಯನ್ನು ನಾಮರೂಪಧಾರಣೆ ಮಾಡುವ ಇಚ್ಛೆಯಿಂದ ಕೈಹಿಡಿದನು. ವೇದಾದಿಶಾಸ್ತ್ರಗಳನ್ನು ರಚಿಸಿದವನು ಈತನೇ ಯಾರ ಚರಣಕಮಲಗಳನ್ನು ಜಿತೇಂದ್ರಿಯರಾದ ಯೋಗಿಗಳು ಭಕ್ತಿಭಾವದಿಂದ ಧ್ಯಾನಿಸುತ್ತಾ ಚಿತ್ತಶುದ್ಧಿಮಾಡಿಕೊಂಡು ಪ್ರಾಣಾಯಾಮ ಯಮನಿಯಮಸಮಾಧಿಗಳಿಂದ ಬಹುಕಾಲ ಸಾಧನೆ ಮಾಡಿದಾಗ್ಯೂ ಬಹುಕಾಲದನಂತರ ದರ್ಶನಮಾಡಬಲ್ಲರೋ ಆ ಪರಮಪುರುಷನೇ ಈತನು! ಯಾರ ಪುಣ್ಯಸತ್ಯಚರಿತ್ರೆಗಳನ್ನು ವೇದವಾದಿಗಳಾದ ವ್ಯಾಸಾದಿ ಮಹರ್ಷಿಗಳು ಪರಮಗೂಢವಾದ ಗ್ರಂಥಗಳಲ್ಲಿ ಗಾನಮಾಡಿರುವರೋ, ಯಾರು ಲೀಲೆಯಿಂದ ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಿದ್ದರೂ ಸಾಂಸಾರಿಕಪ್ರಪಂಚದಲ್ಲಿ ಲಿಪ್ತನಾಗುವುದಿಲ್ಲವೋ ಆ ಈಶ್ವರನೇ ಈತನು ತಾಮಸೀಪ್ರಕೃತಿಯ ರಾಜರು ಅಧರ್ಮಕ್ಕೆ ವಶರಾದಾಗ ಅವರ ನಾಶಕಕ್ಕಾಗಿ ಈ ಯುಗದಲ್ಲಿ ಜಗದುದ್ಧಾರಕ್ಕಾಗಿ ಸಾತ್ವಿಕಾವತಾರವನ್ನು ಗ್ರಹಣಮಾಡಿ ಐಶ್ವರ್ಯ, ಸತ್ಯ, ಋತ (ಯಥಾರ್ಥನಿಜಧರ್ಮೋಪದೇಶ) ದಯಾ, ಯಶಸ್ಸುಗಳನ್ನು ಹರಡುತ್ತಿರುವನೋ ಆ ಈಶ್ವರನೇ ಇವನು. ಪುರುಷೋತ್ತಮನಾದ ಲಕ್ಷ್ಮೀಪತಿಯು ಅವತರಿಸಿದ ಯದುವಂಶವು ಧನ್ಯವು! ಈ ಜಗದೀಶ್ವರನು ಸಂಚರಿಸುವ ಮಧುವನವೂ ಧನ್ಯವು! ಸ್ವರ್ಗವನ್ನು ತಿರಸ್ಕರಿಸುತ್ತಿರುವ ದ್ವಾರಕಾಪುರಿಯೂ ಅದರಲ್ಲಿ ವಾಸಮಾಡುತ್ತಾ ಈ ದೇವನ ಮಂದಹಾಸಯುಕ್ತ ಮುಖಚಂದ್ರದರ್ಶನದಿಂದ ಅನುಗ್ರಹೀತವಾದ ಭಕ್ತವೃಂದವೂ ಧನ್ಯವೇ! ವ್ರತ, ಸ್ನಾನ, ಹವನಾದಿ ಶುಭಕರ್ಮಗಳಿಂದ ಈ ಸ್ವಾಮಿಯನ್ನು ಪತಿಯನ್ನಾಗಿ ಪಡೆದು ಈತನ ಅಧರಾಮೃತವನ್ನು ಪಾನಮಾಡುವ ರಾಣಿಯರೂ ಧನ್ಯರೇ! ಶಿಶುಪಾಲಾದಿ ದುಷ್ಟರಾಜರನ್ನು ನಿಗ್ರಹಿಸಿ ಸ್ವಯಂವರದಲ್ಲಿ ಈ ಸ್ವಾಮಿ

ಯಿಂದ ತೆಗೆದುಕೊಂಡು ಬರಲ್ಪಟ್ಟ ರುಕ್ಮಿಣೀದೇವಿಯೂ, ಹಾಗೆಯೇ ಈಕೆಯಮಕ್ಕಳೂ, ಜಾಂಬವತೀ, ಸತ್ಯಭಾಮಾದಿ ಪಟ್ಟಮಹಿಷಿಯರೂ ಹದಿನಾರು ಸಹಸ್ರ ಸ್ತ್ರೀಯರೂ ಧನ್ಯರೇ ! "

ಈರೀತಿಯಾಗಿ ಮಾತನಾಡಿಕೊಳ್ಳುತ್ತಿರುವ ಸ್ತ್ರೀಯರ ಮಾತುಗಳನ್ನು ಕೇಳುತ್ತಾ ಮುಗುಳುನಗೆನಗುತ್ತಾ ದೇವನು ಪ್ರಯಾಣಮಾಡುತ್ತಿದ್ದನು ಸ್ವಲ್ಪದೂರ ತನ್ನನ್ನು ಹಿಂಬಾಲಿಸಿ ಬಂದ ಪಾಂಡವಾದಿಗಳನ್ನು ಹಿಂದಕ್ಕೆ ಕಳುಹಿಸಿ ಉದ್ಧವಾದಿಗಳೊಡನೆ ಮುಂದೆಹೋಗುತ್ತಾ ಮಾರ್ಗಮಧ್ಯದಲ್ಲಿ ಕುರು, ಜಾಂಗಲ, ಪಾಂಚಾಲ, ಶೂರಸೇನ, ಯಮುನಾಪ್ರದೇಶ, ಬ್ರಹ್ಮಾವರ್ತ, ಕುರುಕ್ಷೇತ್ರ, ಮತ್ಸ್ಯ, ಸಾರಸ್ವತ, ಮರು, ಸೌವೀರ, ಆಭೀರದೇಶಗಳನ್ನು ದಾಟಿ ದ್ವಾರಕೆಗೆ ಸಮೀಪವಾದ ಆನರ್ತದೇಶವನ್ನು ಸೇರಲು ಕುದುರೆಗಳು ಸ್ವಲ್ಪ ಆಯಾಸಹೊಂದಿದವು.

ತೃಣಫಲಸಮೃದ್ಧವಾದ ತನ್ನ ಆನರ್ತದೇಶವನ್ನು ಸೇರಿದನಂತರ ದ್ವಾರಕಾಪಟ್ಟಣದ ಮಹಾದ್ವಾರಕ್ಕೆ ಬಂದು ತನ್ನ ಸುಪ್ರಸಿದ್ಧ ಪಾಂಚಜನ್ಯಶಂಖವನ್ನೂದಿದನು. ಪಾಂಚಜನ್ಯವು ಶ್ವೇತವರ್ಣವುಳ್ಳದುದಾದುದರಿಂದ ಶ್ರೀ ಕೃಷ್ಣನ ಕರಕಮಲಗಳಲ್ಲಿ ಶೋಭಿಸುತ್ತಾ ಆತನ ಅರುಣವರ್ಣದ ತುಟಿಯ ಪ್ರತಿಬಿಂಬದೊಡನೆ ಬೆರೆತು ಕಮಲದಳದ ಕೆಂಪಿನಮಧ್ಯೆ ಕುಳಿತಿರುವ ಕಲಹಂಸದಂತೆ ಶೋಭಿಸಿತು. ಜಗತ್ತಿನ ಭಯಕ್ಕೇ ಭಯಂಕರವಾದ ಶಂಖನಾದವನ್ನು ಕೇಳಿದೊಡನೆಯೇ ಸ್ವಾಮಿಯ ದರ್ಶನಕ್ಕೆ ಉತ್ಸುಕರಾಗಿದ್ದ ಪ್ರಜೆಗಳೆಲ್ಲಾ ಪರಮಾತ್ಮನ ಸಮೀಪವನ್ನು ಸೇರಿದರು. ಆತ್ಮಾರಾಮನಾದ ಪೂರ್ಣಕಾಮ ಶ್ರೀ ಕೃಷ್ಣನ ದರ್ಶನಮಾಡಿ ಪ್ರಜೆಗಳು ತಂತಮ್ಮ ಯೋಗ್ಯತೆಯನ್ನು ಅನುಸರಿಸಿ, ಸೂರ್ಯನಿಗೆ ದೀಪದಾನ ಮಾಡಿದಂತೆ, ಮರ್ಯಾದೆಗಳನ್ನು ಅರ್ಪಿಸಿದರು. ಪ್ರೇಮದಿಂದ ಪ್ರಫುಲ್ಲಿತಾಂತಃಕರಣವುಳ್ಳ ಆ ಪ್ರಜೆಗಳು ಹರ್ಷದಿಂದ ಗದ್ಗದಿತರಾಗಿ ಮಕ್ಕಳು ತಂದೆಯೊಡನೆ ಹೇಳುವಂತೆ ಸರ್ವಾತ್ಮಕನಾದ ದೇವನೊಡನೆ ಈ ರೀತಿಯಾಗಿ ಹೇಳಲಾರಂಭಿಸಿದರು.

"ನಾಥ, ಬ್ರಹ್ಮನೂ ಆತನ ಮಕ್ಕಳಾದ ಸನಕಾದಿಗಳೂ ನಮಸ್ಕರಿಸುವ ನಿನ್ನ ಚರಣಕಮಲಗಳನ್ನು ಸದಾ ನಮಸ್ಕರಿಸುತ್ತೇವೆ. ನಿನ್ನ ಚರಣಕಮಲವು ಜಗತ್ತಿನಲ್ಲಿ ಕ್ಷೇಮವನ್ನು ಕೋರುವ ವ್ಯಕ್ತಿಗೆ ಏಕಮಾತ್ರ ಆಶ್ರಯವಾಗಿದೆ. ನಿನ್ನನ್ನು ಆಶ್ರಯಿಸಿದರೆ ಕಾಲಪುರುಷನ ಭಯವೂ ಇರುವುದಿಲ್ಲ. ಹೇ, ವಿಶ್ವಜೀವನ, ನೀನು ನಮ್ಮನ್ನು ರಕ್ಷಿಸಿಕಾಪಾಡು, ನೀನೇ ನಮ್ಮ ತಂದೆ, ತಾಯಿ, ಮಿತ್ರ, ಸ್ವಾಮಿ, ಗುರು ಮತ್ತು ಪರಮ ಪೂಜ್ಯದೇವನು. ನಿನ್ನನ್ನು ಅನುಸರಿಸುವುದರಿಂದಲೇ ನಾವು ಕೃತಾರ್ಥರು. ದೇವ, ದೇವತೆಗಳಿಗೂ ದುರ್ಲಭವಾದ ನಿನ್ನ ಮಂದಹಾಸಯುಕ್ತ ಸ್ನೇಹಪೂರ್ಣ ದೃಷ್ಟಿಯಿಂದೊಡಗೂಡಿದ ಮೂರ್ತಿಯನ್ನು ನಿತ್ಯವೂ ನಾವು ನೋಡುವುದರಿಂದ ನಾವೇ ಧನ್ಯರು; ಕೃತಕೃತ್ಯರು. ನೀನು ಬಂಧುಗಳನ್ನು ನೋಡುವುದಕ್ಕಾಗಿ ಮಧುರೆಗಾಗಲಿ ಹಸ್ತಿನಾಪುರಕ್ಕಾಗಲಿ ಹೋದಾಗ ಸೂರ್ಯದರ್ಶನವಿಲ್ಲದ ಕಣ್ಣುಗಳು ವ್ಯಾಕುಲಪಡುವಂತೆ ಒಂದು ಕ್ಷಣವನ್ನು ಕೋಟಿಯುಗಗಳಂತೆ ವ್ಯಾಕುಲದಿಂದ ಕಳೆಯುತ್ತೇವೆ"

ಪ್ರಜೆಗಳು ಹೀಗೆ ಸ್ತೋತ್ರ ಮಾಡುತ್ತಿರಲು ಅವರನ್ನು ಕೃಪಾದೃಷ್ಟಿಯಿಂದ ನೋಡುತ್ತಾ ಶ್ರೀ ಕೃಷ್ಣನು ಪುರಪ್ರವೇಶ ಮಾಡಿದನು. ನಾಗಗಣಗಳು ಭೋಗವತಿಯನ್ನು ರಕ್ಷಿಸುವಂತೆ ಶ್ರೀಕೃಷ್ಣಚಂದ್ರನಂತೆಯೇ ಬಲಶಾಲಿಗಳಾದ ಮಧು, ಭೋಜ, ದಾಶಾರ್ಹ, ಅರ್ಹ, ಕುಕ್ಕುರ, ಅಂಧಕವೃಷ್ಣಿವಂಶಗಳ ಯಾದವರುಗಳು ರಕ್ಷಿಸುತ್ತಿರುವ ಆ ದ್ವಾರಕಾಪುರಿಯಲ್ಲಿ ಎಲ್ಲ ಋತುಗಳಲ್ಲಿಯೂ ಫಲಪುಷ್ಪಗಳಿಂದ ಶೋಭಿಸುತ್ತಿರುವ ಅನೇಕ *ಉದ್ಯಾನ, †ಉಪವನ, ‡ಆರಾಮ, ಸ್ವಚ್ಛ ಜಲಶೋಭಿತ ಸರೋವರ ಇವುಗಳು ಕಂಗೊಳಿಸುತ್ತಿವೆ. ಪಟ್ಟಣದ ದ್ವಾರಗಳಲ್ಲಿ, ಮನೆಗಳ ಬಾಗಿಲುಗಳಲ್ಲಿ, ರಸ್ತೆಗಳಲ್ಲಿ, ಚಪ್ಪರ ತೋರಣಗಳೂ ಧ್ವಜ

---

*ಉದ್ಯಾನ=ಕಿತ್ತಲೇ ಹೇರಳೇ ಮುಂತಾದ ಫಲವೃಕ್ಷಗಳಿಂದೊಡಗೂಡಿದುದು.

†ಉಪವನ=ಪುಷ್ಪವೃಕ್ಷಗಳಿಂದೊಡಗೂಡಿದುದು.

‡ಆರಾಮ=ವಿಶ್ರಾಂತಿಗೃಹಗಳಿಂದೊಡಗೂಡಿದುದು.

ಪತಾಕೆಗಳೂ ತಂಗೋರಣಗಳೂ ಅಲ್ಲಿ ಸತ್ತಿವೆ ರಾಜಮಾರ್ಗ, ಸಣ್ಣಗಲ್ಲಿ, ದೊಡ್ಡ ಗಲ್ಲಿ, ವೇದಿಕೆಗಳು, ಇವುಗಳೆಲ್ಲೆಲ್ಲಾ ಪನ್ನೀರು ಮುಂತಾದ ಸುಗಂಧ ದ್ರವ್ಯಗಳನ್ನು ಚಿಮುಕಿಸಿ ಅಲಂಕರಿಸಿದ್ದಾರೆ. ಪ್ರತಿಯೊಂದು ದೊಡ್ಡ ದೊಡ್ಡ ಭವನದ ಬಾಗಿಲುಗಳಲ್ಲಿಯೂ ಮೊಸರು, ಅಕ್ಷತೆ, ಅರಳು, ಫಲ, ಧನ, ಧೂಪ, ದೀಪ, ಜಲಪೂರ್ಣಕಲಶ ಮುಂತಾದುವುಗಳು ಸಿದ್ಧಮಾಡಲ್ಪಟ್ಟಿವೆ ತಮ್ಮ ಪ್ರೇಮಪಾತ್ರ ಶ್ರೀ ಕೃಷ್ಣಚಂದ್ರನ ದರ್ಶನಕ್ಕಾಗಿ ವಸುದೇವ, ಬಲರಾಮ, ಸಾಂಬ, ಪ್ರದ್ಯುಮ್ನ ಮುಂತಾದವರು ಪಟ್ಟದಾನೆಯನ್ನೂ, ಬ್ರಾಹ್ಮಣರನ್ನೂ ಮುಂದು ಮಾಡಿಕೊಂಡು ಶಂಖ, ದುಂದುಭಿ, ಕಹಳೆಗಳೊಡನೆ ತಂತಮ್ಮ ರಥಗಳನ್ನೇರಿ ಎದುರುಗೊಳ್ಳಲು ಬಂದರು. ಕನಕಕುಂಡಲಗಳಿಂದ ಅಲಂಕೃತೆಯರಾದ ವಾರಾಂಗನೆಯರೂ ನಟ, ನರ್ತಕ, ಗಾಯಕ, ಸೂತ ಮಾಗಧವಂದಿಗಳೂ ಹೊರಟರು. ಪರಮಾತ್ಮನೂ ನಹ ತನ್ನ ಬಂಧು ಬಾಂಧವ ಅನುಚರ ಪುರವಾಸಿಗಳನ್ನು ಯಥಾಯೋಗ್ಯವಾಗಿ ಸನ್ಮಾನಿಸಿದನು ಕೆಲವರನ್ನು ನೋಡುತ್ತಲೇ ತಲೆತಗ್ಗಿಸಿ ನಮಸ್ಕರಿಸಿ ದನು. ಕಲವರಿಗೆ ಮಾತಿನಿಂದ ಪ್ರಣಾಮ ಮಾಡಿದನು. ಕೆಲವರಿಗೆ ಆಲಿಂಗನ ಕೊಟ್ಟನು. ಕೆಲವರ ಕರಸ್ಪರ್ಶ ಮಾಡಿದನು. ಕೆಲವರನ್ನು ಮಂದಹಾಸದಿಂದಲೂ ಮತ್ತೆ ಕೆಲವರನ್ನು ಕೃಪಾದೃಷ್ಟಿ ಯಿಂದ ನೋಡಿಯೂ, ಕೃತಾರ್ಥರನ್ನಾಗಿ ಮಾಡಿದನು. ಕೆಲವರಿಗೆ ಕುಶಲಪ್ರಶ್ನೆಮಾಡಿ, ಕೆಲವರ ಅಭೀಷ್ಟಪೂರ್ತಿಮಾಡಿ ಆದರಿಸಿದನು †

ಸ್ತ್ರೀಸಹಿತರಾದ ವೃದ್ಧಬ್ರಾಹ್ಮಣರಿಂದಲೂ ಗುರುಗಳಿಂದಲೂ ಆಶೀರ್ವಾದ

† ಪ್ರಹ್ವಾಭಿವಾದನಾಶ್ಲೇಷ ಕರಸ್ಪರ್ಶಸ್ಮಿತೇಕ್ಷಣೈಃ ।
ಆಶ್ವಾಸ್ಯ ಚ ಶ್ವಪಾಕೇಭ್ಯೋ ವರೈಶ್ಚಾಭಿಮತೈರ್ವಿಭುಃ (೧-೧೧-೨೨)

ಇದು ಸನಾತನ ಧರ್ಮದ ಒಂದು ಅಂಗ. ಎಲ್ಲ ಸಮಾಜಗಳಲ್ಲಿಯೂ ಕಂಡು ಬರುವ ಸಂಪ್ರದಾಯಗಳ ತಳಹದಿ. ಹಿರಿಯರಲ್ಲಿ ಶ್ರೇಷ್ಠರಾದವರನ್ನು ತಲೆತಗ್ಗಿಸಿ ನಮಸ್ಕರಿಸಬೇಕು. ಅದಕ್ಕಿಂತ ಕೆಳಮಟ್ಟದ ಹಿರಿಯರನ್ನು ಮಾತಿನಿಂದ

ವನ್ನು ಪಡೆದ, ವಂದಿ ಮಾಗಧರಿಂದ ಜಯ ಜಯಕಾರವನ್ನು ಹೊಂದುತ್ತಾ ಪಟ್ಟಣ ಪ್ರವೇಶಮಾಡುತ್ತಿರುವಾಗ ದ್ವಾರಕಾ ವಾಸಿಗಳಿಗೆ ಶ್ರೀಕೃಷ್ಣಚಂದ್ರನ ದರ್ಶನವು ಸಹಜವಾಗಿ ಆಗುತ್ತಿದ್ದರೂ ಅವರ ಉತ್ಸಾಹಿಗಳಾದ ನೇತ್ರಗಳಿಗೆ ತೃಪ್ತಿಯಾಗುತ್ತಲಿಲ್ಲ. ಶ್ಯಾಮ ಸುಂದರನ ಸೌಂದರ್ಯ ದರ್ಶನದಿಂದ ಉತ್ಸಾಹಿತರಾದ ದ್ವಾರಕಾ ಸ್ತ್ರೀಯರು ತಮ್ಮ ತಮ್ಮ ಮನೆಗಳ ಮಹಡಿಗಳನ್ನು ಹತ್ತಿ ಬಹು ಮಚ್ಚಿನ ಮೇಲಿನಿಂದ ದರ್ಶನ ಎಷ್ಟು ನೋಡಿದರೂ ಅವರಿಗೆ ತೃಪ್ತಿ ಯಾಗಲಿಲ್ಲ. ಅದೂ ಸತ್ಯವೇ, ಏಕೆಂದರೆ—

**ಶ್ರಿಯೋ ನಿವಾಸೋ ಯಸ್ಯೋರಃ ಪಾನಪಾತ್ರಂ ಮುಖಂ ದೃಶಾಂ ।**
**ಬಾಹವೋ ಲೋಕಪಾಲಾನಾಂ ಸಾರಂಗಾಣಾಂ ಪದಾಂಬುಜಂ ॥**

ಯಾರ ಹೃದಯದಲ್ಲಿ ಲಕ್ಷ್ಮಿಯು ವಾಸಿಸುವಳೋ, ಯಾರ ಮುಖ ಕಮಲವು ಎಲ್ಲರಿಗೂ ಸೌಂದರ್ಯಾಮೃತ ಪಾನಮಾಡುವ ನಯನಗಳಿಗೆ ಅಮೃತಪಾತ್ರೆಯಂತೆ ಇರುವುದೋ, ಯಾರ ಬಾಹುಗಳಲ್ಲಿ ದಿಕ್ಪಾಲಕರು ವಾಸಮಾಡುವರೋ, ಯಾರ ಚರಣಗಳಲ್ಲಿ ಸಾರಂಗವೆಂಬ ಹೆಸರುಳ್ಳ ಭಕ್ತರು ವಾಸಮಾಡುವರೋ ಅಂತಹ ದೇವನನ್ನು ನೋಡುತ್ತಿದ್ದರ ಯಾರ ನಯನಗಳಿಗೆ ತಾನೇ ತೃಪ್ತಿಯಾದೀತು ?

ಎಡ ಬಲಗಳಲ್ಲಿ ಶ್ವೇತಚಾಮರಗಳು ಬೀಸಲ್ಪಡುತ್ತಿರಲು, ತಲೆಯ ಮೇಲೆ ಶ್ವೇತಛತ್ರವೂ, ಅದರ ಮೇಲೆ ಪುಷ್ಪ ವೃಷ್ಟಿಯೂ, ಇರುತ್ತಾ, ಅವು ಗಳ ಮಧ್ಯೆ ವನಮಾಲಾಲಂಕೃತನಾಗಿ ಪೀತಾಂಬರಧಾರಿಯಾಗಿ ಬರು

---

ನಮಸ್ಕರಿಸಿದರೆ ಸಾಕು. ಸಮವಯಸ್ಕರಾದ ಮಿತ್ರಬಾಂಧವರನ್ನು ಕಂಠಾಲಿಂಗನ ಹಸ್ತಲಾಘವಗಳಿಂದಲೂ, ಸಮಾಜದಲ್ಲಿ ಕೆಳಮಟ್ಟದಲ್ಲಿರುವವರನ್ನು ಮುಗುಳ್ನಗೆ ಕೃಪಾದೃಷ್ಟಿಗಳಿಂದಲೂ ಸತ್ಕರಿಸುವುದು ಶಿಷ್ಟ ಸಂಪ್ರದಾಯ. ಈ ಕ್ರಮದಿಂದ ಪ್ರತಿಯೊಬ್ಬರೂ ಅವರವರ ಅಧಿಕಾರಕ್ಕೆ ತಕ್ಕಂತೆ ಸನ್ಮಾನಿಸಲ್ಪಟ್ಟು ಪ್ರೇಮ ವಿಶ್ವಾಸಗಳನ್ನಿಡುವರು.

‡ಸಾರವನ್ನು ಗಾನಮಾಡುವವರು ಸಾರಂಗರು.

ತ್ತಿರುವ ಶ್ರೀಕೃಷ್ಣಪರಮಾತ್ಮನು ಜಲಪೂರ್ಣವಾದ ನೀಲ ಮೇಘದ ಮೇಲೆ ಸೂರ್ಯಬಿಂಬವಿದ್ದು ಎಡ ಬಲಗಳಲ್ಲಿ ಎರಡು ಚಂದ್ರಬಿಂಬಗಳಿದ್ದು, ಸುತ್ತಲೂ ನಕ್ಷತ್ರಮಂಡಲವಿದ್ದು, ಮಧ್ಯದಲ್ಲಿ ಕಾಮನಬಿಲ್ಲೂ ಇರುತ್ತಾ ಅದರೊಳಗಿನಿಂದ ತಟಿತ್ಪ್ರಕಾಶ ತೋರುತ್ತಿದ್ದಂತೆ ಶೋಭಿಸುತ್ತಿದ್ದನು.

ಎಲ್ಲಕ್ಕೆ ಮುಂಚೆ ಮಾತಾಪಿತೃಗಳ ಅರಮನೆಯನ್ನು ಹೊಕ್ಕು ದೇವಕೀ ಮುಂತಾದ ಏಳು ಜನ ಮಾತೆಯರನ್ನು ನಮಸ್ಕರಿಸಿದನು. ಅವರು ಆತನಿಗೆ ಹೃದಯಾಲಿಂಗನ ಕೊಟ್ಟು ಆಶೀರ್ವದಿಸಿದರು. ತಾಯಿಯರು ಅತ್ಯಂತ ಪ್ರೇಮಪರವಶರಾದುದರಿಂದ ಅವರ ಸ್ತನಗಳಿಂದ ಅಮೃತವು ಹರಿಯಲಾರಂಭಿಸಿತು. ಅವರು ಸ್ನೇಹಪರವಶರಾಗಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆನಂದ ಬಾಷ್ಪಗಳಿಂದ ಆತನಿಗೆ ಅಭಿಷೇಕ ಮಾಡಿದರು. ನಂತರ ಆ ಹದಿನಾರು ಸಾವಿರದ ಒಂದುನೂರ ಎಂಟು ಜನ ರಾಣಿಯರುಳ್ಳ ಅಂತಃಪುರವನ್ನು ಹೊಕ್ಕನು. ಅವರು ಪರದೇಶದಿಂದ ಹಿಂದಿರುಗಿಬಂದ ಪತಿಯನ್ನು ನೋಡುತ್ತಲೇ ಆಸನ ಮತ್ತು ವ್ರತವನ್ನು ತ್ಯಾಗಮಾಡಿ ಮುಂಚೆ ಮನಸ್ಸಿನಿಂದಲೂ ನಂತರ ಇಂದ್ರಿಯಗಳಿಂದಲೂ ಆಮೇಲೆ ಪುತ್ರರಿಂದಲೂ ಕೊನೆಗೆ ಶರೀರಗಳಿಂದಲೂ ಆತನೊಡನೆ ಬೆರೆತರು. ಲಜ್ಜಾವಶರಾಗಿ ಆನಂದಾಶ್ರುಗಳನ್ನು ಆಗಾಗ್ಗೆ ಒರಸಿಕೊಳ್ಳುತ್ತಿದ್ದರೂ ಅವುಗಳು ತಮ್ಮಷ್ಟಕ್ಕೆ ತಾವೇ ಹೊರಬೀಳುತ್ತಿದ್ದುವು. ರಾಣಿಯರಿಗೆ ನಿತ್ಯವೂ ಶ್ರೀ ಕೃಷ್ಣಪರಮಾತ್ಮನ ದರ್ಶನ ಸೇವೆಗಳು ಲಭಿಸುತ್ತಿರುವ ಸೌಭಾಗ್ಯವಿದ್ದರೂ ಈದಿನ ವಿಶೇಷೋತ್ಸಾಹವು ತಲೆದೋರುತ್ತಿತ್ತು. ದೇವನು ತಾನು ಸ್ವತಃ ಶಸ್ತ್ರವನ್ನು ಹಿಡಿಯದೇ ಇದ್ದರೂ ಭೂಭಾರರೂಪರಾದ ದುಷ್ಟರಾಜರುಗಳನ್ನು ಅವರ ಅನೇಕ ಅಕ್ಷೋಹಿಣೀಸೈನ್ಯಸಮೇತ ಪರಸ್ಪರ ವೈರವನ್ನು ಕಾರಣಮಾಡಿಸಿ ವಾಯುವು ಬಿದುರುಮೆಳೆಗಳಲ್ಲಿ ಪ್ರವೇಶಿಸಿ ಅವುಗಳ ತಿಕ್ಕಾಟದಿಂದ ಹುಟ್ಟಿದ ದಾವಾಗ್ನಿಯಿಂದ ವನವನ್ನೆಲ್ಲಾ ಸುಟ್ಟು ಬೂದಿಮಾಡುವಂತೆ ದುಷ್ಟಕ್ಷತ್ರಿಯ ವಂಶವನ್ನೆಲ್ಲಾ ನಿರ್ಮೂಲ ಮಾಡಿದನು. ಆದರೊಡನೆಯೇ ಲೀಲಾಮಾನುಷರೂಪದಿಂದಲೇ

ಹದಿನಾರುಸಾವಿರದಒಂದುನೂರೆಂಟುಜನ ಪಟ್ಟದರಾಣಿಯರ ಮಧ್ಯ ದಲ್ಲಿ ಸಾಮಾನ್ಯ ಪ್ರಾಕೃತಿಕಮನುಷ್ಯನಂತೆಯೇ ನಟನೆಮಾಡಿದರೂ ಸ್ತ್ರೀಯರ ಗಂಭೀರಹಾವಭಾವವಿಲಾಸಗಳೊಡನೆ ಜಗತ್ತನ್ನೇ ಸ್ವಾಧೀನ ಮಾಡಿಕೊಂಡ ಕಾಮದೇವನು ಈತನನ್ನು ಜಯಿಸಲಾರದೆ ತನ್ನ ಪ್ರ ವಿಜಯೀ ಧನುಸ್ಸನ್ನು ತ್ಯಾಗಮಾಡಿದನಂತರ ಆ ರಮಣೀರತ್ನಗಳು ತಮ್ಮ ಲಲಿತಲೀಲೆಗಳಿಂದ ಈತನನ್ನು ವಶಪಡಿಸಿಕೊಳ್ಳಲಾರದೆ ಸೋತು ಹೋದರೂ ಆ ವಿಶ್ವವಿಮೋಹಕರೂಪ—ಮುಕ್ತಪುರುಷ ಶ್ರೀಕೃಷ್ಣ ಪರಮಾತ್ಮನನ್ನು ಅಜ್ಞಾನಿಗಳು ಸಾಮಾನ್ಯನಂತೆ ಕಾಮಿಯೆಂತ ತಿಳಿದು ಭ್ರಾಂತಿಪಡುವರು. ಮಾಯೆ ಯೊಳಗಿದ್ದು ಮಾಯೆಯ ಗುಣಗಳಿಂದ ಲಿಪ್ತನಾಗದೇ ಇರುವುದೇ ಈಶ್ವರನ ಈಶ್ವರತ್ವವು. ನಮ್ಮ ಬುದ್ಧಿಯು ಈಶ್ವರನ ಆಶ್ರಯದಲ್ಲಿದ್ದು ಆತನನ್ನು ತಿಳಿಯಲಾರದು

**ತಂ ಮೇನಿರೇಽಬಲಾ ಮೂಢಾಃ ಸ್ತ್ರೈಣಂ ಚಾನುವ್ರತಂ ರಹಃ ।**
**ಅಪ್ರಮಾಣವಿದೋ ಭರ್ತುರೀಶ್ವರಂ ಮತಯೋ ಯಥಾ ॥**

( ೧–೧೧–೩೯ )

ಆ ರಾಣಿಯರು ಸಹಾ ತಮ್ಮ ತಮ್ಮ ಪತಿದೇವನು ತಾವು ಹೇಳಿದಂತೆಕೇಳು ವನೆಂದೇ ತಿಳಿದಿದ್ದರು. ಆತನು ತಮ್ಮೊಳಗಿದ್ದು ತಮ್ಮಿಂದ ನಿರ್ಲಿಪ್ತ ನೆಂಬುದನ್ನು ತಿಳಿಯಲಾರದೇ ಹೋದರು. ಹಾಗೆಯೇ ಈಶ್ವರನು ತಾನುಮಾತ್ರ ಯಾವ ಮತದ ಕಟ್ಟಿನೊಳಗೂ ಸಿಕ್ಕಿಲ್ಲದೇ ಇದ್ದರೂ ಎಲ್ಲಾ ಮತಗಳೂ ಆ ಸ್ತ್ರೀಯರಂತೆ ಆತನ ನಹನತತ್ವವನ್ನು ಅರಿಯದೆ ತಮ್ಮತಮ್ಮ ಮತಗಳಲ್ಲಿಯೇ ಇರುವನೆಂದು ಭ್ರಾಂತಿಪಡುತ್ತಾರೆ.

ಶ್ರೀಕೃಷ್ಣಪರಮಾತ್ಮನಲ್ಲಿದ್ದ ಪುರುಷೋತ್ತಮತ್ವದ ವೈಶಿಷ್ಟ್ಯವನ್ನು ಗುರುತು ಮಾಡಬಹುದು. ಆತನ ಹದಿನಾರು ಸಾವಿರದ ಒಂದುನೂರ ಎಂಟು ಜನ ರಾಣಿಯರೂ ತಮ್ಮ ತಮ್ಮ ಅರಮನೆಯಲ್ಲಿ ಸ್ಮರಿಸಿದಾಕ್ಷಣ ತಮ್ಮ ನಾಥನನ್ನು ದರ್ಶನಮಾಡುವ ಪುಣ್ಯವನ್ನು ಪಡೆದಿದ್ದರು. ಗೋಪಿಕಾ ಸ್ತ್ರೀಯರೂ ಹಾಗೆಯೇ. ಅವರವರ ಮನಸ್ಸಿನಲ್ಲಿದ್ದಪ್ರೇಮ ವಿಲಾಸಾದಿ ಇಚ್ಛೆಯು ಅವರು ಕಣ್ಣುಮುಚ್ಚಿದೊಡನೆಯೇ ತೃಪ್ತಿಯಾಗುತ್ತಿತ್ತು.

**ಪ್ರತಿಯೊಬ್ಬ ಸ್ತ್ರೀಯೂ ಪತಿಯು ತನ್ನವನೆಂದೇ ತನ್ನೊಡ ನೆಯೇ ಸದಾ ಇರುವನೆಂದೇ ತಿಳಿಯುತ್ತಿದ್ದಳು.** ಹೀಗೆ ಅಸಂಖ್ಯ ಸ್ತ್ರೀಯರೊಡನಿದ್ದು ಅವರನ್ನು ತೃಪ್ತಿಪಡಿಸುತ್ತಿದ್ದವನಾರು? ರಾಜ ಕಾರಣ ಪಟುವಾಗಿ ತಿರುಗುತ್ತಿದ್ದವನಾರು? ಕೌರವ ಪಾಂಡವರ ಕಲಹವ್ಯಾಜದಿಂದ ಹದಿನೆಂಟು ಅಕ್ಷೋಹಿಣೀ ಸೈನ್ಯವನ್ನು ನಾಶಮಾಡಿ ದವನಾರು? ಪಾರ್ಥಸಾರಥಿಯಾಗಿ ಯುದ್ಧರಂಗದ ಮಧ್ಯೆ ಜ್ಞಾನೋಪದೇಶಮಾಡಿದವನಾರು? ವಿಚಾರಮಾಡಿದರೆ, ಇದೆಲ್ಲವೂ ಆತನ ವಿಶ್ವಮೋಹಿನೀ ಮಾಯಾಶಕ್ತಿಮಾತ್ರ. ಸ್ತ್ರೀಯಾಗಿ ಪುರುಷ ನಾಗಿ ಪಶು ಪಕ್ಷಿ ಗಿಡ ಮರ ಬಳ್ಳಿಗಳರೂಪವಾಗಿ ವಿವಿಧ ನಾಮರೂಪ ಗಳ ಜಗನ್ನಾಟಕ ರಂಗಕ್ಕೆ ಅಧಿಷ್ಠಾತ್ರಿಯಾದ ಆತನ ಪ್ರಕೃತಿ ರಾಧೆಯ ಲೀಲಾವಿಲಾಸ. ಪುರುಷನ ಸಾನ್ನಿಧ್ಯದಿಂದ ಪ್ರಕೃತಿಯು ಜಗನ್ನಾಟಕವನ್ನು ಹೂಡಿರುವಳು. ಪಂಚಭೂತಗಳನ್ನೂ ತ್ರಿಗುಣ ಗಳನ್ನೂ ವಿವಿಧ ಪ್ರಮಾಣದಲ್ಲಿ ಬೆರೆಸಿ ಬೇರೆ ಬೇರೆ ನಾಮರೂಪಗಳ ಸೃಷ್ಟಿಜಾಲವನ್ನು ಹೆಣೆದಿರುವಳು. ಜನ್ಮವಶರಾದ ಜೀವರುಗಳನ್ನು ಅವರವರ ಕರ್ಮಾನುಗುಣವಾಗಿ ಆಯಾ ದೇಹಗಳಲ್ಲಿ ತುಂಬುವಳು. ಆ ಕರ್ಮಾನುಭವವು ಮುಗಿದೊಡನೆಯೇ ಆ ದೇಹಗಳಿಂದ ಹೊರದೂಡು ವಳು. ಈ ಸೃಷ್ಟಿಯಲ್ಲಿನ ಪ್ರತಿಯೊಂದೂ ಈ ಪ್ರಕೃತಿ ಪುರುಷರ ಸಂಬಂಧವಿಲ್ಲದೆ ಹುಟ್ಟಲೇ ಆರದು. ಆದುದರಿಂದ ಪುರುಷನೇ ಜಗತ್ಪಿತನು. ಪ್ರಕೃತಿಯೇ ಜಗನ್ಮಾತೆಯು. ಪಕೃತಿಯು ಪುರುಷನನ್ನು ಆಕರ್ಷಿಸುವ ಕ್ರಮವೇ ಕಾಮುಕಲಾವಿಲಾಸ. ಇದರಿಂದಲೇ ಸೃಷ್ಟಿ ಯಾಗಬೇಕಾದರೆ. ಜಗತ್ತಿನ ಜೀವರಾಶಿಗಳೆಲ್ಲಾ ಇದಕ್ಕೆ ವಶರಾಗಿಯೇ ವರ್ತಿಸುತ್ತಿರುವರು. ಒಂದಾವೃತ್ತಿ ಈ ಚಕ್ರದೊಳಕ್ಕೆ ಸಿಕ್ಕಿದನಂತರ ತಪ್ಪಿಸಿಕೊಳ್ಳಲಾಗದ ಸಮ್ಮೋಹನಾಸ್ತ್ರದ ಪರದೆಯು ಬಿದ್ದುಬಿಡುವುದು. ಈ ಪರದೆಯನ್ನು ಹರಿದುಹಾಕಿ ಈ ಮಾಯಾವಿಲಾಸದಿಂದ ಹೊರಗೆ ಬರಬೇಕಾದರೆ ಮಾಯಿಯಾದ ಮಹೇಶ್ವರನನ್ನು ಅನನ್ಯಭಾವದಿಂದ ಶರಣುಹೋಗುವುದೊಂದೇ ಸುಲಭವಾದ ಮಾರ್ಗ.

ಶ್ರೀಕೃಷ್ಣಾವತಾರವು ಪರಮಾತ್ಮನ ಸಂಪೂರ್ಣಕಲಾವತಾರ. ಆಶ್ಚರ್ಯಭರಿತ ಲೀಲೆಗಳು ಪ್ರೇಮಭಯಾಶ್ಚರ್ಯಗಳನ್ನು ಹುಟ್ಟಿಸುತ್ತವೆ. ಭಕ್ತಿ ಪ್ರೇಮಗಳಿಂದ ತುಂಬಿ ತುಳುಕುತ್ತಿರುವ ಸ್ತ್ರೀಯರಿಗೆ ಅವರವರ ಇಚ್ಛೆಯನ್ನು ಪೂರ್ಣಮಾಡುತ್ತಿರುವ ತನ್ನ ಛಾಯಾಶಕ್ತಿಯನ್ನು ಒದಗಿಸಿಕೊಟ್ಟು ತಾನು ಮಾತ್ರ ಸರ್ವಸ್ವತಂತ್ರನಾಗಿ ಪ್ರೇರಿಯುತ್ತಾ ನಿರ್ಲಿಪ್ತನಾಗಿರುವ ಪ್ರಕೃತಿ–ಪುರುಷರನ್ನು ಮೀರಿದ **ಪುರುಷೋತ್ತಮನಾಗಿ ನಿಂತು ನಲಿಯುತ್ತಿರುವವನೇ ಇಲ್ಲಿನ** ಅವತಾರಪೂರ್ತಿ.

ಜಗತ್ತಿನ ವಿವಿಧ ಮತಗಳನ್ನು ಈ ಸ್ತ್ರೀಯರಿಗೆ ಇಲ್ಲಿ ಹೋಲಿಸುತ್ತಿದ್ದಾರೆ. ಪ್ರತಿಯೊಂದು ಮತವೂ 'ಪರಮಾತ್ಮಾನುಭವವನ್ನು ಪಡೆಯುವೆಲ್ಲ ಶಕ್ತಿಯು ತನಗೇ ಇರುವುದೆಂದು ಭಾವಿಸುತ್ತಿದೆ. ಆದರೆ ಈ ಎಲ್ಲಾ ಪರಸ್ಪರ ವಿರುದ್ಧವಾಗಿ ತೋರುತ್ತಿರುವ ಅನೇಕ ಮತಗಳಿಗೆ ಆಧಾರವಾಗಿ ಎಲ್ಲದರಲ್ಲೂ ವ್ಯಾಪಿಸಿ ಇವೆಲ್ಲವನ್ನೂ ಮೀರಿಸುವ ಸರ್ವಸ್ವತಂತ್ರ ಮತವೊಂದಿದೆ. ಅದೇ ಗೀತೆಯ ಭಾಗವತದ ಮತ. ಎಲ್ಲ ಮತಗಳಲ್ಲಿಯೂ ಇದಕ್ಕೆ ಸಾಮರಸ್ಯವಿದೆ. ಆದರೆ ಅವುಗಳಲ್ಲಿ ಇರುವ ಪರಸ್ಪರ ವಿರೋಧಭಾವವಿಲ್ಲ. ತೋರಿಕೆಯ ಭೇದವನ್ನು ವಿಚಾರ ದೃಷ್ಟಿಯಿಂದ ಅಳಿದು ಎಲ್ಲದರಲ್ಲಿಯೂ ಇರುವ ಏಕರೂಪವಾದ ಪರಮಾತ್ಮಶಕ್ತಿಯನ್ನು ಗುರ್ತಿಸುವ ಸಂಬಂಧಮಾತ್ರವಿದೆ.

**ಶೌನಕ:**—ಸೂತಪುರಾಣಿಕರೆ, ಈ ಅಲೌಕಿಕ ಚರಿತ್ರೆಯನ್ನು ಕೇಳುತ್ತಿದ್ದಂತೆಯೇ ನಮ್ಮ ಉತ್ಸಾಹವು ಇಮ್ಮಡಿಸುತ್ತಿದೆ. ಪರಮಾತ್ಮನ ಮಹಾಮಹಿಮ ವರ್ಣನೆಯಿಂದ ನಮ್ಮ ಅಂತಃಕರಣಗಳು ಮಹದಾನಂದವನ್ನು ಅನುಭವಿಸುತ್ತಿವೆ. ದಯವಿಟ್ಟು ಮುಂದಿನ ಚರಿತ್ರೆಯನ್ನು ತಿಳಿಸಬೇಕು. ಅಶ್ವತ್ಥಾಮನಿಂದ ಬಿಡಲ್ಪಟ್ಟ ಬ್ರಹ್ಮಾಸ್ತ್ರದಿಂದ ಬಾಧಿಸಲ್ಪಟ್ಟ ಆ ಶಿಶುವಿನ ಜನ್ಮ ಕರ್ಮಗಳನ್ನು ತಿಳಿಸಿರಿ. ಪುಣ್ಯಾತ್ಮನಾದ ಆ ಕುರುಕುಲಚಂದ್ರನು ಯಾವ ರೀತಿ ಕೀರ್ತಿಶಾಲಿಯಾಗಿ ಬದುಕಿದನು? ಹೇಗೆ ದೇಹತ್ಯಾಗಮಾಡಿದನು? ಈ ಭಾಗವತ ಕಥಾಶ್ರವಣವನ್ನು ಶುಕಮಹರ್ಷಿಗಳು ಮಾಡಿಸಲು ಕಾರಣವೇನು?

ಎಂಬ ಮುಂತಾದ ಚರಿತ್ರೆಯನ್ನು ವಿಸ್ತಾರವಾಗಿ ಅನುಗ್ರಹಿಸುವ ಕೃಪೆ ಮಾಡಿರಿ.

**ಸೂತ:—** ಆಗಬಹುದು. ವಿಸ್ತಾರವಾಗಿ ತಿಳಿಸುತ್ತೇನೆ. ಬ್ರಹ್ಮಾಸ್ತ್ರದಿಂದ ಸಂತಪ್ತದಾತ್ತಿಷ್ಟ ಉತ್ತರೆಯ ಗರ್ಭದೊಳಗಿದ್ದ ಹತ್ತುತಿಂಗಳ ಶಿಸುವಿಗೆ ಒಬ್ಬ ಮಹಾಪುರುಷನ ದರ್ಶನವಾಯಿತು. ತನೆ ಆದೇಹವು ಅಂಗುಷ್ಠ ಮಾತ್ರ. ತಲೆಯ ಮೇಲೆ ಸುವರ್ಣ ಕಿರೀಟವು ಶೋಭಿಸುತ್ತಿದೆ ಶ್ಯಾಮವರ್ಣವಾದ, ಚತುರ್ಭುಜಯುಕ್ತ, ಪೀತಾಂಬರಧಾರಿಯಾದ ಆ ಮೂರ್ತಿಯ ಸುಂದರ ವದನಾರವಿಂದವು ಚಿತ್ತಾಕರ್ಷಕವಾಗಿದೆ. ನಾಲ್ಕು ಭುಜಗಳಲ್ಲಿಯೂ ಶಂಖ ಚಕ್ರ ಗದಾಪದ್ಮಗಳು ಶೋಭಿಸುತ್ತಿವೆ ಕರ್ಣಗಳಲ್ಲಿ ಕುಂಡಲಗಳೂ ಥಳಥಳಿಸುತ್ತಿವೆ ವಕ್ಷಃಸ್ಥಳದಲ್ಲಿ ವನಮಾಲೆಯು ವಿರಾಜಮಾನವಾಗಿದೆ. ಆ ಮೂರ್ತಿಯು ತನ್ನ ಗದೆಯನ್ನು ನಾಲ್ಕು ಕಡೆಗೂ ತಿರುಗಿಸುತ್ತಾ ಶಿಶುವಿನ ಎದುರಾಗಿ ಬರುತ್ತಿರುವ ಬ್ರಹ್ಮಾಸ್ತ್ರದ ಉರಿಯಿಂದ ಮಗುವಿಗೆ ಬಾಧೆಯನಾಗದಂತೆ ತನ್ನ ಗದೆಯಿಂದದನ್ನು ನಿವಾರಿಸುತ್ತಾ ಮಗುವಿನ ಸುತ್ತಲೂ ತಿರುಗುತ್ತಾ ಸ್ವಲ್ಪ ಹೊತ್ತಾದ ನಂತರ ಅದು ಅಂತರ್ಧಾನವಾಯಿತು. ರಾಜಯೋಗ್ಯವಾದ ಲಕ್ಷಣಗಳಿಂದೊಡಗೂಡಿದ ಶುಭ ಮುಹೂರ್ತದಲ್ಲಿ ಪಾಂಡು ಚಕ್ರವರ್ತಿಯೇ ಪುನಃ ಜನ್ಮತಾಳಿದಂತೆ ಆ ಕುರುಕುಲತಿಲಕನ ಜನನವಾಯಿತು. ಧರ್ಮರಾಜನು ಜಾತಕರ್ಮಾದಿ ಸಂಸ್ಕಾರಗಳನ್ನು ನಡೆಸಿದ ನಂತರ ಜ್ಯೋತಿಷ್ಕರಿಂದ ಜಾತಕ ಲಕ್ಷಣವನ್ನು ತಿಳಿಯಲಪೇಕ್ಷಿಸಿದನು. ಆ ಜ್ಯೋತಿಷ್ಕರು ಹೇಳಿದರು—

"ಈ ಬಾಲಕನು ಸಾಮಾನ್ಯನಲ್ಲ. ಮಹಾ ತೇಜಸ್ವಿಯಾಗಿದ್ದಾನೆ. ಬ್ರಹ್ಮಾಸ್ತ್ರದಿಂದ ನಾಶವಾಗಿದ್ದ ನಿಮ್ಮ ವಂಶದ ಈ ಬಾಲಕನನ್ನು ಶ್ರೀ ವಿಷ್ಣುವು ಮಾತೃಗರ್ಭದಲ್ಲಿಯೇ ರಕ್ಷಣೆಮಾಡಿದುದರಿಂದ ಈತನಿಗೆ ವಿಷ್ಣುರಾತ ಎಂಬ ಹೆಸರು ಬಂದಿದೆ. ಈತನು ತನ್ನ ವಂಶದ ರಾಜರ್ಷಿಗಳಂತೆ ಯಶಸ್ವಿಯಾಗುವನು. ಮನು ಪುತ್ರನಾದ ಇಕ್ಷ್ವಾಕುವಿನಂತೆ ನೀತಿಯಿಂದ ಪ್ರಜಾಪಾಲನೆಮಾಡುವನು. ದಶರಥ ಪುತ್ರನಾದ

ಶ್ರೀ ರಾಮಚಂದ್ರನಂತೆ ಬ್ರಾಹ್ಮಣ ಭಕ್ತನಾಗಿ ಸತ್ಯವಾದಿಯಾಗು ವನು. ದಾನಕೊಡುವುದರಲ್ಲಿ ಶರಣಾಗತ ರಕ್ಷಣೆಮಾಡುವುದರಲ್ಲಿ ಉಶೀನರ ಪುತ್ರನಾದ ಶಿಬಿಗೆ ಸಮಾನನಾಗುವನು. ದುಷ್ಯಂತ ಪುತ್ರ ನಾದ ಭರತ ಚಕ್ರವರ್ತಿಯಂತೆ ಪ್ರಸಿದ್ಧನಾಗುವನು ಧನುರ್ಧಾರಿ ಗಳಲ್ಲಿ ಅಗ್ರಗಣ್ಯನಾಗುವನು. ಅಸ್ತ್ರವಿದ್ಯೆಯಲ್ಲಿ ಕಾರ್ತವೀರ್ಯಾರ್ಜುನ ನಿಗೆ ಸಮಾನನಾಗುವನು ಅಗ್ನಿಯಂತೆ ಪ್ರಚಂಡನಾಗುವನು. ಸಿಂಹ ದಂತೆ ಪರಾಕ್ರಮಿಯಾಗಿ ಹಿಮವಂತನಂತೆ ಶೀತಲನಾಗಿ, ಪೃಥ್ವಿಯಂತೆ ಕ್ಷಮಾಶೀಲನಾಗಿ, ಬ್ರಹ್ಮನಂತೆ ಸಮದರ್ಶಿಯಾಗಿ, ಶಿವನಂತೆ ಪ್ರಸನ್ನನಾಗಿ, ವಿಷ್ಣುವಿನಂತೆ ದೇವತೆಗಳಿಗೆ ಆಶ್ರಯನಾಗಿ, ಬಲಿಯಂತೆ ಧೈರ್ಯಶಾಲಿಯಾಗಿ, ಪ್ರಹ್ಲಾದನಂತೆ ವಿಷ್ಣುಭಕ್ತನಾಗಿ, ಅಶ್ವಮೇಧಾದಿ ಯಜ್ಞಗಳನ್ನುಮಾಡಿ, ವೃದ್ಧರನ್ನು ಸೇವಿಸುತ್ತಾ, ಕುಮಾರ್ಗಿಗಳ ಶಾಸಕನಾಗಿ ಧರ್ಮದೇವತೆಯನ್ನೂ, ಭೂಮಾತೆಯನ್ನೂ ರಕ್ಷಿಸುವುದ ಕ್ಕಾಗಿ ಕಲಿಪುರುಷನನ್ನು ದಮನಮಾಡಿ, ಕೊನೆಗೆ ಶುಕಮಹರ್ಷಿಗಳ ಅನುಗ್ರಹದಿಂದ ತನ್ನ ಸ್ವಸ್ವರೂಪಾನುಸಂಧಾನಮಾಡುತ್ತಾ ವಿಪ್ರ ಶಾಪದ ನೆವದಿಂದ ಗಂಗಾ ತಟದಲ್ಲಿ ಈ ಪ್ರಾಕೃತ ದೇಹವನ್ನು ತ್ಯಾಗ ಮಾಡುವನು. ಈ ಬಾಲಕನು ತನ್ನೆದುರಿಗೆ ಗರ್ಭದಲ್ಲಿ ಕಂಡ ಪುರುಷನು ಈತನಿರಬಹುದೇ? ಎಂದು ಎದುರಿಗೆ ಬಂದವರನ್ನೆಲ್ಲಾ ಪರೀಕ್ಷೆ ಮಾಡುತ್ತಿರುವುದರಿಂದ ಈತನಿಗೆ ಪರೀಕ್ಷಿತ್ ಎಂದೇ ಹೆಸರಿಟ್ಟಿದ್ದೇವೆ."

ಜ್ಞಾತಿದ್ರೋಹದಿಂದುಂಟಾದ ಪಾಪನಿವೃತ್ತಿಗಾಗಿ ಧರ್ಮರಾಜನು ಅಶ್ವಮೇಧ ಯಾಗ ಮಾಡಲಿಚ್ಛಿಸಿದನು. ಹಿಮಾಲಯಪ್ರಾಂತ್ಯದಲ್ಲಿ ಮರುತ್ತ ರಾಯನ ಯಜ್ಞದಲ್ಲಿ ಬ್ರಾಹ್ಮಣರು ಬಿಸುಟು ಬಿದ್ದಿದ್ದ ಅಪಾರ ಧನವನ್ನು ಅರ್ಜುನಾದಿಗಳು ತಂದೊದಗಿಸಿದರು. ಆ ಯಜ್ಞಕ್ಕಾಗಿ ಇತರ ಬಂಧು ಗಳೊಡನೆ ದಯಮಾಡಿಸಿದ್ದ ಶ್ರೀ ಕೃಷ್ಣಪರಮಾತ್ಮನು ಅರ್ಜುನನನ್ನೂ ಜೊತೆಯಲ್ಲಿ ಕರೆದುಕೊಂಡು ಉದ್ಧವನೊಡನೆ ದ್ವಾರಕೆಗೆ ಹಿಂತಿರುಗಿದನು.



# ಚತುರ್ಥ ಕಿರಣ

ಸೂತರು ಪುನಃ ಹೇಳತೊಡಗಿದರು—

"ಶೌನಕರೆ, ಈ ಹಿಂದೆ ವಿದುರನು ದುರ್ಯೋಧನನ ಕಠೋರ ವಚನಗಳಿಂದ ವಿರಕ್ತನಾಗಿ ತೀರ್ಥಯಾತ್ರೆಗೆ ಹೋಗಿದ್ದನಷ್ಟೆ. ಆತನ ಮುಂದಿನ ಕಥೆಯನ್ನು ಸ್ವಲ್ಪ ಹೇಳುತ್ತೇನೆ. ಕೇಳಿರಿ! ಆತನು ತೀರ್ಥಯಾತ್ರೆಗಳನ್ನೆಲ್ಲಾ ತಿರುಗುತ್ತಾ ಕೊನೆಗೆ ಮೈತ್ರೇಯ ಋಷಿಗಳ ಆಶ್ರಮವನ್ನು ಹೊಕ್ಕನು. ತನ್ನ ಮನಸ್ಸಿನಲ್ಲಿದ್ದ ಸಂಶಯಗಳನ್ನೆಲ್ಲಾ ಒಂದೊಂದಾಗಿ ಬಿಚ್ಚಿ ಹೇಳಲಾರಂಭಿಸಿದನು. ಮೈತ್ರೇಯರು ಅವನ ಪ್ರಶ್ನೆಗಳನ್ನೆಲ್ಲಾ ಸಾವಧಾನವಾಗಿ ಕೇಳಿ ಕೊನೆಗೆ **ಗೋವಿಂದ ಭಕ್ತಿಯೊಂದೇ ಸಂಸಾರ ತಾಪ ನಾಶಕ ದಿವ್ಯೌಷಧ**ವೆಂದು ಉತ್ತರಕೊಟ್ಟರು. ಅವರ ಉಪದೇಶದಿಂದ ಆತನ ಅಂತಃಕರಣವು ಸಮಾಧಾನವನ್ನು ಹೊಂದಿತು. ಗೋವಿಂದನಲ್ಲಿ ದೃಢಭಕ್ತಿಯು ಉತ್ಪನ್ನವಾಯಿತು. ಮನಸ್ಸಿನ ಸಂಶಯಗಳೆಲ್ಲಾ ಒಂದೊಂದಾಗಿ ಅಳಿಯಲಾರಂಭಿಸಿದವು. ಎಲ್ಲಾ ಚಾಂಚಲ್ಯ ಸಂಶಯಗಳೂ ಗೋವಿಂದ ಭಕ್ತಿಯಿಂದ ನಾಶವಾಗಲು ಶಾಂತಮನಸ್ಕನಾಗಿ ಹಸ್ತಿನಾಪುರಕ್ಕೆ ಹಿಂದಿರುಗಿದನು. ಧರ್ಮರಾಜನು ಕುಂತೀ ಸಮೇತನಾಗಿ ತಮ್ಮಂದಿರು, ದ್ರೌಪದೀ ಸುಭದ್ರಾ ಮುಂತಾದವರುಗಳಿಂದೊಡಗೂಡಿ ಆತನನ್ನು ಎದುರ್ಗೊಂಡು ಸತ್ಕರಿಸಿ ಸ್ತೋತ್ರಮಾಡಲಾರಂಭಿಸಿದನು."

"ಮಹಾತ್ಮ! ನಿನಗೆ ನಾವು ಚಿರಋಣಿಗಳು. ನಿನ್ನ ಉಪಕಾರವನ್ನೆಂದಿಗೂ ತೀರಿಸಲಾರೆವು. ಪಕ್ಷಿಯು ಪುತ್ರ ಸ್ನೇಹದಿಂದ ತನ್ನ ರೆಕ್ಕೆಗಳನ್ನು ಅಗಲಿಸಿ ಅದರೊಳಗೆ ಅಡಗಿಸಿಕೊಂಡು ರಕ್ಷಿಸುವಂತೆ ನೀನು ದುರ್ಯೋಧನಾದಿಗಳಿಂದ ನಮಗೆ ಉಂಟಾದ ವಿಷಪ್ರಾಶನ, ಲಾಕ್ಷಾಗೃಹದಹನ, ಮುಂತಾದ ಸಮಸ್ತ ವಿಪತ್ತುಗಳಲ್ಲಿಯೂ ನಮ್ಮನ್ನು ರಕ್ಷಿಸಿರುವೆ. ನಾವು ವನವಾಸ ಮಾಡುವ ಕಾಲದಲ್ಲಿ ನಮ್ಮ ತಾಯಿಯನ್ನು ನಿನ್ನ ಮನೆಯಲ್ಲಿಟ್ಟುಕೊಂಡು ಕಾಪಾಡಿರುವೆ. ದೇವ! ನೀನು ಸಂಸಾರದಿಂದ ವಿರಕ್ತನಾಗಿ ಯಾವ

ವೃತ್ತಿಯನ್ನವಲಂಬಿಸಿ ಮುಖ್ಯ ಮುಖ್ಯ ತೀರ್ಥಕ್ಷೇತ್ರಗಳನ್ನು ಸಂಚಾರ ಮಾಡಿರುವೆ ? ತಿಳಿಸುವ ಕೃಪೆಮಾಡಬೇಕು. ಭಗವದ್ಭಕ್ತರಾದ ನೀವು ಸ್ವಯಂ ತೀರ್ಥಸ್ವರೂಪರಾಗಿರುವಿರಿ. ನೀವು ತೀರ್ಥಯಾತ್ರೆ ಮಾಡುವುದು ನಿಮಗಾಗಿ ಅಲ್ಲ ಪಾಪಿಗಳಿಂದ ಕಲುಷಿತಗಳಾದ ತೀರ್ಥಗಳನ್ನು ಪವಿತ್ರ ಮಾಡುವುದಕ್ಕೆ ಮಾತ್ರ! ಏಕೆಂದರೆ ನಿಮ್ಮ ಅಂತಃಕರಣದಲ್ಲಿ ಪಾಪನಾಶಕನಾದ ಹರಿಯು ವಾಸಮಾಡುತ್ತಾನೆ * ಹೇ ತಾತ! ತಾವು ತಮ್ಮ ತೀರ್ಥಯಾತ್ರೆಯಲ್ಲಿ ದ್ವಾರಕಾ ಪಟ್ಟಣಕ್ಕೆ ಹೋಗಿಯೇ ಇರಬಹುದು. ನಮ್ಮ ಪ್ರಿಯ ಬಾಂಧವರಾದ ಯಾದವರ ವೃತ್ತಾಂತವನ್ನು, ನೀವು ನೋಡಿದ ಅಥವಾ ಕೇಳಿದ ವೃತ್ತಾಂತವನ್ನು ದಯವಿಟ್ಟು ತಿಳಿಸುವ ಕೃಪೆಮಾಡಬೇಕು"

ವಿದುರನು ತನಗೆ ಗೊತ್ತಿದ್ದ ಯಾದವರ ವೃತ್ತಾಂತವನ್ನೆಲ್ಲಾ ವಿಸ್ತಾರವಾಗಿ ತಿಳಿಸಿದನು ಆದರೆ ಯಾದವ ಕುಲನಾಶದ ವೃತ್ತಾಂತವನ್ನು ಮಾತ್ರ ಹೇಳಲಿಲ್ಲ ಏಕೆಂದರೆ ಸಾಧುಗಳು, ಮಹಾತ್ಮರು ದಯಾಯುಕ್ತರಾದುದರಿಂದ ಇತರರಿಗೆ ದುಃಖವಾಗುವ, ಸಹಿಸಲಸಾಧ್ಯವಾದ ಮಾತುಗಳನ್ನಾಡರು ತಾನಾಗಿಯೇ ಸ್ವಲ್ಪ ದಿನಗಳಲ್ಲಿ ಎಲ್ಲರಿಗೂ ತಿಳಿಯಲ್ಪಡುವ ಅಪ್ರಿಯವಾದ ವರ್ತಮಾನವನ್ನು ಹೇಳಲಾರರು †

ಎಲ್ಲರೂ ದೇವತೆಯಂತೆ ವಿದುರನನ್ನು ಸತ್ಕರಿಸಿದರು. ವಿದುರನೂ ಸಹ ಎಲ್ಲರ ಇಚ್ಛೆಯಂತೆ ತನ್ನ ಅಣ್ಣ ಧೃತರಾಷ್ಟ್ರನ ಕ್ಷೇಮಕ್ಕಾಗಿ ಕೆಲವು ದಿನ ಹಸ್ತಿನಾವತಿಯಲ್ಲಿಯೇ ನಿಂತನು. ಮಾಂಡವ್ಯ ಋಷಿಯ ಶಾಪದಿಂದ ಒಂದು ನೂರು ವರ್ಷಗಳವರೆಗೂ ಶೂದ್ರನಾಗಿ ಹುಟ್ಟಿ ಬೆಳೆದ ಯಮ ಧರ್ಮನೇ ವಿದುರನಾದುದರಿಂದ ತನ್ನ ಮರಣಕಾಲವನ್ನೇ, ಶಾಪದ ಅಂತ್ಯಕಾಲವನ್ನೇ ನಿರೀಕ್ಷಿಸುತ್ತಿದ್ದನು. ಕಾಲ ಗತಿಯಿಂದ ಪಾಂಡವರ ಆಯುಷ್ಯವೂ ಕ್ಷೀಣವಾಗಲಾರಂಭಿಸಿತು. ಕಾಲಪುರುಷನು ಸಮೀಪಿಸುತ್ತಿರುವುದನ್ನು ಕಂಡು

---

* ಭವದ್ವಿಧಾ ಭಾಗವತಾಃ ತೀರ್ಥೀಭೂತಾಃ ಸ್ವಯಂವಿಭೋ ।
ತೀರ್ಥೀಂಕುರ್ವಂತಿ ತೀರ್ಥಾನಿ ಸ್ವಾಂತಸ್ಥೇನ ಗದಾಭೃತಾ ॥ ಭಾ (೧-೧೩-೯)

† ನನ್ವಪ್ರಿಯಂ ದುರ್ವಿಷಹಂ ನೃಣಾಂ ಸ್ವಯ ಮುಪಸ್ಥಿತಂ ।
ನಾವೇದಯತ್ಸಕರುಣೋ ದುಃಖಿತಾನ್ದ್ರಷ್ಟುಮಕ್ಷಮಃ ॥ ಭಾ (೧-೧೩-೧೨)

ವಿದುರನು ಧೃತರಾಷ್ಟ್ರನ ಸಮೀಪಕ್ಕೆ ಹೋಗಿ ಹೇಳಿದನು.

"ರಾಜ! ನೀನು ಜಾಗ್ರತೆ ಮನೆಯಿಂದ ಹೊರಡು. ಮಹಾಭಯರೂಪವಾದ ಕಾಲವು ಸಮೀಪಿಸುತ್ತಿದೆ. ಕಾಲವು ಬಂದೊಡನೆಯೇ ಅತ್ಯಂತ ಪ್ರಿಯವಾದ ಪ್ರಾಣವೂ ದೇಹವನ್ನು ಬಿಟ್ಟು ಹೋಗುವಾಗ ಧನ ಕನಕಾದಿ ಇತರ ವಸ್ತುಗಳ ಪಾಡೇನು ? ಮನೆ ರಾಜ್ಯ ಮುಂತಾದ ಸುಖಗಳನ್ನು ಬಿಡಲಾರೆನೆಂದು ಹೇಳುವೆಯಾ ? ಪಿತೃಸಮಾನರಾದ ಭೀಷ್ಮ, ನಿನ್ನ ಸೋದರನಾದ ಪಾಂಡು, ದುರ್ಯೋಧನಾದಿ ಮಕ್ಕಳ, ಮಿತ್ರ ಬಾಂಧವ ಮುಂತಾದವರುಗಳೆಲ್ಲಾ ಸತ್ತುಹೋದರು. ಯೌವನವು ಕಳೆದು ಹೋಯಿತು. ವೃದ್ಧಾಪ್ಯವು ಶರೀರವನ್ನು ಜರ್ಝರಿತವನ್ನಾಗಿ ಮಾಡಿದೆ. ಇಂಥ ಪರರ ಮನೆಯನ್ನೇ ನನ್ನದೆಂದುಕೊಂಡು ವಾಸಮಾಡುತ್ತಿರುವೆ. *ನಿನ್ನ ಕಣ್ಣುಗಳು ಹಿಂದಿನಂತೆಯೂ ಈಗ ಇಲ್ಲ. ಕಿವಿಗಳೂ ಹಿಂದಿನಂತೆ ಕೇಳಿಸುತ್ತಿಲ್ಲ. ಬುದ್ಧಿ ವಿವೇಕಗಳು ಮಂದವಾಗಿವೆ. ಹಲ್ಲುಗಳು ಬಿದ್ದುಹೋಗಿವೆ. ಜಠರಾಗ್ನಿಯು ಮಂದವಾಗಿ ಅಜೀರ್ಣವು ಹೆಚ್ಚುತ್ತಿದೆ. ಕ್ರೋಧವೂ, ಕಫವೂ ಹೆಚ್ಚಿವೆ. ಈಗಲೂ, ಇಷ್ಟಾದರೂ ನೀನು ಸಂಸಾರವನ್ನು ತ್ಯಾಗಮಾಡಲಾರೆಯಾ ? ಆಹಾ! ಮನುಷ್ಯನಿಗೆ ಬದುಕುವ ಆಸೆಯು ಬಹು ಪ್ರಬಲವಾದುದು. ಆದುದರಿಂದಲೇ ಭೀಮಸೇನನು ಕೊಡುವ ಅನ್ನವನ್ನು ನಾಯಿಯಂತೆ ತಿನ್ನುತ್ತಿರುವೆ. ಇವರು ನಿನ್ನ ಸೋದರನ ಪುತ್ರರೆಂದು ಹೇಳುವೆಯೇನೋ ? ಯಾರನ್ನು ಬೆಂಕಿಯಲ್ಲಿ ಸುಡಿಸಲೆತ್ನಿಸಿದೆಯೋ, ವಿಷ ಹಾಕಿಸಿ ಕೊಲ್ಲಿಸಲೆತ್ನಿಸಿದೆಯೋ, ಯಾರ ಪತ್ನಿಯನ್ನು ತುಂಬಿದ ಸಭೆಯಲ್ಲಿ ಅವಮಾನಮಾಡಿಸಿದೆಯೋ, ಮೋಸದಿಂದ ರಾಜ್ಯವನ್ನೂ ಕಿತ್ತುಕೊಂಡೆಯೋ, ಅಂತಹ ಪಾಂಡವರಿಂದಲೇ ಕೊಡಲ್ಪಡುವ ಅನ್ನವನ್ನು ತಿಂದು ಬದುಕುತ್ತಿರುವುದರಿಂದೇನು ಸುಖವಿದೆ ? ಇದೂ ಹೋಗಲಿ ಬಿಡು. ಧನಾದಿ ಸುಖಭೋಗವಸ್ತುಗಳನ್ನು ಬಿಡಲಾರೆನೆಂದು ಹೇಳುವುದಾದರೆ ಮರಣಕಾಲವು ಪ್ರಾಪ್ತವಾದಾಗ ಈ ಜರಾಜೀರ್ಣದೇಹವು ತಾನಾಗಿಯೇ ಹಳೆಯ ಹರುಕು ಬಟ್ಟೆಯಂತೆ ಬಿದ್ದುಹೋಗುವುದು. ಆದುದರಿಂದ ನೀನು

*ಅಂಧಃ ಪುರೈವ ಬಧಿರೋ ಮಂದಪ್ರಜ್ಞಶ್ಚ ಸಾಂಪ್ರತಂ ।
ವಿಶೀರ್ಣದಂತೋ ಮಂದಾಗ್ನಿಃ ಸರೋಗಃ ಕಫ ಮುದ್ವಹನ್ ॥ ಭಾ(೧-೧೩-೨೦)

ಮುಂಚೆ ಈ ಸಂಸಾರವನ್ನು ತ್ಯಾಗಮಾಡಿ ಪರಮಾತ್ಮ ಭಜನೆ ಮಾಡಲು ವನಕ್ಕೆ ಹೊರಡಬೇಕು. ಯಾವ ಪುರುಷನು ವಿರಕ್ತನಾಗಿ ಈ ಸಂಸಾರ ಬಂಧನವನ್ನು ಕತ್ತರಿಸಿ ಯಾರಿಗೂ ಹೇಳದೇ ಕೇಳದೇ ಪರಮಾತ್ಮ ಸುಖ ಕ್ಕಾಗಿ ಕಾಡಿಗೆ ಹೊರಡುವನೋ ಆತನೇ ಧೀರನು, ವಿವೇಕಿಯು, ಪುರುಷ ಶ್ರೇಷ್ಠನು. ಯಾವಾತನು ತನ್ನ ಹೃದಯದಲ್ಲಿಯೇ ಹುಟ್ಟಿದ ಜ್ಞಾನ ದಿಂದಾಗಲೀ ಇತರರ ಉಪದೇಶದಿಂದ ಹುಟ್ಟಿದ ಜ್ಞಾನದಿಂದಾಗಲೀ ವಿರಕ್ತ ನಾಗಿ ಹರಿಧ್ಯಾನಮಾಡುತ್ತಾ ಗೃಹತ್ಯಾಗಮಾಡಿ ವನಕ್ಕೆ ಹೊರಡುವನೋ, ಆತನೇ ಮನುಷ್ಯರಲ್ಲಿ ಶ್ರೇಷ್ಠನು ಆದುದರಿಂದ ನೀನು ನಾಳೆ ಪ್ರಾತಃಕಾಲವೇ ಮನೆಯನ್ನು ಬಿಟ್ಟು ಉತ್ತರ ದಿಕ್ಕಿಗೆ (ಹಿಮಾಲಯದ ಕಡೆಗೆ) ಹೊರಡು ನೀನು ಮಾಡಿದ ಕರ್ಮದ ಫಲವನ್ನು ಅನುಭವಿಸಿರುವೆ ತಿಳಿಯಬೇಕಾದುದ ನ್ನೆಲ್ಲಾ ತಿಳಿದಿರುವೆ. ನೀನು ಇಲ್ಲಿ ಎಷ್ಟು ಹೊತ್ತು ಇರುವೆಯೋ, ಇದ್ದು ಸಮಯವನ್ನು ವ್ಯರ್ಥಮಾಡುವೆಯೋ, ಅಷ್ಟಷ್ಟು ನಿನಗೆ ನಷ್ಟವೇ ಸರಿ. ನಿನ್ನ ಧೈರ್ಯವನ್ನೆಲ್ಲಾ ಕಾಲನು ನಷ್ಟಮಾಡಿಬಿಡುವನು."

ವಿದುರನ ಮಾತುಗಳನ್ನು ಕೇಳುತ್ತಿದ್ದಂತೆ, ಧೃತರಾಷ್ಟ್ರನಿಗೆ ಜ್ಞಾನೋದಯವಾಯಿತು. ತನ್ನ ಬಂಧು ಬಾಂಧವರ ಮೇಲಿನ ಸ್ನೇಹ ಮೋಹವನ್ನು ಬಿಟ್ಟು ವಿದುರನು ಉಪದೇಶಮಾಡಿದ ಮೋಕ್ಷ ಮಾರ್ಗವನ್ನು ಅನುಸರಿಸಿ ಉತ್ತರ ಯಾತ್ರೆಗೆ ಹೊರಟನು. ಯುದ್ಧ ಭೂಮಿಗೆ ಹೊರಡು ವಾಗ ಕ್ಷತ್ರಿಯರು ಉತ್ಸಾಹಿಗಳಾಗುವಂತೆ ಸಂನ್ಯಾಸಿಗಳೂ ಸಹ ಉತ್ತರ ಯಾತ್ರೆಮಾಡಿ ಪ್ರಾಣತ್ಯಾಗ ಮಾಡುವುದರಲ್ಲಿ ಉತ್ಸಾಹಿಗಳಾಗುವುದರಿಂದ, ಪತಿಯು ಹೊರಟುದನ್ನು ನೋಡಿ ಸುಬಲಾ ಪುತ್ರಿಯಾದ ಗಾಂಧಾರಿಯೂ ಸಂನ್ಯಾಸಗ್ರಹಣಮಾಡಿ ಆತನ ಹಿಂದೆಯೇ ಹೊರಟುಬಿಟ್ಟಳು.

ಧರ್ಮರಾಜನು ಮಾರನೇ ಬೆಳಗ್ಗೆ ಎದ್ದು ಸ್ನಾನ ಸಂಧ್ಯಾದಿ ಪ್ರಾತರ್ವಿಧಿ ಗಳನ್ನು ಮುಗಿಸಿಕೊಂಡು ನಿತ್ಯ ನಿಯಮದಂತೆ ದೊಡ್ಡಪ್ಪ ದೊಡ್ಡಮ್ಮ ಇವರ ದರ್ಶನಕ್ಕೆ ಬರಲು ಅಲ್ಲಿ ಅವರು ಕಾಣಲಿಲ್ಲ. ಅವರ ವಿರಹದಿಂದ ದುಃಖಪಡು ತ್ತಿದ್ದ ಸಂಜಯನನ್ನು ಕೇಳಲು ಅವನಿಗೂ ತಿಳಿಯದೆಂದು ಗೊತ್ತಾಗಲು ಬಹಳ

ವ್ಯಾಕುಲದಿಂದ ಅವರೇನಾದರೂ ತನ್ನ ಮೇಲೆ ಬೇಸರಗೊಂಡು ಆತ್ಮಹತ್ಯೆ ಮಾಡಿಕೊಂಡಿರಬಹುದೆಂದು ಯೋಚಿಸುತ್ತಿರುವಾಗ ತುಂಬುರರೊಡನೆ ನಾರದರು ಅಲ್ಲಿಗೆ ಬಂದರು. ಧರ್ಮರಾಜನು ಅವರನ್ನು ಸತ್ಕರಿಸಿ ತನ್ನ ದೊಡ್ಡಪ್ಪ ದೊಡ್ಡಮ್ಮಂದಿರು ಅಕಸ್ಮಾತ್ ರಾತ್ರಿಯೇ ಎಲ್ಲಿಗೋ ಹೋಗಿರುವ ರೆಂಬ ವಿಷಯವನ್ನು ನಿವೇದಿಸಲು ನಾರದರು ಮುಗುಳು ನಗೆಯಿಂದ ಈ ರೀತಿ ಹೇಳಿದರು—

ರಾಜ! ನೀನು ಯಾರಿಗೂ ದುಃಖಿಸಬೇಕಾಗಿಲ್ಲ ಈ ಜಗತ್ತೆಲ್ಲಾ ಈಶ್ವರಾಧೀನವಾಗಿದೆ. ಸಮಸ್ತ ಲೋಕಗಳೂ, ಲೋಕಪಾಲಕರೂ, ಆತನ ಆಜ್ಞೆಯನ್ನು ಅನುಸರಿಸುತ್ತಿದ್ದಾರೆ. ಕಾಲ ರೂಪಿಯಾದ ಆ ಭಗವಂತನು ಜಗತ್ತಿನ ಜೀವರಾಶಿಗಳನ್ನೆಲ್ಲಾ ಒಮ್ಮೆ ಸೇರಿಸುತ್ತಲೂ ಮತ್ತೊಮ್ಮೆ ಬಿಡಿಸುತ್ತಲೂ ಸಂಯೋಗ ವಿಯೋಗಗಳನ್ನು ಮಾಡುತ್ತಿರುವನು. ನೊಗಕ್ಕೆಕಟ್ಟಿದ ಎತ್ತುಗಳು ಹೇಗೆ ಯಜಮಾನನ ಆಜ್ಞೆಗೆ ಒಳಪಟ್ಟು ಪರತಂತ್ರವಾಗಿರುವವೋ ಹಾಗೆಯೇ ವೇದ ರೂಪವಾದ ಆಜ್ಞೆಗೆ ಒಳಪಟ್ಟು ವರ್ಣಾಶ್ರಮಾಧೀನಗಳಾದ ಜೀವರೆಲ್ಲಾ ಆತನ ವಶವಾಗಿರುವರು. ಆಟವಾಡುತ್ತಿರುವ ಬಾಲಕನ ಕೈಯಲ್ಲಿರುವ ಆಟದ ಚಂಡುಗಳು ಆತನ ಇಚ್ಛೆಯಂತೆ ಹೇಗೆ ಸಂಯೋಗ ವಿಯೋಗಗಳನ್ನು ಹೊಂದುತ್ತಿರುವುವೋ ಹಾಗೆಯೇ ಇವೆಲ್ಲವೂ ಈಶ್ವರನ ಲೀಲೆಯನ್ನನುಸರಿಸುವುವು. ಜೀವ ರೂಪದಿಂದಿರುವ ಈ ಜನಗಳನ್ನು ಅವಿನಾಶಿ, ನಾಶಕ್ಕೆಡೆಯಿಲ್ಲದವರೆಂದು ತಿಳಿಯುವುದಾದರೆ ಅಥವಾ ದೇಹರೂಪದಿಂದ ಇವರು ನಾಶಕ್ಕೆಡೆಯಾಗುವರೆಂದು ತಿಳಿಯುವುದಾದರೆ, ಅಥವಾ ಶುದ್ಧ ಬ್ರಹ್ಮ ರೂಪದಿಂದ ವಿನಾಶ ಅವಿನಾಶಗಳ ಎಲ್ಲೆಯೊಳಗಿರದವರೆಂದು ತಿಳಿಯುವುದಾದರೆ, ಯಾವ ದೃಷ್ಟಿಯಿಂದ ಯೋಚಿಸಿದರೂ ನಿನ್ನ ದೊಡ್ಡಪ್ಪ ದೊಡ್ಡಮ್ಮ ಇವರುಗಳ ವಿಷಯದಲ್ಲಿ ದುಃಖಪಡುವ ಅವಕಾಶವಿಲ್ಲವೇ ಇಲ್ಲ. ಕೇವಲ ಅಜ್ಞಾನದಿಂದುಂಟಾದ ಮೋಹ ಅಥವಾ ಸ್ನೇಹದಿಂದ ದುಃಖಿಸುತ್ತಿರುವೆ. ಈ ಮೋಹಕ್ಕೆ ವಿವೇಕವೇ ಮದ್ದಲ್ಲದೆ ಬೇರೆ ಔಷಧವೇ ಇಲ್ಲ. ಆದುದರಿಂದ ನನ್ನ ರಕ್ಷಣೆಯಿಲ್ಲದೇ ಇವರು ಅನಾಥರಾಗುತ್ತಾರೆ ಎಂಬ ನಿನ್ನ ಅಜ್ಞಾನಕೃತ ಮೋಹವನ್ನು ಬಿಡು. ಈ ಪಂಚ ತತ್ವಗಳ ಪರಸ್ಪರ ಭಿನ್ನಾಂಶಗಳಿಂದ

ಹುಟ್ಟಿರುವ ಈ ಪ್ರಪಂಚವು ಕಾಲ ಕರ್ಮ ಮತ್ತು ಮಾಯೆಯ ಗುಣಗಳಿಗೆ ಅಧೀನವಾಗಿದೆ. ಇಂತಹ ಶರೀರವು ತನ್ನಂತಹ ಮತ್ತೊಂದು ಶರೀರವನ್ನು ಹೇಗೆ ರಕ್ಷಿಸಬಲ್ಲುದು ? ಹಾವಿನಿಂದ ಕಚ್ಚಲ್ಪಟ್ಟು ಸಂಕಟಪಡುತ್ತಿರುವವನು ಮತ್ತೊಬ್ಬನನ್ನು ಹಾವಿನ ಕಷ್ಟದಿಂದ ಬಿಡಿಸಲು ಹೇಗೆ ಶಕ್ತನು ? ಕಾಲಿಲ್ಲದ ಪ್ರಾಣಿಗಳನ್ನು ನಾಲ್ಕುಕಾಲಿನವುಗಳೂ, ಅವುಗಳನ್ನು ಎರಡು ಕಾಲಿನವುಗಳೂ ಚಿಕ್ಕ ಪ್ರಾಣಿಗಳನ್ನು ದೊಡ್ಡ ಪ್ರಾಣಿಗಳೂ ತಿನ್ನುತ್ತಿರುವುವು. ಆದುದರಿಂದ ಒಂದು ಜೀವವೇ ಮತ್ತೊಂದು ಜೀವಕ್ಕೆ ಆಹಾರವಾಗಿದೆ—ಎಂದು ತಿಳಿಯ ಬೇಕು. ಎಲ್ಲರ ವೃತ್ತಿಗಳೂ ಈಶ್ವರನಿಂದಲೇ ನಿಯಮಿಸಲ್ಪಟ್ಟಿವೆ—ಎಂದು ತಿಳಿದರೆ ವ್ಯಸನಕ್ಕೆ ಕಾರಣವಿಲ್ಲ. ಎಲ್ಲನೂ ನಶವಾಗುವುವು ಎಂದು ತಿಳಿದರೂ ದುಃಖಿಸಬೇಕಾಗಿಲ್ಲ.

ಹೇ ರಾಜ ! ನೀನು ಮಾಯಾವಶನಾಗಿ ಜಗತ್ತನ್ನು—ಜೀವನನ್ನು ಈಶ್ವರನಿಂದ ಬೇರೆಯಾಗಿ ನೋಡುತ್ತಿರುವ ಭ್ರಾಂತಿಯೇ ನಿನ್ನ ದುಃಖಕ್ಕೆ ಕಾರಣವಾಗಿದೆ. ಈಶ್ವರನು ಒಬ್ಬನೇ ಸತ್ಯ. ಹಸ್ತಪಾದಾದಿಯುಕ್ತ ಈ ಜೀವರಾಶಿಯಲ್ಲಾ ಈಶ್ವರನೇ ಈ ಜೀವರುಗಳೊಳಗೆ ಆತ್ಮರೂಪದಿಂದ ಯಾವನು ವಿ ರಾ ಜ ಮಾ ನ ನಾ ಗಿ ದ್ದಾ ನೆ ಯೋ ಆತನೂ ಈಶ್ವರನೇ—ಎಂದು ವಿಚಾರ ಮಾಡುತ್ತಾ ನೀನು ಭೇದ ಭಾವವನ್ನು ತ್ಯಾಗಮಾಡಿ ಸರ್ವತ್ರ ಈಶ್ವರನನ್ನು ನೋಡುವ ಅಭ್ಯಾಸಮಾಡು. ಈಶ್ವರನಲ್ಲದೇ ಉಳಿದೆಲ್ಲವನ್ನು ಅಸತ್ಯವಾಗಿ ತಿಳಿದರೂ ನೀನು ಈಗಲೇ ವಿರಕ್ತನಾಗಬೇಕಾಗಿಲ್ಲ. ಏಕೆಂದರ ಭೂತ ಜೀವನನಾದ ಪರಮಾತ್ಮನು ಭೂಭಾರರೂಪ ಕ್ಷತ್ರಿಯರನ್ನೆಲ್ಲಾ ನಾಶಪಡಿಸಿದಾಗ್ಯೂ ಯಾದವ ಕುಲವನ್ನು ನಾಶಮಾಡುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿದ್ದಾನೆ ಅದುವರೆಗೂ ನೀನು ರಾಜ್ಯಭಾರಮಾಡುತ್ತಿದ್ದು ನಂತರ ಆತನ ಕಾರ್ಯ ಸಮಾಪ್ತಿಯಾದೊಡನೆ ನೀನೂ ಪರಂಧಾಮಕ್ಕೆ ಹೊರಡಬೇಕು. ನಿನ್ನ ದೊಡ್ಡಪ್ಪನಾದ ಧೃತರಾಷ್ಟ್ರನು ತನ್ನ ಪತ್ನಿಯಾದ ಗಾಂಧಾರಿ, ತಮ್ಮನಾದ ವಿದುರ ಇವರೊಡನೆ ಹಿಮವತ್ಪರ್ವತದ ದಕ್ಷಿಣ ಭಾಗದ ಋಷ್ಯಾಶ್ರಮಕ್ಕೆ ಹೋಗಿದ್ದಾನೆ. ಅಲ್ಲಿ ಸಪ್ತಸ್ರೋತವೆಂಬ ಸಪ್ತ ಋಷಿಗಳಿಗಾಗಿ ಗಂಗೆಯೇ ಏಳು ಧಾರೆಯಾಗಿ ಹಂಚಿ ಹರಿಯುತ್ತಿರುವ ಪುಣ್ಯಸ್ಥಾನವಿದೆ. ಅವರು ಅಲ್ಲಿ

ನಿತ್ಯಾಹ್ನಿಕಗಳನ್ನು ಮಾಡಿಕೊಂಡು ಶಾಂತ ಚಿತ್ತರಾಗಿ ಜಲಪಾನಮಾಡುತ್ತಾ ಸಂಪೂರ್ಣ ಕಾಮನಾತ್ಯಾಗಿಗಳಾಗಿರುವರು. ಅವರು ಯೋಗಾಸನವನ್ನು ಜಯಿಸಿದ್ದಾರೆ ಪ್ರಾಣವನ್ನೂ ಜಯಿಸಿದ್ದಾರೆ ವಾಯು ನಿರೋಧಮಾಡಿದ್ದಾರೆ. ಇಂದ್ರಿಯಗಳನ್ನು ರೂಪ ರಸ ಗಂಧ ಮುಂತಾದ ವಿಷಯಗಳಿಂದ ಹಿಂದಿರುಗಿಸಿ ಹೃದಯದಲ್ಲಿ ಹರಿಧ್ಯಾನವ ಾಡುತ್ತಾ ಗುಣತ್ರಯಗಳಿಂದುತ್ಪನ್ನ ಗಳಾದ ಕಾಮಕ್ರೋಧಾದಿ ಮಲಗಳನ್ನು ತ್ಯಾಗಮಾಡಿ ಈಗ ಪರಿಪೂರ್ಣಾವಸ್ಥೆಯನ್ನು ಪಡೆದಿದ್ದಾರೆ 'ನಾನು' ಮತ್ತು 'ನನ್ನ ಶರೀರ' ಎಂಬ ಅಹಂಭಾವಗಳನ್ನು ತೊರೆದು ಬುದ್ಧಿಯನ್ನು ವಿಜ್ಞಾನದಲ್ಲಿಯೂ ಅದನ್ನು ಆತ್ಮನಲ್ಲಿಯೂ ಆ ಆತ್ಮನನ್ನು ಪರಮೇಶ್ವರನಲ್ಲಿಯೂ ಸೇರಿಸಿ, ಗಡಿಗೆಯು ಒಡೆದು ಹೋದಾಗ ಅದರೊಳಗಿನ ಆಕಾಶವು ಮಹಾಕಾಶದಲ್ಲಿ ಸೇರಿಹೋಗುವಂತೆ ತಮ್ಮನ್ನು, ಆತ್ಮನನ್ನು ಪರಮಾತ್ಮ ರೂಪದಲ್ಲಿ ನೋಡುತ್ತಿದ್ದಾರೆ.

ಮಾಯೆಯ ಗುಣಗಳಿಂದ ಹುಟ್ಟಿದ ಕರ್ಮವನ್ನು ತ್ಯಾಗಮಾಡಿದ್ದಾರೆ. (ಮಾಯಾಮೋಹತ್ಯಾಗದಿಂದ ಅದರ ವಾಸನೆಯೂ ತ್ಯಾಗವಾಗುತ್ತದೆ. ವಾಸನಾತ್ಯಾಗದೊಡನೆಯೇ ಮುಕ್ತಿಯು ಸಿದ್ಧವಾಗುತ್ತದೆ.) ಅವರು ಸಂಪೂರ್ಣ ಇಂದ್ರಿಯಗಳನ್ನು ಜಯಿಸಿ ಆಹಾರಾದಿಗಳನ್ನು ತ್ಯಜಿಸಿ, ಶಿಲಾಮೂರ್ತಿಗಳಂತೆ ಸಮಾಧಿಯಲ್ಲಿದ್ದುಬಿಟ್ಟಿದ್ದಾರೆ. ಆದುದರಿಂದ ನೀನು ಅವರಲ್ಲಿಗೆ ಹೋಗಿ ಅವರ ಸಮಾಧಿಸ್ಥಿತಿಗೆ ಭಂಗತರಕೂಡದೆಂದೇ ನನ್ನ ಇಚ್ಛೆ. ಧೃತರಾಷ್ಟ್ರನು ಇವತ್ತಿಗೆ ಐದನೇ ದಿನ ತನ್ನ ದೇಹವನ್ನು ತ್ಯಾಗ ಮಾಡುವನು. ಅವನ ಶರೀರವು ಯೋಗಾಗ್ನಿಯಿಂದ ಭಸ್ಮವಾಗುವುದು. ಗಾಂಧಾರಿಯು ಆತನ ಶರೀರದೊಡನೆ ಅವರಿದ್ದ ಪರ್ಣಶಾಲೆಗೆ ಬೆಂಕಿಹತ್ತಿಸಿ ತಾನೂ ಅಗ್ನಿಪ್ರವೇಶಮಾಡಿಬಿಡುವಳು. ಈ ಆಶ್ಚರ್ಯವನ್ನು ನೋಡುತ್ತಾ ವಿದುರನೂ ತೃಪ್ತನಾಗಿ ಅಲ್ಲಿಂದ ತೀರ್ಥಯಾತ್ರೆಗೆ ಹೊರಟುಬಿಡುವನು. ಎಂದು ಹೇಳಿ ನಾರದರು ತುಂಬುರರೊಡನೆ ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿದರು.

ಧೃತರಾಷ್ಟ್ರನ ಮರಣದ ಕ್ರಮವು ವಿಚಾರ ಯೋಗ್ಯವಾದುದು. ವಿದುರನ ತಾನು ಮೈತ್ರೇಯ ಋಷಿಗಳಿಂದ ಅನುಗ್ರಹವನ್ನು ಪಡೆದು ವಿರಕ್ತ

ನಾಗಿ ತನ್ನ ಅಣ್ಣನಿಗೆ ವಿರಕ್ತಿಯ ಪಾಠವನ್ನು ಕಲಿಸಿ ಮನೆಯಿಂದ ಹೊರಕ್ಕೆ ಹೊರಡಿಸಿ ಕೊನೆಗೆ ಗಂಗಾತಟದಲ್ಲಿ ಸಮಾಧಿ ಯೋಗದಿಂದ ದೇಹತ್ಯಾಗ ಮಾಡಿಸಿದ್ದಾನೆ. ಇದೇ ನಿಜವಾದ ಬಂಧುತ್ವ. ದೇಹವು ಹುಟ್ಟಿದ ನಂತರ ಸಾಯಲೇಬೇಕು. ಅದನ್ನಾರೂ ತಪ್ಪಿಸುವಹಾಗಿಲ್ಲ. **ಮರಣವು ಬಿಡಿಸಲಾಗದ ಬಂಧುತ್ವ. ಆದರೆ ದುಃಖದಿಂದ, ರೋಗದಿಂದ, ಅಪಮೃತ್ಯುವಿನಿಂದ ಅಳುತ್ತಾ, ಸಾಯುವುದು ಹೇಡಿತನ.** ಮೃತ್ಯುವನ್ನು ಆಲಿಂಗಿಸುವಾಗ ಧೈರ್ಯದಿಂದಲೂ ಪ್ರೇಮದಿಂದಲೂ ಸಿದ್ಧನಾಗುವುದೇ ಇಲ್ಲಿಯ ಪಾಠ. ಧೃತರಾಷ್ಟ್ರನಿಗೆ ಹೊಸದಾಗಿ ತಿಳಿಯಬೇಕಾದುದೇನೂ ಇಲ್ಲ. **ವ್ಯಾಸರ ವೀರ್ಯದಿಂದ ಹುಟ್ಟಿ ವಿದುರನಂತಹ ತಮ್ಮನನ್ನು ಪಡೆದು ಸಂಜಯನಂತಹ ಶಿಷ್ಯನಿಂದ ಧರ್ಮ ಜ್ಞಾನ ಭಕ್ತಿಗಳ ಸಂಬಂಧವಾದ ಜ್ಞಾನವನ್ನೆಲ್ಲಾ ಧಾರಣೆಮಾಡಿದ್ದ ಸಿದ್ಧಪಾಕವೇ ಆತನ ಅಂತಃಕರಣದ ಆಸ್ತಿ.** ಆದರೆ ಮಕ್ಕಳ ಮೇಲಿನ ಮೋಹವು ಅವನನ್ನು ನಿಜವಾಗಿಯೂ ಕುರುಡನನ್ನಾಗಿ ಮಾಡಿದ್ದರಿಂದಲೇ ಮಹಾಭಾರತ ಯುದ್ಧಕ್ಕೆ ಅವಕಾಶವಾದುದು. ಪಡಬೇಕಾದ ದುಃಖ ಸಂಕಟಗಳನ್ನೆಲ್ಲಾ ಪಟ್ಟಿದ್ದರೂ ಧರ್ಮರಾಯನ ಪಿತೃಸ್ನೇಹವು ಆತನ ಅಂತಃಕರಣಕ್ಕೆ ಸಮಾಧಾನವನ್ನು ಕೊಟ್ಟು ನಿಲ್ಲಿಸಿದ್ದಿತು. ರಾಜ ಭೋಗದಿಂದ ತೃಪ್ತನಾಗಿದ್ದನು. ವಿದುರನೂ ಆತನನ್ನು ಮೊದಲಿಸಿ ರೇಗಿಸಿ ತಪಸ್ಸಿಗೆ ಪ್ರಯಾಣಮಾಡುವಂತೆ ಸಿದ್ಧಮಾಡಿದುದೇ ವಿಶೇಷ. ಆತನು ದೇಹತ್ಯಾಗಮಾಡಿದ ಕ್ರಮವು ಅಷ್ಟಾಂಗಯೋಗ ಸಾಧನೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ, ಎಂಬಿವು ಯೋಗದ ಎಂಟು ಅಂಗಗಳು ಯಮ ನಿಯಮಗಳು, ಅಂತರಿಂದ್ರಿಯ ಬಹಿರಿಂದ್ರಿಯಗಳನ್ನು ಸ್ವಾಧೀನಕ್ಕೆ ತರುವ ಸಾಧನೆ. ಒಂದೇ ಸ್ಥಳದಲ್ಲಿ ಒಂದೇ ಕ್ರಮದಲ್ಲಿ ಎಷ್ಟು ಹೊತ್ತಾದರೂ ಕುಳಿತುಕೊಳ್ಳುವ ಅಭ್ಯಾಸವು ಆಸನವು. ವಾಯುವಿನ ಗತಿಯನ್ನು ಕ್ರಮಪಡಿಸಿ ಒಂದಾವೃತ್ತಿ ಒಳಕ್ಕೆ ತೆಗೆದುಕೊಂಡ ವಾಯುವನ್ನು ಆದಷ್ಟು ಕಾಲ ಒಳಗೆ ನಿಲ್ಲುವಂತೆ ಮಾಡುವ ಸಾಧನೆಯು ಪ್ರಾಣಾಯಾಮ. ಇಂದ್ರಿಯಗಳನ್ನು ಮನಸ್ಸಿಗೆ ಅಧೀನಮಾಡಿ, ಅದನ್ನು ಪರಮೇಶ್ವರನ ಕಡೆಗೆ ತಿರುಗಿಸಿಕೊಟ್ಟು

ಗುರಿಯನ್ನು ತಪ್ಪಿಸುವ ವೈಗ್ರ್ಯ ಅಡ್ಡಬರುವ ಚಾಂಚಲ್ಯವನ್ನೆಲ್ಲಾ ಬದಿಗೊತ್ತಿ ಏಕಾಗ್ರತೆಯನ್ನು ಅಭ್ಯಾಸಮಾಡುವುದೂ ಪ್ರತ್ಯಾಹಾರ ಧ್ಯಾನಧಾರಣೆಗಳು. ಧ್ಯಾನದಿಂದ ಸಿದ್ಧಮಾಡಲ್ಪಟ್ಟ ಏಕಾಗ್ರತೆಯಿಂದ ಜೀವಾತ್ಮನನ್ನು ಪರಮಾತ್ಮನಲ್ಲಿ ಲೀನಮಾಡಿ ಬಾಹ್ಯಜ್ಞಾನವನ್ನು ಮರೆಯುವುದೂ, ಆಸ್ಥಿತಿಯಲ್ಲಿ ಬಹುಕಾಲ ನಿಲ್ಲುವುದೂ ಸಮಾಧಿ. **ಹೀಗೆ ಮರಣ ಕಾಲದಲ್ಲಿ ಭಕ್ತಿ ಜ್ಞಾನಗಳಲ್ಲಿ ಯಾವುದಾದರೊಂದು ಮಾರ್ಗದಿಂದ ಮನಸ್ಸನ್ನು ಪರಮಾತ್ಮನಲ್ಲಿ ನಿಲ್ಲಿಸಿ ಶಾಂತಚಿತ್ತನಾಗಿ ದೇಹತ್ಯಾಗಮಾಡುವುದು ಪ್ರತಿಯೊಬ್ಬ ವಿವೇಕಿಯ ಕರ್ತವ್ಯವೆಂಬುದನ್ನಿಲ್ಲಿ ಸೂಚಿಸಿದ್ದಾರೆ.**

ಬಂಧು ಬಾಂಧವರನ್ನು ನೋಡುವುದಕ್ಕಾಗಿ ಶ್ರೀಕೃಷ್ಣನೊಡನೆ ದ್ವಾರಕೆಗೆ ಹೊರಟ ಅರ್ಜುನನು ಅನೇಕ ತಿಂಗಳಾದರೂ ಹಿಂದಿರುಗಲಿಲ್ಲ. ಧರ್ಮರಾಯನಿಗೆ ಹಸ್ತಿನಾವತಿಯಲ್ಲಿ ಅನೇಕ ದುಶ್ಶಕುನಗಳು ತೋರಲಾರಂಭಿಸಿದವು. ಯಾವ ಋತುವಿನಲ್ಲಿ ಏನೇನು ಸ್ವಾಭಾವಿಕ ಕಾರ್ಯಗಳಾಗಬೇಕೋ ಅವುಗಳೆಲ್ಲಾ ವಿಪರೀತವಾಗಿ ಕಾಣಲಾರಂಭಿಸಿದವು. ಹೇಮಂತದಲ್ಲಿ ವಸಂತ ಋತುವಿನ ಅನುಭವವೂ, ವಸಂತ ಶಿಶಿರಗಳಲ್ಲಿ ವಿಪರೀತ ಅನುಭವಗಳೂ ಕಾಣತೊಡಗಿದವು. ಜನಗಳ ವ್ಯವಹಾರದಲ್ಲಿ ಕಪಟ ನಡತೆಯು ಕಾಣಬಂದಿತು. ಜನಗಳು ಸ್ನೇಹದಲ್ಲಿ ಮೋಸ ಮಾಡತೊಡಗಿದರು. ಜನಗಳಲ್ಲಿ ಕ್ರೋಧಲೋಭಗಳೂ, ಪಾಪಾಚರಣೆಯೂ ಕಾಣಬಂದಿತು. ತಂದೆ, ತಾಯಿ, ಮಿತ್ರ, ಸಹೋದರ, ಪತಿ, ಪತ್ನಿಯರಲ್ಲಿ ಪರಸ್ಪರದ್ವೇಷ, ವ್ಯಾಜ್ಯಗಳೂ ಹುಟ್ಟಿದವು. ಈ ಅನಿಷ್ಟಕಾರಕ ಲಕ್ಷಣಗಳೂ—ಕಲಿಯುಗದ ಆಗಮನದ ಸೂಚಿತಗಳಾದ ಈ ದೋಷಗಳು ಧರ್ಮರಾಯನಿಗೆ ಉತ್ಪಾತ ಸೂಚಕಗಳಾಗಿ ಕಂಡುಬಂದವು. ಭೀಮಸೇನನನ್ನು ಕರೆದು ಹೇಳಿದನು. "ತಮ್ಮ! ಭೀಮಸೇನ! ನಮ್ಮ ಬಂಧುಗಳಾದ ಯಾದವರನ್ನು ನೋಡಿಕೊಂಡು ಶ್ರೀಕೃಷ್ಣಪರಮಾತ್ಮನು ಮುಂದೇನುಮಾಡುತ್ತಾನೆ ಎಂಬುದನ್ನು ತಿಳಿಯಲು ಅರ್ಜುನನನ್ನು ದ್ವಾರಕೆಗೆ ಕಳುಹಿಸಿದ್ದೆನಷ್ಟೆ! ಆತನು ಹೋಗಿ ಏಳು ತಿಂಗಳಾಯಿತು. ಆತನೇಕೆ ಹಿಂದಿರುಗಿ ಬರಲಿಲ್ಲ! ಕಾರಣವೇನು? ನಾರದರು ಹೇಳಿದಂತೆ ದೇವನು ತನ್ನ ಲೀಲಾಕ್ಷೇತ್ರವನ್ನು ಬಿಡುವ ಸಮಯವು ಬಂದಿರ

ಬಹುದೋ ? ಆತನ ಕೃಪೆಯಿಂದ–ಸಹಾಯದಿಂದ ನಾವು ಈ ಐಶ್ವರ್ಯ, ರಾಜ್ಯ, ಸ್ತ್ರೀ, ಕುಲ, ಸಂತಾನ ವೈಭವಗಳನ್ನು ಹೊಂದಿದ್ದೇವೆ. ಶತ್ರುಗಳನ್ನು ಜಯಿಸಿ ಅಶ್ವಮೇಧಾದಿಯಜ್ಞಗಳನ್ನು ಮಾಡಿದ್ದೇವೆ.

"ಎಲೈ ಪುರುಷಸಿಂಹ! ಭೂಮಿಯಲ್ಲಿ, ಆಕಾಶದಲ್ಲಿ, ಎಂತೆಂತಹ ಅಶುಭ ಸೂಚಕ ಭಯಂಕರ ಉತ್ಪಾತಗಳಾಗುತ್ತಿವೆ ಎಂಬುದನ್ನು ನೋಡಿದೆಯಾ! ನನ್ನ ಎಡ ಭಾಗದ ಭುಜ, ಕಣ್ಣು, ತೊಡೆಗಳು ಬಾರಿ ಬಾರಿಗೆ ಅದುರಿಹಾರುತ್ತಿವೆ. ಎದೆಯು ನಡುಗುತ್ತಿದೆ. ನೋಡು! ಈ ನರಿಯು ಸೂರ್ಯನ ಕಡೆಗೆ ಮುಖವನ್ನೆತ್ತಿಕೊಂಡು ಊಳುತ್ತಿದೆ. ಅದರ ಬಾಯಿಂದ ಅಗ್ನಿಜ್ವಾಲೆಯು ಹೊರಡುತ್ತಿದೆ! ಈ ನಾಯಿಯು ನಿರ್ಭಯವಾಗಿ ನನ್ನೆದುರಿಗೆ ತಿರುಗಿಕೊಂಡು ಅಳುತ್ತಿದೆ. ಗೋವು ಮುಂತಾದ ಶುಭ ಪ್ರಾಣಿಗಳು ನನ್ನ ಎಡಭಾಗದಲ್ಲಿಯೂ ಕತ್ತೆ ಮುಂತಾದ ಅಶುಭ ಜೀವಿಗಳು ಬಲದಲ್ಲಿಯೂ ತಿರುಗುತ್ತಿವೆ. ನನ್ನ ವಾಹನದಲ್ಲಿನ ಕುದುರೆಗಳು ಅಳುತ್ತಿವೆ ಮೃತ್ಯು ಸೂಚಕವಾದ ಗೂಬೆ, ಪಾರಿವಾಳಗಳ ಕಠೋರಶಬ್ದವು ಹಗಲಿರುಳೂ ಕೇಳಿಸುತ್ತಿದೆ. ಈ ದುಶ್ಶಕುನಗಳಿಂದ ನನ್ನೆದೆಯು ನಡುಗುತ್ತಿದೆ. ಏನೋ ಒಂದು ಮಹಾವಿಪತ್ತು ಬಂದೊದಗುವ ಭಯವು ತೋರುತ್ತಿದೆ. ಎಲ್ಲೆಲ್ಲಿಯೂ ಧೂಳು ಮುಚ್ಚುತ್ತಿದೆ. ಸೂರ್ಯಚಂದ್ರ ಬಿಂಬಗಳಲ್ಲಿ ಮಂಡಲವು ಕಾಣಬರುತ್ತಿದೆ. ಪರ್ವತ ಸಹಿತವಾದ ಭೂಮಿಯು ಕಂಪಿಸುತ್ತಿದೆ. ಸಿಡಿಲು ಹೊಡೆಯುವ ಘೋರ ಶಬ್ದವು ಕೇಳಿಬರುತ್ತಿದೆ ಭಯಂಕರವಾದ ಬಿರುಗಾಳಿಯು ಬೀಸುತ್ತಿದೆ ಅದರಿಂದ ಎಲ್ಲೆಲ್ಲಿಯೂ ಗಾಢಾಂಧಕಾರವು ಮುಚ್ಚುತ್ತಿದೆ. ಮೇಘಗಳು ರಕ್ತವನ್ನು ಸುರಿಸುತ್ತಿವೆ. ಸೂರ್ಯನ ತೇಜಸ್ಸು ಮಂದವಾಗುತ್ತಿದೆ. ಆಕಾಶದಲ್ಲಿ ಗ್ರಹಗಳು ಪರಸ್ಪರ ಯುದ್ಧಮಾಡುತ್ತಿರುವಂತೆ ಕಾಣುತ್ತಿದೆ. ಆಕಾಶ ಅಂತರಿಕ್ಷಗಳು, ಭೂತ, ಯಕ್ಷ, ರಾಕ್ಷಸ ಗಣಗಳಿಂದೊಡಗೂಡಿ ಬೆಂಕಿಯಲ್ಲಿ ಉರಿಯುತ್ತಿರುವಂತೆ ತೋರುತ್ತಿದೆ. ನದೀ, ನದ, ಸರೋವರಗಳೂ, ಮನುಷ್ಯರುಗಳೂ ತಲ್ಲಣಿಸುತ್ತಿರುವಂತೆ ತೋರುತ್ತಿದೆ. ತುಪ್ಪದ ಆಹುತಿಯು ಬೀಳುತ್ತಿದ್ದರೂ ಅಗ್ನಿಯು ಉರಿಯುವುದೇ ಇಲ್ಲಾ. ಕರುಗಳು ಹಾಲು ಕುಡಿಯುವುದಿಲ್ಲ. ಹಸುಗಳ

ಕೆಟ್ಟಲಕ್ಷಣವೂ ಹಾಗೆಯೇ ಇಳಿಯುವುದಿಲ್ಲ. ಕಾಲವು ರುಷನೇನು ಮಾಡುವನೋ? ಗೋವುಗಳ ಕಣ್ಣುಗಳಲ್ಲಿ ನೀರು ಸುರಿಯುತ್ತಿದೆ. ಅವು ಗಳು ಅಳುತ್ತಿವೆ. ಕೊಟ್ಟಿಯಲ್ಲಿನ ಎತ್ತುಗಳು ತಿರುಗುತ್ತಿವೆ. ಮಂದಿರಗಳಲ್ಲಿನ ದೇವಮೂರ್ತಿಗಳು ಅಳುತ್ತಿರುವಂತೆಯೂ ಅವುಗಳ ಶರೀರದಿಂದ ಬೆವರು ಹೊರಡುತ್ತಿರುವಂತೆಯೂ ಅವುಗಳು ಅಲ್ಲಿಂದ ಸಜೀವವಾಗಿ ಹೊರ ಹೊರಡು ವಂತೆಯೂ ಕಾಣಬರುತ್ತಿವೆ. ಈ ದೇಶ, ಗ್ರಾಮ, ನಗರ, ತೋಟ, ಆಶ್ರಮಗಳ ಸ್ಥಾನದಲ್ಲಿಯೂ ಆನಂದವು ತೋರುತ್ತಲಿಲ್ಲ.

ಶ್ರೀ ಕೃಷ್ಣಪರಮಾತ್ಮನ ವಜ್ರಾಂಕಶಾದಿ ರೇಖಾಯುಕ್ತ ಚರಣ ಕಮಲಗಳು ಪೃಥ್ವಿಯಲ್ಲಿಲ್ಲದಿರುವುದರಿಂದಲೇ ಈ ದುಶ್ಶಕುನಗಳೆಲ್ಲಾ ಕಾಣ ಬರುತ್ತಿವೆ ಎಂಬ ಸಂದೇಹವು ನನ್ನನ್ನು ಬಾಧಿಸುತ್ತಿದೆ." ಎಂದು ಮುಂತಾಗಿ ಧರ್ಮರಾಜನು ಯೋಚಿಸುತ್ತಿರುವಾಗ ದ್ವಾರಕೆಯಿಂದ ಅರ್ಜುನನು ಬಂದನು.

ಬರುತ್ತಿರುವಾಗಲೇ ಚಕ್ಕಿಚಕ್ಕಿ ಅಣ್ಣ ತಾತ ಅಣ್ಣನ ಪಾದಗಳಮೇಲೆ ಬಿದ್ದುಬಿಟ್ಟನು. ನಂತರ ಮುಖವನ್ನು ತಗ್ಗಿಸಿಕೊಂಡು ಕಣ್ಣೀರುಸುರಿಸುತಾ ನಿಂತುಕೊಂಡನು. ಅರ್ಜುನನ ಈ ದುರವಸ್ಥೆಯನ್ನು ನೋಡುತ್ತಲೇ ಧರ್ಮ ರಾಜನಿಗೆ ಗಾಬರಿಯುಂಟಾಯಿತು. ನಾರದರ ವಾಕ್ಯವು ಸ್ಮರಣೆಗೆ ಬಂದಿತು ಹೇಳಿದನು,

"ಅರ್ಜುನ! ಇದೇಕೆ ಗಾಬರಿಯಿಂದ ದುಃಖಿಸುತ್ತಿರುವೆ? ನಮ್ಮ ಬಂಧುಗಳಾದ ಮಧು, ಭೋಜ, ದಾಶಾರ್ಹ, ಅರ್ಹ, ಸಾತ್ವತ, ಅಂಧಕ ವೃಷ್ಣಿವಂಶಗಳ ಯಾದವರು ಕ್ಷೇಮವಾಗಿರುವರಷ್ಟೆ? ನಮ್ಮ ಅಜ್ಜ ಶೂರಸೇನನೂ, ಮಾವ ವಸುದೇವನೂ, ಸುಖವಾಗಿಲ್ಲವೆ! ವಸುದೇವನ ಪತ್ನಿ ಯಾದ ದೇವಕಿ ದೇವಿಯು ಆತನ ಉಳಿದ ಪತ್ನಿಯರೊಡನೆ ಸೊಸೆಯ ರೊಡನೆ ಸುಖವಾಗಿರುವಳೋ? ಕಂಸಪಿತನಾದ ಉಗ್ರಸೇನನು ಸೌಖ್ಯವೇ; ಆತನ ಸೋದರ ದೇವಕ, ವೀರಕೃತವರ್ಮ, ಜಯನ್ತ ಗದ, ಸಾರಣ, ಅಕ್ರೂರ, ಶತ್ರುಜಿತ್, ಮುಂತಾದ ಯಾದವರೆಲ್ಲಾ ಆರೋಗ್ಯವೇ? ಯಾದವ ಸ್ವಾಮಿಯಾದ ಬಲಭದ್ರನು ಸುಖವಾಗಿರುವನೋ? ಪ್ರದ್ಯುಮ್ನನು,

ಅನಿರುದ್ಧನು, ಸುಷೇಣ, ಚಾರುದೇಷ್ಣ, ಜಾಂಬವತಿಪುತ್ರಸಾಂಬ, ಶ್ರೀಕೃಷ್ಣನ ಪುತ್ರಶ್ರೇಷ್ಠರೂ, ಶ್ರೀ ಕೃಷ್ಣನ ಭಕ್ತರಾದ ಶ್ರುತಸೇನ, ಉದ್ಧವ, ಸುನಂದ, ನಂದ, ಮುಂತಾದ ಯಾದವರಲ್ಲಾ ಕ್ಷೇಮವಾಗಿರುವರೋ ? ನಮ್ಮನ್ನು ಜ್ಞಾಪಿಸಿಕೊಳ್ಳುತ್ತಿರುವರೋ ? ಬ್ರಹ್ಮಣ್ಯನಾದ ಭಕ್ತವತ್ಸಲನಾದ, ಮಹಾರಥಿಯಾದ, ಶ್ರೀ ಕೃಷ್ಣಭಗವಾನನು ದ್ವಾರಕೆಯಲ್ಲಿನ ಸುಧರ್ಮಾ ಸಭೆಯಲ್ಲಿ ಸುಖದಿಂದ ವಿರಾಜಮಾನನಾಗಿರುವನೋ ! ಲೋಕ ಮಂಗಲ ಕಾರಿಯಾದ ಆದಿಪುರುಷನಾದ, ಅನಂತಮೂರ್ತಿಯು—ಬಲದೇವನು ಯಾದವಕುಲ ಮಹಾಸಾಗರದಲ್ಲಿ ಆನಂದವಾಗಿರುವನೋ ? ಸತ್ಯಭಾಮೆ ಮುಂತಾದ ರಾಣಿಯರೆಲ್ಲಾ ಆರೋಗ್ಯವಾಗಿರುವರೇ ? ನೀನೇಕೆ ಇಷ್ಟು ದೀನನಾಗಿ ಕಾಣುತ್ತಿರುವೆ ? ಮನಸ್ಸಿಗೆ ಅತಿದುಃಖವಾದ ಅನುಭವ ವೇನಾದರೂ ಆಗಿದೆಯೇ ? ನಿನಗೆ ದ್ವಾರಕೆಯಲ್ಲಿ ಸರಿಯಾದ ಆದರವು ಸಿಕ್ಕಲಿಲ್ಲವೇ ? ಯಾರಾದರೂ ನಿನ್ನನ್ನು ತಿರಸ್ಕರಿಸಿದರೇ ? ಬಹುದಿನಗಳು ಪರದೇಶದಲ್ಲಿದ್ದುದರಿಂದ ನೀನು ಹೀಗೆ ಇಳಿದುಹೋಗಿರುವೆಯೋ ? ಯಾರಾದರೂ ನೀನು ತಡೆಯಲಾರದಂತಹ ಕಠೋರ ವಚನಗಳಿಂದ ನಿನ್ನನ್ನು ಅವಮಾನಗೊಳಿಸಿರುವರೋ ? ಯಾರಿಗಾದರೂ ದಾನಮಾಡುವೆ ನೆಂದು ವಚನಕೊಟ್ಟು ಅದನ್ನು ನಡೆಸಲಾರದೇ ಈ ರೀತಿ ದುಃಖಕ್ಕೊಳ ಗಾಗಿರುವೆಯೋ ? ಬ್ರಾಹ್ಮಣ, ಬಾಲಕ, ಗೋವು, ಸ್ತ್ರೀ, ವೃದ್ಧ, ರೋಗಿ, ಇವರುಗಳಿಗೆ ತೃಪ್ತಿಕರವಾದ ಸೇವೆಮಾಡಲಾರದೆ, ಶರಣಾಗತ ರಕ್ಷಣೆ ಮಾಡದೆ, ಯೋಚಿಸುತ್ತಿರುವೆಯೋ ? ಗಮನಕ್ಕೆ ಯೋಗ್ಯಳಾದ ಸ್ತ್ರೀಯನ್ನು ನಿರಾದರಮಾಡಿ (ತಿರಸ್ಕಾರಮಾಡಿ) ಅಗಮ್ಯಾ—ಪರಸ್ತ್ರೀಯ ಸಹವಾಸಮಾಡಿರು ವೆಯೋ ? ನಿನ್ನ ಸಮಾನಸ್ಕಂಧರಲ್ಲದಿರುವವರಿಂದ ಅಪಜಯ ಹೊಂದಿರು ವೆಯೋ ? ಮುಂಚೆ ಭೋಜನಮಾಡಿಸಬೇಕಾದ ವೃದ್ಧ, ಬಾಲಕ, ಬ್ರಾಹ್ಮಣರನ್ನು ಬಿಟ್ಟು ನೀನು ಊಟಮಾಡಿರುವೆಯೋ ? ಯಾವ ನಿಂದ್ಯ ಕರ್ಮವನ್ನುಮಾಡಿ ನಿನಗಿಂತಹ ಮನೋಮಾಲಿನ್ಯ ಬಂದಿದೆ ಅಥವಾ ನಿನ್ನ ಅಂತರಂಗಸ್ವಾಮಿಯಾದ ಶ್ರೀ ಕೃಷ್ಣನ ವಿಯೋಗವೇ ನಿನ್ನನ್ನು ಈ ದುಃಖಕ್ಕೆ ಈಡುಮಾಡಿರಬಹುದೆಂದು ಅನುಮಾನ ಪಡುತ್ತಿದ್ದೇನೆ. ನಿನ್ನಂತಹ ಧೀರ

ಪುರುಷನು ಸಣ್ಣ ವಿಷಯಗಳಿಗಾಗಿ ಬೆದರುವವನಲ್ಲ.

ಕೃಷ್ಣಸಖನಾದ ಅರ್ಜುನನಿಗೆ ಕೃಷ್ಣವಿರಹದಿಂದ ಹೇಳಲಾರದಷ್ಟು ದುಃಖವಾಗಿತ್ತು. ಧರ್ಮರಾಯನ ಪ್ರಶ್ನೆಗಳಿಂದ ಆತನ ಹೃದಯಕಮಲದಂತೆ ಮುಖಕಮಲವೂ ಬಾಡಿಹೋಯಿತು. ದೇವದೇವನನ್ನು ಧ್ಯಾನಮಾಡುತ್ತಾ ಉಕ್ಕಿಬರುತ್ತಿರುವ ದುಃಖಾಶ್ರುಗಳನ್ನು ಒರೆಸಿಕೊಳ್ಳುತ್ತಾ ಕುತ್ತಿಗೆಯ ಶಿರಗಳು ಉಬ್ಬಿ ಎಷ್ಟುಪ್ರಯತ್ನ ಪಟ್ಟರೂ ಮಾತನಾಡಲಾರದೆ ನಿಂತುಕೊಂಡನು. ಕೃಷ್ಣವಿರಹದಿಂದುಂಟಾದ ದುಃಖವು ಉಕ್ಕುತ್ತಿದ್ದಂತೆ ಕಣ್ಣೀರಿನ ಕೋಡಿಯೂ ಹೆಚ್ಚುತ್ತಿತ್ತು ಧರ್ಮರಾಜನನ್ನು ನೋಡಲಾರದೆ ಮುಖವನ್ನೇ ತಿರುಗಿಸಿಕೊಂಡು ಉಕ್ಕಿಬರುತ್ತಿರುವ ದುಃಖಾಶ್ರುಗಳನ್ನು ಒರೆಸಿಕೊಳ್ಳುತ್ತಾ ಹೇಳಿದನು

"ಮಹಾರಾಜ! ಬಂಧುರೂಪಿಯಾದ ಕೃಷ್ಣನು ನನಗೆ ಮೋಸಮಾಡಿದನು. ನನ್ನ ಯಾವಪ್ರಚಂಡ ತೇಜಸ್ಸನ್ನು ನೋಡಿ ದೇವತೆಗಳೂ ಹೆದರುತ್ತಿದ್ದರೋ ಆ ತೇಜಸ್ಸನ್ನೆಲ್ಲಾ ತನ್ನೊಡನೆಯೇ ತೆಗೆದುಕೊಂಡು ಹೊರಟುಹೋದನು. ಯಾವ ಪರಮಾತ್ಮನ ಆಶ್ರಯದಿಂದ ದ್ರೌಪದೀ ಸ್ವಯಂವರದಲ್ಲಿ ಮತ್ಸ್ಯ ಯಂತ್ರವನ್ನು ಭೇದನೆಮಾಡಿದೆನೋ, ಖಾಂಡವವನವನ್ನು ದಹನಮಾಡಿ ದೇವತೆಗಳನ್ನು ಜಯಿಸಿದೆನೋ, ಯಾವ ದೇವನ ಅನುಗ್ರಹದಿಂದ ಸಹಸ್ರ ಆನೆಗಳ ಬಲಶಾಲಿಯಾದ ಭೀಮಸೇನನು ಜರಾಸಂಧನನ್ನು ಕೊಂದುಹಾಕಿದನೋ, ನಿನ್ನ ರಾಜಸೂಯ ಯಾಗದಲ್ಲಿ ನಿನ್ನೊಡನೆ ಕುಳಿತಿದ್ದ ದ್ರೌಪದಿಯ ಸೌಂದರ್ಯದಿಂದ ಅಸೂಯಾಪರರಾಗಿ ದುರ್ಯೋಧನಾದಿಗಳು ತುಂಬಿದ ಸಭೆಯಲ್ಲಿ ಅವಮಾನಪಡಿಸಿದುದರ ಫಲವಾಗಿ ದುರ್ಯೋಧನನನ್ನು ತನ್ನ ಗದಾಪ್ರಹಾರದಿಂದ ಕೊಂದುಹಾಕಿದನೋ, ಯಾವ ಕೃಪಾದೃಷ್ಟಿಯ ಆಶೀರ್ವಾದದಿಂದ ನಾನು ಕಿರಾತವೇಷದ ಪರಶಿವನೊಡನೆಯೂ ಯುದ್ಧಮಾಡಿ ಪಾಶುಪತಾಸ್ತ್ರವನ್ನು ಪಡೆದೆನೋ, ಗೋಗ್ರಹಣದಲ್ಲಿ ಶತ್ರುಗಳನ್ನು ಸದೆಬಡಿದೆನೋ, ಅಂತಹ ಅನೇಕ ದುಃಖ ಸಂಕಟಗಳಿಂದ ನಮ್ಮನ್ನು ಪಾರುಮಾಡಿ, ನನಗೆ ಸಾರಥಿಯಾಗಿ ಗುರುವಾಗಿ ಮಿತ್ರನಾಗಿ ಆಹಾರ ನಿದ್ರಾ ವಿಹಾರಗಳಲ್ಲೆಲ್ಲಾ ನನ್ನನ್ನಗಲದೆ ಗೀತಾಜ್ಞಾನದಿಂದ ನನ್ನನ್ನು ಅನುಗ್ರಹಿಸಿ

ನನ್ನ ಸಮಸ್ತ ಅಪರಾಧಗಳನ್ನೂ ಕ್ಷಮಿಸಿ ನನ್ನನ್ನು ಕಾಪಾಡಿದ ನನ್ನ ಜೀವನ ಜ್ಯೋತಿಯಾದ ಪರಮಾತ್ಮನೀಗ ನನ್ನೊಡನಿಲ್ಲ. ನನ್ನ ಹೃದಯವು ಶೂನ್ಯವಾಗಿ ಹೋಗಿದೆ. ಆತನ ಆಜ್ಞೆಯಂತೆ ಆತನ ಹದಿನಾರು ಸಹಸ್ರ ಸ್ತ್ರೀಯರನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದಾಗ ದನಕಾಯುವ ಗೊಲ್ಲರು, ಹೆಂಗಸರನ್ನು ಹೆದರಿಸುವಂತೆ ನನ್ನನ್ನು ಸೋಲಿಸಿ ಬಿಟ್ಟರು. ಅದೇ ಗಾಂಡೀವ ಧನುಸ್ಸು, ಅದೇಬಾಣ, ಅದೇರಥ, ಅದೇ ಕುದುರೆಗಳು, ಇದ್ದರೂ, ವೀರನಾದ ನನ್ನಹೆಸರನ್ನು ಕೇಳಿದ ವೀರಕ್ಷತ್ರಿಯರಾಜರು ನಡುಗುತ್ತಿದ್ದ—ಆ ಪಾರ್ಥನಾದ ನಾನು, ನನ್ನ ಸ್ವಾಮಿಯು ಹೋದಮೇಲೆ ಕೆಲಸಕ್ಕೆ ಬಾರದ ಕಡ್ಡಿಗಿಂತ ಕಡೆ ಯಾಗಿಬಿಟ್ಟೆ. ನನ್ನ ಶಸ್ತ್ರಾಸ್ತ್ರಗಳೆಲ್ಲಾ ಸ್ವಪ್ನ ಪ್ರಪಂಚದಂತೆ, ಐಂದ್ರಜಾಲಿಕರ ಆಟದಂತೆ, ಮರುಭೂಮಿಯಲ್ಲಿ ಹಾಕಿದ ಬೀಜದಂತೆ, ಬೂದಿಯಲ್ಲಿ ಹೋಮ ಮಾಡಿದಂತೆ, ನಿಷ್ಪ್ರಯೋಜನವಾಗಿಬಿಟ್ಟುವು. ನೀನು ಯಾದವರ ವೃತ್ತಾಂತ ವನ್ನು ಕೇಳಿದೆಯಲ್ಲವೆ? ಅವರೆಲ್ಲರೂ ಬ್ರಾಹ್ಮಣ ಶಾಪದಿಂದ ಮೋಹಿತರಾಗಿ, ಸುರಾಪಾನದಿಂದ ಮತ್ತರಾಗಿ, ಪರಸ್ಪರ ಹೊಡೆದಾಡಿ ಮರಣ ಹೊಂದಿದರು ಅವರಲ್ಲಿ ನಾಲ್ಕೈದು ಜನ ಮಾತ್ರ ಉಳಿದಿದ್ದಾರೆ ನಿಜ! ಪ್ರಾಣಿಗಳು ಒಬ್ಬರು ಮತ್ತೊಬ್ಬರನ್ನು ಕೊಲ್ಲುವುದೂ, ಹಾಗೆಯೇ ಒಬ್ಬರು ಮತ್ತೊಬ್ಬರನ್ನು ಕಾಪಾಡುವುದೂ ಪರಮಾತ್ಮನ [illegible] ಲೀಲಾನಾಟಕವೇ. ಸಮುದ್ರದಲ್ಲಿನ ಮೀನು ಮುಂತಾದ ಜಲಜಂತುಗಳೂ ಚಿಕ್ಕದನ್ನು ದೊಡ್ಡದೂ ನಿರ್ಬಲ ವಾದುವುಗಳನ್ನು ಬಲಶಾಲಿಯಾದುದೂ ಹೇಗೆ ತಿನ್ನುವವೋ, ಹಾಗೆಯೇ ಶ್ರೀ ಕೃಷ್ಣಪರಮಾತ್ಮನು ಯಾದವರನ್ನು ಯಾದವರಿಂದಲೇ ನಾಶಮಾಡಿಸಿ ವೀರರನ್ನು ವೀರರಿಂದಲೇ ಕೊಲ್ಲಿಸಿ ಭೂಮಿಯ ಭಾರವನ್ನು ಇಳಿಸಿ ಬಿಟ್ಟನು ದೇಶಕಾಲಗಳಿಗೆ ತಕ್ಕಂತೆ ಸಮಯೋಚಿತವಾದ ಮೃದು ಮಧುರವಾಕ್ಯ ಜಾಲ ದಿಂದ ನನ್ನನ್ನು ವಿಪತ್ಪರಂಪರೆಗಳಿಂದ ಉದ್ಧರಿಸುತ್ತಿದ್ದ ಆ ದೇವನ ಉಪದೇಶ ವಾಕ್ಯಗಳನ್ನು ಜ್ಞಾಪಿಸಿಕೊಳ್ಳುತ್ತಿದ್ದಂತೆ ನನಗೆ ದುಃಖವು ಉಕ್ಕೇರುವುದು.”

ಹೀಗೆ ಪ್ರಗಾಢ ಸ್ನೇಹದಿಂದಿದ್ದ ಆ ದೇವನ ಗುಣಗಾನಮಾಡುತ್ತಿದ್ದಂತೆ, ಅರ್ಜುನನ ಬುದ್ಧಿಯು ಶಾಂತಸ್ಥಿತಿಗೆ ಬಂದಿತು ವಾಸುದೇವನ ಚರಣ- ಕಮಲ ಧ್ಯಾನದಿಂದ ಆತನ ಅಂತಃಕರಣದಲ್ಲಿ ಶುದ್ಧಭಕ್ತಿಯು ಉತ್ಪನ್ನ

ಪ್ರಾಪ್ತಿ. ಅಂತಃಕರಣದ ಮಲರೂಪಗಳಾದ ಶೋಕ, ಮೋಹ, ಅಜ್ಞಾನ ಗಳು ದೂರವಾದವು. ಯುದ್ಧಭೂಮಿಯಲ್ಲಿ ಉಪದೇಶ ಮಾಡಲ್ಪಟ್ಟಿದ್ದ, ಕಾಲ ಕರ್ಮ ಭೋಗಾದಿಗಳಿಂದ ಮರೆತು ಹೋಗಿದ್ದ, ಗೀತಾಜ್ಞಾನವು ಶುದ್ಧಭಕ್ತಿ ಯೊಡನೆ ಪುನಃ ಸ್ಮರಣೆಗೆ ಬಂದಿತು. ತಾನು ಬ್ರಹ್ಮಸ್ವರೂಪನೆಂಬ ಸ್ಮೃತಿ ಯೊಡನೆ ಆತನ ಭೇದಭಾವವು ಕಡಮೆಯಾಗಿ ಸಂಶಯವು ನಷ್ಟವಾಯಿತು. ಮಾಯೆಂಬ ತೆರೆಯು ನಷ್ಟಿಯಾದ ದರಿಂದ ತಾನು ಜನ್ಮಮರಣರಹಿತ, ಲಿಂಗಶರೀರಹೀನ, ನಿರ್ಗುಣ ಬ್ರಹ್ಮನೆಂಬ ಅರಿವಾಯಿತು. ಭಗವಂತನು ಪರಂಧಾಮಕ್ಕೆ ಹೊರಟು ಯದುಕುಲವು ನಾಶವಾದುದನ್ನು ಕೇಳಿದಾಗ ಧರ್ಮ ರಾಜನಿಗೆ ನಾರದರ ವಾಕ್ಯವು ಸ್ಮರಣೆಗೆ ಬಂದಿತು ಮನಸ್ಸನ್ನು ಸ್ಥಿರಮಾಡಿ ಸ್ವರ್ಗಕ್ಕೆ ಪ್ರಯಾಣಮಾಡಲು ನಿಶ್ಚಯಿಸಿದನು.

ಕುಂತಿಯೂ ಸಹ ಅರ್ಜುನನಿಂದ ಯದುಕುಲ ನಾಶದ ವೃತ್ತಾಂತ ವನ್ನು ಕೇಳಿ ಶ್ರೀ ಕೃಷ್ಣನಲ್ಲಿ ಮನಸ್ಸನ್ನಿರಿಸಿ ಭಕ್ತಿಯ ಆಧಿಕ್ಯದಿಂದ ಸಂಸಾರ ಕಾರ್ಯಗಳಲ್ಲಿ ಆಸಕ್ತಿಯನ್ನು ತೊರೆದಳು. ಜನ್ಮ ಮರಣ ರಹಿತನಾದ ಕೃಷ್ಣ ಪರಮಾತ್ಮನು ಮುಳ್ಳಿನಿಂದ ಮುಳ್ಳನ್ನು ತೆಗೆದು ಹಾಕುವಂತೆ ಯಾವ ಯಾದವ ದೇಹದಿಂದ ಯಾದವರನ್ನು ಮುಗಿಸಿಬಿಟ್ಟನೋ (ಯಾದವ ಕೃಷ್ಣದೇಹವೂ ಯಾದವ ಕ್ಷತ್ರಿಯರದೇಹವೂ)ಆತನಿಗೆ ಒಂದೇ ರೀತಿಯಾಗಿರುವುವು. ನಾಟಕ ದಲ್ಲಿನ ವೇಷಧಾರಿಯು ಸಂದರ್ಭಕ್ಕೆ ತಕ್ಕಂತೆ ಅನೇಕ ವೇಷಗಳನ್ನು ಹಾಕಿ ಅವುಗಳನ್ನು ತ್ಯಾಗಮಾಡುವಂತೆ ಮತ್ಸ್ಯ ಮುಂತಾದ ಅನೇಕ ದೇಹಗಳನ್ನು ಧಾರಣೆಮಾಡಿ ಭೂಭಾರಹರಣ ಕಾರ್ಯವು ಮುಗಿದ ನಂತರ ಅವುಗಳನ್ನೆಲ್ಲಾ ತ್ಯಾಗಮಾಡಿದಂತೆ ಶ್ರೀಕೃಷ್ಣನು ಭೂಭಾರಹರಣೆಮಾಡಿ ಈ ದೇಹವನ್ನು ತ್ಯಾಗಮಾಡಿದನು. ಪುಣ್ಯಶ್ಲೋಕನಾದ ಉತ್ತಮ ಗುಣಯುಕ್ತನಾದ ಶ್ರೀಕೃಷ್ಣನು ಯಾವದಿನ ತನ್ನ ನರದೇಹವನ್ನು ತ್ಯಾಗಮಾಡಿದನೋ ಆ ದಿನವೇ ಅವಿವೇಕಿಗಳನ್ನು ಮೋಹಗೊಳಿಸುವ ಕಲಿಯುಗದ ಅಧಿಕಾರವು ಜಗತ್ತಿನಲ್ಲಿ ಪ್ರಾರಂಭವಾಗಿಬಿಟ್ಟಿತು. ಧರ್ಮಜನ ರಾಜ್ಯದಲ್ಲಿ ಕಲಿಯ ಅಧಿಕಾರವು ಬಂದು ದನ್ನು ತಿಳಿದೊಡನೆಯೇ ಮನೆಮನೆಯಲ್ಲಿ ಗ್ರಾಮಗ್ರಾಮದಲ್ಲಿ ಪುರಪುರಗಳಲ್ಲಿ ಲೋಭ, ಸುಳ್ಳು, ಕುಟಿಲ, ಮೋಸ, ಹಿಂಸೆ, ಮುಂತಾದ ಅಧರ್ಮಚಕ್ರವು

ವಿಸ್ತರಿಸುತ್ತಿರುವುದನ್ನು ನೋಡಿದೊಡನೆಯೇ ಸ್ವರ್ಗಕ್ಕೆ ಪ್ರಯಾಣಮಾಡುವ ದೃಷ್ಟಿಯಿಂದ † ಪ್ರಾಜಾಪತ್ಯಯಜ್ಞಕ್ಕೆ ತಕ್ಕ ವೇಷವನ್ನು ಧಾರಣೆಮಾಡಿದನು. ನಂತರ ತನ್ನಂತೆಯೇ ಗುಣವಂತನಾದ ಮೊಮ್ಮಗನಾದ ಪರೀಕ್ಷಿತ್ ರಾಜನನ್ನು ಸಮುದ್ರದಿಂದ ಸುತ್ತುವರಿಯಲ್ಪಟ್ಟ ಸಮಸ್ತ ಭೂಮಂಡಲಕ್ಕೆ ರಾಜನನ್ನಾಗಿ ಹಸ್ತಿನಾವತಿಯಲ್ಲಿ ಪಟ್ಟಾಭಿಷೇಕ ಮಾಡಿದನು. ಅನಿರುದ್ಧನ ಮಗನಾದ ವಜ್ರನನ್ನು ಶೂರಸೇನದೇಶದ ರಾಜನನ್ನಾಗಿ ಮಥುರೆಯಲ್ಲಿ ಅಭಿಷೇಕ ಮಾಡಿದನು. ಪ್ರಾಜಾಪತ್ಯಯಜ್ಞದ ಅಂಗವಾಗಿ * ಅಗ್ನಿಯನ್ನು ಉಪಸಂಹಾರ ಮಾಡಿದನು. ಅಮೂಲ್ಯಗಳಾದ ವಸ್ತ್ರಾಭರಣಗಳನ್ನು ತ್ಯಾಗ ಮಾಡಿದನು. ಮಮತೆಯನ್ನು–ಅಹಂಕಾರವನ್ನು ತ್ಯಾಗಮಾಡಿ ವಿಷಯ ಬಂಧನವನ್ನು ಕತ್ತರಿಸಿದನು. ವಾಣಿಯನ್ನು ಮನಸ್ಸಿನಲ್ಲಿ ಲೀನಮಾಡಿ ಸಂಪೂರ್ಣ ಮೌನವನ್ನು ಧಾರಣೆ ಮಾಡಿದನು. ಮನಸ್ಸನ್ನು ಆಕರ್ಷಣ ವಾಯುವಿನಲ್ಲಿ (ಉದಾನ) ನಿಲ್ಲಿಸಿ ಅಪಾನವನ್ನು ಅದರ ಕಾರ್ಯವಾದ ಉತ್ಸರ್ಗ (ಮಲತ್ಯಾಗ) ಮಾಡುವ ಶಕ್ತಿ ಸಹಿತವಾಗಿ ಮೃತ್ಯುವಿನಲ್ಲಿಯೂ ಆಮೃತ್ಯುವನ್ನು ಪಂಚಭೂತ ರೂಪವಾದ ದೇಹದಲ್ಲಿಯೂ ಲೀನಮಾಡಿದನು. ಅಂದರೆ ಮೃತ್ಯುವು ಈ ಶರೀರಕ್ಕೆ ಸರಿ ಎಂಬ ಭಾವವನ್ನು ದೃಢಪಡಿಸಿದನು. ಈ ಶರೀರವನ್ನು ಮಾಯೆಯ ಗುಣಗಳಾದ–ಸತ್ವ, ರಜಸ್ಸು, ತಮಸ್ಸುಗಳಲ್ಲಿ ಅರ್ಪಿಸಿದನು. ಮಾಯೆಯ ಗುಣಗಳನ್ನು ಮಾಯೆಯಲ್ಲಿ ಅರ್ಪಿಸಿದನು. ಆ ಮಾಯೆಯನ್ನು ಆತ್ಮನಲ್ಲಿ ಅರ್ಪಣೆಮಾಡಿ, ಮುನಿ ಭಾವವನ್ನು ಧಾರಣೆ ಮಾಡಿದನು. ನಂತರ ಅವಿನಾಶಿಯಾದ ಆತ್ಮನನ್ನು (ತನ್ನನ್ನು) ಪರಮಾತ್ಮನಲ್ಲಿ ಲೀನಮಾಡಿ ತನ್ನನ್ನು ಬ್ರಹ್ಮರೂಪವಾಗಿ ಅನುಭವಮಾಡಲಾರಂಭಿಸಿದನು. ಸಾಮಾನ್ಯವಾದೊಂದು ನಾರುವಸ್ತ್ರವನ್ನು ಉಟ್ಟು ಆಹಾರ ತ್ಯಾಗಮಾಡಿ ಕೇಶ ತ್ಯಾಗಮಾಡಿ ಪಿಶಾಚಿಹಿಡಿದ ವಸ್ತುವಿನಂತೆ ಮೌನಾವಸ್ಥೆಯಲ್ಲಿ ನಿಂತುಬಿಟ್ಟನು.

---

† ಜ್ಞಾನಪೂರ್ವಕವಾಗಿ ಬ್ರಹ್ಮನಲ್ಲಿ ಲೀನನಾಗಿ ದೇಹತ್ಯಾಗಮಾಡಲಿಚ್ಛಿಸುವುದು ಪ್ರಾಜಾಪತ್ಯಯಜ್ಞವು. ಇದರಿಂದ ಅಷ್ಟಾಂಗಯೋಗವೂ ನಿರ್ವಿಘ್ನವಾಗಿ ನಡೆಯುತ್ತಿದೆ.

* ಗೃಹಸ್ಥಾಶ್ರಮದ ಕರ್ತವ್ಯದಂತೆ ದಿನವೂ ಧಾರ್ಯಾಗ್ನಿಯನ್ನಿಟ್ಟಿದ್ದು ಮರಣಕಾಲದಲ್ಲಿ ಅದನ್ನು ವಿಧಿಪೂರ್ವಕವಾಗಿ ತ್ಯಾಗಮಾಡುವ ಕ್ರಮ.

ಹೀಗೆ ರಾಜ್ಯಸಂಪತ್ತುಗಳನ್ನೂ ಬಂಧು ಮಿತ್ರರನ್ನೂ ತ್ಯಾಗಮಾಡಿ ಕುರುಡ ಪುರುಷರಂತೆ ಯಾರನ್ನೂ ನೋಡದೇ ಯಾರೊಡನೆಯೂ ಮಾತನಾಡದೇ ಮಹಾತ್ಮರು ಪ್ರಯಾಣ ಮಾಡಿದ ಉತ್ತರದಿಕ್ಕನ್ನು ಕುರಿತು ಹೊರಟುಬಿಟ್ಟನು. ಧರ್ಮರಾಜನು ಸ್ವಸ್ವರೂಪದಲ್ಲಿ ಲೀನನಾಗಿ ಹೊರಟುದನ್ನೂ ಕಲಿಯಪ್ರಾಬಲ್ಯ ಹೆಚ್ಚಿದುದನ್ನೂ ನೋಡಿ ಅರ್ಜುನಾದಿ ಸೋದರರೂ ದೇಹತ್ಯಾಗದ ನಿಶ್ಚಯ ಮಾಡಿ ಪರಮಾತ್ಮನ ಚರಣಕಮಲಗಳನ್ನು ಧ್ಯಾನಮಾಡುತ್ತಾ, ಧರ್ಮರಾಜನನ್ನೇ ಅನುಸರಿಸಿ ಪುನಃ ಜನ್ಮಕ್ಕೆ ಹಿಂದಿರುಗಲಾರದಂತಹ ಸ್ಥಾನವನ್ನು ಕುರಿತು ಹೊರಟುಬಿಟ್ಟರು. ಹೀಗೆ ಪರಮಾತ್ಮ ಭಕ್ತಿಯಿಂದ ಶುದ್ಧ ಬುದ್ಧಿಯುಳ್ಳವರಾಗಿ ಅಶಾಶ್ವತವಿಷಯಾಭಿಲಾಷಿಗಳು ಹೊಂದಲಾಗದ ಆ ನಿತ್ಯಮೋಕ್ಷವನ್ನು ಹೊಂದಿದರು. ತೀರ್ಥಯಾತ್ರೆಗೆ ಹೋಗಿದ್ದ ವಿದುರನು, ಈ ವರ್ತಮಾನವನ್ನು ಕೇಳಿ ದೇಹತ್ಯಾಗಕ್ಕೆ ನಿಶ್ಚಯಮಾಡಿ, ಪ್ರಭಾಸ ತೀರ್ಥಕ್ಕೆ ಹೋಗಿ ಶ್ರೀಕೃಷ್ಣ ಪರಮಾತ್ಮನನ್ನು ಧ್ಯಾನಮಾಡುತ್ತಾ, ತನ್ನನ್ನು ಕರೆಯಲು ಬಂದಿದ್ದ ವಿಶ್ವೆಗಣಗಳೊಡನೆ ತನ್ನ ಲೋಕವನ್ನು (ಯಮಲೋಕವನ್ನು) ಸೇರಿದನು. ದ್ರೌಪದಿಯು ತನ್ನ ಪಂಚಪತಿಗಳು ಸ್ವರ್ಗಪ್ರಯಾಣ ಮಾಡಿದುದನ್ನು ನೋಡಿ, ತಾನೂ ಸಹಾ ವಾಸುದೇವನ ಚರಣಕಮಲವನ್ನೇ ಧ್ಯಾನಿಸುತ್ತಾ, ದೇಹತ್ಯಾಗಮಾಡಿದಳು.

## ಪಂಚಮ ಕಿರಣ

"ಯುಧಿಷ್ಠಿರನು ಪರಂಧಾಮಕ್ಕೆ ಹೋದನಂತರ ಪರೀಕ್ಷಿತ್‌ರಾಜನು ಶ್ರೇಷ್ಠರಾದ, ವಿದ್ವಾಂಸರಾದ, ಪಂಡಿತರ ಉಪದೇಶವನ್ನನುಸರಿಸಿ ರಾಜ್ಯಾಧಿಕಾರ ಮಾಡಲಾರಂಭಿಸಿದನು. ಆತನ ಜನ್ಮಕಾಲದಲ್ಲಿ, ಜ್ಯೋತಿಷ್ಕರು ಹೇಳಿದಂತಹ ಸದ್ಗುಣಗಳೆಲ್ಲಾ ಒಂದೊಂದಾಗಿ ಪ್ರಕಟವಾಗಲಾರಂಭಿಸಿದವು. ಉತ್ತರಮಹಾರಾಜನ ಮಗಳಾದ "ಇರಾವತಿ" ಎಂಬ ಸುಂದರಿಯಾದ ಕನ್ಯೆಯೊಡನೆ ವಿವಾಹವಾಯಿತು. ಜನಮೇಜಯನೇ ಮುಂತಾದ ನಾಲ್ವರು ಪುತ್ರರು ಉತ್ಪನ್ನರಾದರು. ಪರೀಕ್ಷಿತರಾಜನು ಗಂಗಾತಟದಲ್ಲಿ ಮೂರಾವೃತ್ತಿ ಅಶ್ವಮೇಧಯಾಗ ಮಾಡಿದನು. ಯಜ್ಞದಲ್ಲಿ ಶಾರದ್ವತ ಮುನಿಯು

(ಕೃಪಾಚಾರ್ಯ) ಸ್ವತಃ ಆಚಾರ್ಯನಾಗಿದ್ದನು. ದೇವತೆಗಳು ತಾವೇ ಸ್ವತಃ ಬಂದು ಹವಿರ್ಭಾಗ ತೆಗೆದುಕೊಳ್ಳುತ್ತಿದ್ದರು. ರಾಜನು ಒಂದಾವೃತ್ತಿ ದಿಗ್ವಿಜಯಕ್ಕೆ ಹೊರಟಾಗ ಶೂದ್ರನಾದ ಕಲಿಯು ರಾಜವೇಷ ಧಾರಣೆಮಾಡಿ, ಧರ್ಮರೂಪವಾದ ವೃಷಭವನ್ನೂ ಭೂರೂಪಳಾದ ಗೋವನ್ನೂ ಒದೆಯುತ್ತಿದ್ದುದನ್ನು ನೋಡಿ ಅವನನ್ನು ಬಲಪೂರ್ವಕವಾಗಿ ನಿಗ್ರಹಮಾಡಿದನು."

**ಶೌನಕ**–ಗೋವನ್ನು ಕಾಲಿನಿಂದ ಒದೆಯುವ ಆ ಶೂದ್ರನಾರು ? ಕಲಿಯನ್ನೇಕೆ ಪರೀಕ್ಷಿತನು ನಿಗ್ರಹಮಾಡಿದನು ? ಆ ಕಥೆಯನ್ನೆಲ್ಲಾ ನಮಗೆ ವಿಸ್ತಾರವಾಗಿ ಹೇಳಿರಿ. ಈ ಕಥೆಯಲ್ಲಿ ಶ್ರೀ ಮಹಾವಿಷ್ಣುವಿನ ಚರಣಕಮಲ ಮಕರಂದವನ್ನು ಪಾನಮಾಡುವ ಭಕ್ತರಿಗೆ ಭಕ್ತಿಯನ್ನು ವೃದ್ಧಿಮಾಡುವ ವಿಷಯಗಳನ್ನು ಮಾತ್ರ ಚೆನ್ನಾಗಿ ವಿಸ್ತರಿಸಿ ಹೇಳಿರಿ. ಅದಲ್ಲದೇ ಉಳಿದ ವಿಷಯಗಳನ್ನು ಹೇಳಿ ಕೇಳುವವರಿಂದೇನೂ ಪ್ರಯೋಜನವಿಲ್ಲ. ಆಯುಸ್ಸು ವ್ಯರ್ಥವಾಗಿ ಹೋಗುವುದು. ಎಲೈ ಪೂಜ್ಯನೆ! ಅಲ್ಪಾಯುಗಳಾದ ಮನುಷ್ಯರಿಗೆ–ಮೋಕ್ಷೇಚ್ಛೆಯು ಇದ್ದು ಸರಿಯಾದ ಮಾರ್ಗವು ಸಿಕ್ಕದಿರುವ ಸಾಧಕರಿಗೆ, ಶಾಶ್ವತ ಅಮೃತಪದರೂಪವಾದ ಮೋಕ್ಷವು ಲಭಿಸಬೇಕೆಂದೇ ಈ ಜ್ಞಾನಯಜ್ಞವನ್ನು ನಾವು ಪ್ರಾರಂಭಿಸಿದ್ದೇವೆ. ಇದರಲ್ಲಿ ನಾವು ಮೃತ್ಯುವನ್ನೇ ಪಶುರೂಪವಾಗಿ ಬಲಿ ಕೊಡುತ್ತಿದ್ದೇವೆ. ಶ್ರೀ ಹರಿಯ ಲೀಲಾರೂಪವಾದ ಅಮೃತವಾಕ್ಯಗಳನ್ನು ಎಲ್ಲರೂ ಪಾನಮಾಡಲೇಬೇಕು. ಇದಲ್ಲದೇ ಜೀವನವು ನಿರರ್ಥಕವೇ ಸರಿ. ಯಾವನು ಶ್ರೀ ಹರಿಯ ಗುಣಾನುವಾದವನ್ನು ಕೇಳುವುದಿಲ್ಲವೋ, ಮನನ ಮಾಡುವುದಿಲ್ಲವೋ, ಆತನು ಅವಿವೇಕಿಯೇ ಸರಿ. ಅಲ್ಪಾಯುವಾಗಿ ರಾತ್ರಿಯನ್ನು ನಿದ್ರೆಯಲ್ಲಿಯೂ ಹಗಲನ್ನು ವ್ಯರ್ಥವಾದ ಸಂಸಾರ ಕಾರ್ಯಗಳಲ್ಲಿಯೂ ಕಳೆಯುತ್ತಾನೆಯಲ್ಲವೆ ?

ಸೂತರು ಹೇಳತೊಡಗಿದರು—

ರಾಜಾ ಪರೀಕ್ಷಿತನು ಹಸ್ತಿನಾವತಿಯಲ್ಲಿ ರಾಜ್ಯಭಾರ ಮಾಡುತ್ತಿರುವಾಗ ಒಂದು ದಿನ ತನ್ನ ರಾಜ್ಯದಲ್ಲಿ ಕಲಿಯು ಪ್ರವೇಶ ಮಾಡಿದ ವಿಷಯವನ್ನು ಕೇಳಿದನು. ಆ ಕಲಿಯನ್ನು ಶಿಕ್ಷಿಸುವುದಕ್ಕಾಗಿ ಧನುರ್ಬಾಣಗಳನ್ನು ಧಾರಣೆಮಾಡಿ, ಸುಂದರವಾದ ಶ್ಯಾಮವರ್ಣದ ಕುದುರೆಗಳಿಂದಲೂ ಸಿಂಹ

ಹೀಗೆ ರಾಜ್ಯಸಂಪತ್ತುಗಳನ್ನೂ ಬಂಧು ಮಿತ್ರರನ್ನೂ ತ್ಯಾಗಮಾಡಿ ಕುರುಡ ರಂತೆ ಯಾರನ್ನೂ ನೋಡದೇ ಯಾರೊಡನೆಯೂ ಮಾತನಾಡದೇ ಮಹಾತ್ಮರು ಪ್ರಯಾಣ ಮಾಡಿದ ಉತ್ತರದಿಕ್ಕನ್ನು ಕುರಿತು ಹೊರಟುಬಿಟ್ಟನು. ಧರ್ಮರಾಜನು ಸ್ವಸ್ವರೂಪದಲ್ಲಿ ಲೀನನಾಗಿ ಹೊರಟುದನ್ನೂ ಕಲಿಯಪ್ರಾಬಲ್ಯ ಹೆಚ್ಚಿದುದನ್ನೂ ನೋಡಿ ಅರ್ಜುನಾದಿ ಸೋದರರೂ ದೇಹತ್ಯಾಗದ ನಿಶ್ಚಯ ಮಾಡಿ ಪರಮಾತ್ಮನ ಚರಣಕಮಲಗಳನ್ನು ಧ್ಯಾನಮಾಡುತ್ತಾ, ಧರ್ಮರಾಜನನ್ನೇ ಅನುಸರಿಸಿ ಪುನಃ ಜನ್ಮಕ್ಕೆ ಹಿಂದಿರುಗಲಾರದಂತಹ ಸ್ಥಾನವನ್ನು ಕುರಿತು ಹೊರಟುಬಿಟ್ಟರು. ಹೀಗೆ ಪರಮಾತ್ಮ ಭಕ್ತಿಯಿಂದ ಶುದ್ಧ ಬುದ್ಧಿಯುಳ್ಳವರಾಗಿ ಅಶಾಶ್ವತವಿಷಯಾಭಿಲಾಷಿಗಳು ಹೊಂದಲಾಗದ ಆ ನಿತ್ಯಮೋಕ್ಷವನ್ನು ಹೊಂದಿದರು. ತೀರ್ಥಯಾತ್ರೆಗೆ ಹೋಗಿದ್ದ ವಿದುರನು, ಈ ವರ್ತಮಾನವನ್ನು ಕೇಳಿ ದೇಹತ್ಯಾಗಕ್ಕೆ ನಿಶ್ಚಯಮಾಡಿ, ಪ್ರಭಾಸ ತೀರ್ಥಕ್ಕೆ ಹೋಗಿ ಶ್ರೀಕೃಷ್ಣ ಪರಮಾತ್ಮನನ್ನು ಧ್ಯಾನಮಾಡುತ್ತಾ, ತನ್ನನ್ನು ಕರೆಯಲು ಬಂದಿದ್ದ ವಿಶ್ವ ಗಣಗಳೊಡನೆ ತನ್ನ ಲೋಕವನ್ನು (ಯಮಲೋಕವನ್ನು) ಸೇರಿದನು. ದ್ರೌಪದಿಯು ತನ್ನ ಪಂಚಪತಿಗಳು ಸ್ವರ್ಗಪ್ರಯಾಣ ಮಾಡಿದುದನ್ನು ನೋಡಿ, ತಾನೂ ಸಹಾ ವಾಸುದೇವನ ಚರಣಕಮಲವನ್ನೇ ಧ್ಯಾನಿಸುತ್ತಾ, ದೇಹತ್ಯಾಗಮಾಡಿದಳು.

## ಪಂಚಮ ಕಿರಣ

"ಯುಧಿಷ್ಠಿರನು ಪರಂಧಾಮಕ್ಕೆ ಹೋದನಂತರ ಪರೀಕ್ಷಿತ್ ರಾಜನು ಶ್ರೇಷ್ಠರಾದ, ವಿದ್ವಾಂಸರಾದ, ಪಂಡಿತರ ಉಪದೇಶವನ್ನನುಸರಿಸಿ ರಾಜ್ಯಾಧಿಕಾರ ಮಾಡಲಾರಂಭಿಸಿದನು. ಆತನ ಜನ್ಮಕಾಲದಲ್ಲಿ, ಜ್ಯೋತಿಷ್ಕರು ಹೇಳಿದಂತಹ ಸದ್ಗುಣಗಳೆಲ್ಲಾ ಒಂದೊಂದಾಗಿ ಪ್ರಕಟವಾಗಲಾರಂಭಿಸಿದವು. ಉತ್ತರಮಹಾರಾಜನ ಮಗಳಾದ "ಇರಾವತಿ" ಎಂಬ ಸುಂದರಿಯಾದ ಕನ್ಯೆಯೊಡನೆ ವಿವಾಹವಾಯಿತು. ಜನಮೇಜಯನೇ ಮುಂತಾದ ನಾಲ್ವರು ಪುತ್ರರು ಉತ್ಪನ್ನರಾದರು. ಪರೀಕ್ಷಿತರಾಜನು ಗಂಗಾತಟದಲ್ಲಿ ಮೂರಾವೃತ್ತಿ ಅಶ್ವಮೇಧಯಾಗ ಮಾಡಿದನು. ಯಜ್ಞದಲ್ಲಿ ಶಾರದ್ವತ ಮುನಿಯು

ವೆಯೋ ? ಪತಿಯು ರಕ್ಷಿಸದಿರುವ ಪತ್ನಿಗಾಗಿ, ಮಗನು ರಕ್ಷಿಸದಿರುವ ತಾಯಿ ಗಾಗಿ ಯೋಚಿಸುತ್ತಿರುವೆಯೋ ? ಅಥವಾ ತಂದೆಯು ಕಾಪಾಡದಿರುವ ಬಾಲಕ ರಿಗಾಗಿ ದುಃಖಿಸುತ್ತಿರುವೆಯೋ ? ತಂದೆಯೂ, ಗಂಡನೂ, ಚಾಂಡಾಲರಂತೆ ದುರಾಚಾರಿಗಳಾಗಿ, ಮಕ್ಕಳನ್ನೂ ಹೆಂಡತಿಯನ್ನೂ ನಿರ್ಲಕ್ಷಿಸುತ್ತಿರುವ ಸಂಸಾರ ಗಳಿಗಾಗಿ ಅಳುತ್ತಿರುವೆಯೋ ? ವಿದ್ಯಾವಂತರಾಗಿ, ಸುಶಿಕ್ಷಿತರಾಗಿರುವವರು ದುಷ್ಕರ್ಮಗಳನ್ನು ಮಾಡುತ್ತಾ ದುಷ್ಟರಾಗಿರುವುದಕ್ಕಾಗಿ, ಇಲ್ಲವೇ ಬ್ರಾಹ್ಮಣರು ಸ್ವಧರ್ಮವನ್ನು ಬಿಟ್ಟು ಹೊಟ್ಟೆಯ ಪಾಡಿಗಾಗಿ, ಕರ್ಮಚಾರಿ, ಸೈನಿಕ, ಸೇವಾ ವೃತ್ತಿಯನ್ನು ಮಾಡುತ್ತಿರುವುದಕ್ಕಾಗಿ ಚಿಂತಿಸುವೆಯೋ ? ರಾಜರು ಕಲಿಯುಗ ಧರ್ಮಗಳಲ್ಲಿ ಲಿಪ್ತರಾಗಿ ತಮ್ಮತಮ್ಮ ರಾಜ್ಯಗಳಲ್ಲಿ ಕಂದಾಯ, ಕಪ್ಪಗಳನ್ನು ಹೆಚ್ಚಿಸುವ ದುರಾಶೆಯಿಂದ ಪ್ರಜೆಗಳಿಗೆ ಕೊಡಬಾರದ ಕಷ್ಟಗಳನ್ನು ಕೊಡು ತ್ತಿರುವುದಕ್ಕಾಗಿ ಚಿಂತಿಸುವೆಯೋ ? ಅವರು ಹಗಲೂ ರಾತ್ರಿಯೂ, ಸ್ನಾನ, ಪಾನ, ಭೋಜನ, ಮೈಥುನ, ಮದ್ಯ, ಮಾಂಸ, ಜೂಜು, ಮುಂತಾದ ಇಂದ್ರಿಯಲೋಲುಪತೆಗಾಗಿ ಬೇಕಾದ ಧನ ಸಂಗ್ರಹಕ್ಕಾಗಿ ಪ್ರಜೆಗಳನ್ನು ಚಿತ್ರಹಿಂಸೆಗೊಳಿಸುತ್ತಾ, ಸ್ವಾರ್ಥಸಾಧನೆ ಮಾಡಿಕೊಳ್ಳುತ್ತಿರುವುದಕ್ಕಾಗಿ ಯೋಚಿಸುವೆಯೋ ? ಭೂಭಾರ ಹರಣಕ್ಕಾಗಿ ಅವತರಿಸಿದ ಶ್ರೀಕೃಷ್ಣ ಪರಮಾತ್ಮನು ಪರಂಧಾಮಕ್ಕೆ ಹೋದನಂತರ ಆತನ ಮೋಕ್ಷಪ್ರದಗಳಾದ ಲೀಲೆಗಳನ್ನು ಜ್ಞಾಪಿಸಿಕೊಳ್ಳುತ್ತಾ ಪುನಃ ಆತನ ದರ್ಶನವಾಗದಿರುವುದಕ್ಕಾಗಿ ಚಿಂತಿಸುತ್ತಿರುವೆಯೋ ? ಎಲೈ ! ವಸುಂಧರೆ ! ನಿನಗೆ ದುಃಖಕ್ಕೆ ಕಾರಣಗಳು ಅಪರಿಮಿತವಾಗಿ ನನಗೆ ತೋರುತ್ತಿವೆ. ಅವುಗಳಲ್ಲಾವುದು ನಿನ್ನ ಈಗಿನ ಸಂಕಟಕ್ಕೆ ಕಾರಣವಾಗಿದೆ ? ಅಥವಾ ಪರಮ ಬಲಿಯಾದ ಕಾಲನು ನಿನ್ನ ಸೌಭಾಗ್ಯವನ್ನೆಲ್ಲಾ ನಷ್ಟಮಾಡಿದುದಕ್ಕಾಗಿ ವ್ಯಸನ ಪಡುತ್ತಿರುವಿಯೋ ? ತಿಳಿಸು" ಎಂದು ಕೇಳಿದನು.

ಗೋರೂಪಿಣಿಯಾದ ಭೂಮಿಯು ಹೀಗೆ ಉತ್ತರ ಕೊಟ್ಟಳು.

'ಎಲೈ ! ಧರ್ಮದೇವನೆ ! ನನಗೆ ದುಃಖವಾಗುವುದಕ್ಕೆ ಇರುವ ಕಾರಣ ಗಳೆಲ್ಲಾ ನಿನಗೆ ಗೊತ್ತೇ ಇವೆ. ನೀನು ನಾಲ್ಕು ಚರಣಗಳಿಂದ ಕೂಡಿ, ಯಾವ ಸಂಪೂರ್ಣಗುಣಗಳಿಂದೊಡಗೂಡಿ, ಲೋಕ ಕಲ್ಯಾಣಮಾಡುತ್ತಿದ್ದೆಯೋ,

ಅಂತಹ ಸತ್ಯ, ಶೌಚ, ದಯಾ, ಶಾಂತಿ, ಕ್ಷಾಂತಿ, ತ್ಯಾಗ, ಸಂತೋಷ ಆರ್ಜವ, ಶಮ, ತಪಸ್ಸು, ಸಮದೃಷ್ಟಿ, ತಿತಿಕ್ಷಾ, ಉಪರತಿ, ಶ್ರುತ, ಜ್ಞಾನ, ವೈರಾಗ್ಯ, ಐಶ್ವರ್ಯ, ಶೂರತ್ವ, ತೇಜಸ್ಸು, ಬಲ, ಸ್ಮೃತಿ, ಸ್ವತಂತ್ರತೆ, ಕೌಶಲ, ಕಾಂತಿ, ಧೈರ್ಯ, ಕೋಮಲತೆ, ಪ್ರಗಲ್ಭತೆ, ಆಶ್ರಯದಾನ, ಶೀಲ, ಸಾಹಸ, ಓಜಸ್ಸು, ವಿಕ್ರಮ, ಭಗ, ಗಂಭೀರತ್ವ, ಸ್ಥಿರತೆ, ಆಸ್ತಿಕತೆ, ಮಾನ, ಅಹಂಕಾರತ್ಯಾಗ ಮುಂತಾದ ಮಹಾಗುಣಗಳಿಂದ ನಿತ್ಯಯುಕ್ತನಾಗಿರುವ, ಶ್ರೀಪತಿಯಾದ, ದೇವದೇವನು, ಪರಂಧಾಮಕ್ಕೆ ಪ್ರಯಾಣಮಾಡಿದ ನಂತರ, ಕಲಿಯುಗದಿಂದ ಪೀಡಿತರಾಗಿರುವ, ಈ ಭೂಲೋಕದಲ್ಲಿನ, ಮನುಷ್ಯರ ಮುಂದಿನ ಅವಸ್ಥೆಯು ಏನಾಗುವುದು, ಎಂದು ಯೋಚಿಸುತ್ತಿದ್ದೇನೆ. ದೇವ ಶ್ರೇಷ್ಠನಾದ ನಿನ್ನ, ಮತ್ತು ದೇವ, ಪಿತೃ, ಋಷಿ, ಸಾಧು, ಮತ್ತು ಎಲ್ಲಾ ವರ್ಣಾಶ್ರಮಗಳ ಮನುಷ್ಯರು, ಇವರುಗಳ ದುರವಸ್ಥೆಯನ್ನು ನೋಡಿ, ನನ್ನ ಮುಂದಿನ ಗತಿಯು ಏನಾಗುವುದೋ, ಎಂದು ಯೋಚಿಸುತ್ತಿದ್ದೇನೆ.

ಯಾರ ಕಟಾಕ್ಷವು ಬ್ರಹ್ಮಾದಿಗಳಿಗೂ ದುರ್ಲಭವಾದುದೋ ಅಂತಹ ಲಕ್ಷ್ಮೀದೇವಿಯು ನಿತ್ಯವೂ ಸೇವಿಸುತ್ತಿರುವ ಧ್ವಜ, ವಜ್ರ, ಕಮಲ, ಅಂಕುಶ, ಯವ, ಮುಂತಾದ ಶುಭ ಚಿಹ್ನೆಗಳುಳ್ಳ ಪಾದಪದ್ಮಗಳ ಸ್ಪರ್ಶದಿಂದ ನನಗೆ ಉಂಟಾಗಿದ್ದ ಅಭಿಮಾನವನ್ನು ತಗ್ಗಿಸಿ, ನನ್ನನ್ನು ನಿಸ್ತೇಜಸ್ಕಳನ್ನು ಮಾಡಿ, ದೇವನು ತನ್ನ ಭೌತಿಕ ದೇಹವನ್ನು ತ್ಯಜಿಸಿ ಬಿಟ್ಟನು.

'ಎಲೈ ಧರ್ಮನೆ! ರಾಕ್ಷಸರಂತೆ ದುಷ್ಟರಾದ ರಾಜರುಗಳಿಂದ ನನಗೆ ಸಹಿಸಲಾರದಷ್ಟು ಭಾರವಾಗಿದ್ದುದನ್ನು ನೋಡಿ ಅವರನ್ನು—ಅವರ ಅಸಂಖ್ಯ ಅಕ್ಷೋಹಿಣೀ ಸೈನ್ಯಗಳನ್ನು ನಾಶಮಾಡಿ ಮೂರು ಕಾಲುಗಳು ಇಲ್ಲದೇ ಕುಂಟುತ್ತಿದ್ದ ನಿನ್ನ ಉದ್ಧಾರಕ್ಕಾಗಿ ಯದುವಂಶದಲ್ಲಿ ಅವತಾರ ತೆಗೆದುಕೊಂಡು ನಾಲ್ಕು ಪಾದಗಳ ಮೇಲೆಯೂ ನಿನ್ನನ್ನು ನಿಲ್ಲಿಸಿ ಸತ್ಯಭಾಮಾದಿ ಮಾನಿನಿಯರ ಮಾನ ಮದಗಳನ್ನು ತನ್ನ ವಿಚಿತ್ರಲೀಲೆಗಳಿಂದ ಹರಣ ಮಾಡಿದ ಯಾವ ದೇವನ ಚರಣಸ್ಪರ್ಶದಿಂದಲೇ ನನಗೆ ರೋಮಾಂಚವಾಗುತ್ತಿದ್ದಿತೋ ಅಂತಹ ಮಂದಸ್ಮಿತಯುಕ್ತ ಮಧುರ ವಾಣಿಯಿಂದೊಡಗೂಡಿದ ಮನ

ಮೋಹನ ಮೂರ್ತಿಯ ವಿರಹದಿಂದ ನಾನು ಬಹು ದುಃಖಿತಳಾಗಿದ್ದೇನೆ"

ಎಂದು ಪರಸ್ಪರ ಮಾತನಾಡಿಕೊಳ್ಳುತ್ತಿರುವಾಗ ಕಿರೀಟಕುಂಡಲಾದಿ ಗಳಿಂದ ರಾಜವೇಷಧಾರಿಯಾಗಿರುವ ಶೂದ್ರನೊಬ್ಬನು ಒಂದೇ ಕಾಲಿನಿಂದ ನಿಂತಿರುವ ಆ ಶುಭ್ರ ವರ್ಣದ ವೃಷಭವನ್ನು ಕಾಲಿನಿಂದ ಒದೆಯುತ್ತಾ ಕೋಲಿನಿಂದ ಹೊಡೆಯುತ್ತಿದ್ದನು. ಆ ವೃಷಭವು ಭಯದಿಂದ ಬಾರಿಬಾರಿಗೂ ಮೂತ್ರತ್ಯಾಗ ಮಾಡುತ್ತಿತ್ತು. ಆ ಹಸುವು ಕರುವಿಲ್ಲದೇ ದೀನಳಾಗಿ ತಲೆ ತಗ್ಗಿಸಿಕೊಂಡು ಹುಲ್ಲಿಗಾಗಿ ಬಾಯಿ ಬಾಯಿ ಬಿಡುತ್ತಿರುವಾಗ ಆ ಶೂದ್ರನು ಅವನ್ನು ನಿಷ್ಕರುಣೆಯಿಂದ ಹೊಡೆಯಲಾರಂಭಿಸಿದನು. ರಾಜಾ ಪರೀಕ್ಷಿತನು ಇದನ್ನು ನೋಡುತ್ತಲೇ ಕ್ರೋಧದಿಂದ ಕಿಡಿಕಿಡಿಯಾಗಿಬಿಟ್ಟನು. ಬಿಲ್ಲಿಗೆ ಬಾಣ ವನ್ನು ಏರಿಸಿ ಮೇಘದಂತಹ ಗಂಭೀರ ಗರ್ಜನೆಯಿಂದ ಹೇಳಿದನು:—

"ಎಲೈ! ನೀನು ಯಾರು ? ನಾಟಕದಲ್ಲಿನ ವೇಷಧಾರಿಯಂತೆ ರಾಜ ವೇಷವನ್ನು ಧರಿಸಿ ನನ್ನ ರಾಜ್ಯದಲ್ಲಿ ದುರ್ಬಲರನ್ನು ಹಿಂಸಿಸುತ್ತಿರುವೆ! ನೀನು ದ್ವಿಜನೇನೂ ಖಂಡಿತವಾಗಿಯೂ ಅಲ್ಲ. ನಿನ್ನ ಕರ್ಮವೇ ಇದನ್ನು ತೋರಿಸುತ್ತದೆ. ಕೃಷ್ಣಾರ್ಜುನರು ಪರಂಧಾಮಕ್ಕೆ ಹೋದನಂತರ ನಿರ್ಜನ ಪ್ರದೇಶದಲ್ಲಿ ನಿರಪರಾಧಿಗಳನ್ನು ಹಿಂಸಿಸುತ್ತಿರುವ ನೀನು ನಿಜವಾಗಿಯೂ ಅಪರಾಧಿಯೇ ಸರಿ. ನಿನಗೆ ಪ್ರಾಣದಂಡನೆಯೇ ಯೋಗ್ಯವಾದ ಶಿಕ್ಷೆಯು. ಎಲೈ! ಮೃಣಾಳಧವಳ ರೂಪಧಾರಿಯಾದ ವೃಷಭವೇ! ನೀನಾರು? ಮೂರುಕಾಲುಗಳೂ ಕತ್ತರಿಸಿ ಹೋಗಿ ಒಂದೇ ಕಾಲಿನ ಮೇಲೆಯೇ ನಿಂತುಕೊಂಡಿರುವೆ! ನೀನಾರೋ ವೃಷಭ ವೇಷಧಾರಿಯಾದ ದೇವತೆ ಇರಬೇಕೆಂದು ತೋರುತ್ತದೆ. ಕೌರವ ವಂಶದ ಕ್ಷತ್ರಿಯಕುಲದಲ್ಲಿ ಹುಟ್ಟಿದ ರಾಜನಿರುವಾಗ ನೀನೇಕೆ ಭಯಪಡಬೇಕು! ಎಲೈ ಸುರಭಿಪುತ್ರನೆ, ಎಲೈ ಗೋಮಾತೆಯೆ, ನೀವಿನ್ನು ಈ ಶೂದ್ರನಿಂದ ಭಯಪಡಬೇಕಾಗಿಲ್ಲ. ಯಾವ ಮದೋನ್ಮತ್ತ ರಾಜನ ರಾಜ್ಯದಲ್ಲಿ ದುಷ್ಟರು ಸಾಧುಗಳನ್ನು ಪೀಡಿಸುತ್ತಾರೆಯೋ ಅಂತಹ ರಾಜರ ಕೀರ್ತಿ, ಆಯುಸ್ಸು, ಐಶ್ವರ್ಯ, ಪರಲೋಕವೂ ಸಹ ನಷ್ಟವಾಗುತ್ತದೆ. ಅನಾಥ ರಕ್ಷಣೆಯೇ ರಾಜರ ಮುಖ್ಯ ಧರ್ಮವು. ಆದುದರಿಂದೀ ದುಷ್ಟನನ್ನು ಖಂಡಿತವಾಗಿಯೂ ಕೊಂದು

ಹಾಕುತ್ತೇನೆ. ನೀನಾರು ? ನಿನಗಾರು ಈರೀತಿ ಮೂರು ಕಾಲುಗಳನ್ನು ಕಡಿದು ಹಾಕಿರುವವರು ? ಅವರಾರಾದರೂ ಇರಲಿ ಅವರನ್ನು ಶಿಕ್ಷಿಸುವುದು ನನ್ನಧರ್ಮ”

ವೃಷಭವು ಹೇಳಿತು—

ಎಲೈ ರಾಜನೆ ! ನಾನು ಧರ್ಮಪುರುಷನು ! ನನಗೆ ತಪ, ಶೌಚ, ದಯಾ, ಸತ್ಯಗಳೆಂಬುವು ನಾಲ್ಕು ಕಾಲುಗಳು. ಕೃತಯುಗದಲ್ಲಿ ಈ ನಾಲ್ಕೂ ಒಂದೇ ಸಮನಾಗಿ ವೃದ್ಧಿ ಹೊಂದಿರುತ್ತವೆ. ಮಿಕ್ಕ ಯುಗಗಳಲ್ಲಿ ಒಂದೊಂದು ಶಕ್ತಿಯು ಕಡಿಮೆ ಆಗುತ್ತದೆ. ಈಗ ಕಲಿಯ ಅಧಿಕಾರ ಬಂದಿದೆ. ಸತ್ಯಸ್ವರೂಪ ನಾದ ಪರಮಾತ್ಮನೊಬ್ಬನೇ ಕಲಿಯುಗದಲ್ಲಿ ಉಳಿದಿರುವುದು. ತಪಸ್ಸು, ಶೌಚ, ದಯೆಗಳು, ಸಂಪೂರ್ಣವಾಗಿ ಕಾಣದಂತೆಯೇ ಆಗಿಬಿಟ್ಟಿವೆ. ಆದುದ ರಿಂದಲೇ ನಾನು ಒಂದೇ ಕಾಲಮೇಲೆ ನಿಂತಿರುವುದು. ನನಗೆ ಯಾರು ಕಷ್ಟ ಕೊಡುತ್ತಿರುವವರು ಎಂದು ಕೇಳುತ್ತಿರುವೆಯಲ್ಲವೆ ? ಜೀವರುಗಳಿಗೆ ಯಾರು ಕಷ್ಟಕೊಡುತ್ತಿದ್ದಾರೆ ಎಂದು ಹೇಳುವುದುಕಷ್ಟ. ಅನೇಕ ಶಾಸ್ತ್ರಗಳು ಅನೇಕ ಮತಗಳು ಸುಖದುಃಖಗಳಿಗೆ ವಿವಿಧ ಕಾರಣಗಳನ್ನು ಗುರ್ತಿಸುತ್ತವೆ. ನಾಸ್ತಿಕರು ಆತ್ಮವೇ ಸುಖದುಃಖಗಳಿಗೆ ಕಾರಣವೆಂದೂ, ದೈವಜ್ಞರು ದೈವ ವೆಂದೂ, ಮೀಮಾಂಸಕರು ಕರ್ಮವೆಂದೂ, ಪ್ರಕೃತಿವಾದಿಗಳು ಪ್ರಕೃತಿ ಎಂದೂ, ಕೆಲವರು ಈಶ್ವರನೆಂದೂ, ಇನ್ನು ಕೆಲವರು ಮಹಾತ್ಮರು ಆ ವಸ್ತುವು ಮನಸ್ಸಿನಿಂದ ತಿಳಿಯಲಾಗದ ಅನಿರ್ದೇಶ್ಯ ವಸ್ತುವೆಂದೂ ತಿಳಿಯುತ್ತಾರೆ. ಆದುದರಿಂದ ನೀನೇ ವಿಚಾರಮಾಡಿ ತಿಳಿದುಕೋ.

ರಾಜ-ಓಹೋ ! ನೀನು ಧರ್ಮಪುರುಷನು ! ಧರ್ಮಾಧರ್ಮಗಳು ಬಹು ಸೂಕ್ಷ್ಮ ವೆಂದು ಸೂಚಿಸುತ್ತೀಯೆ. ಪರಮಾತ್ಮನ ಮಾಯೆಯು ಮನಸ್ಸಿನಿಂದಲಾಗಲೀ ವಾಣಿಯಿಂದಲಾಗಲೀ ಗುರ್ತಿಸಲಾಗಲೆಂದೂ ಸೂಚಿಸುತ್ತೀಯೆ. ಸತ್ಯಯುಗ ದಲ್ಲಿ ನೀನು ಬಹು ಸುಖವಾಗಿದ್ದೆಯಲ್ಲವೆ ! ತಾಯಿ ! ಗೋಮಾತೆ ! ದುಷ್ಟ ನಿಗ್ರಹಮಾಡಿ ಧರ್ಮೋದ್ಧಾರವನ್ನು ಮಾಡಿದ ದೇವನ ಚರಣ ಕಮಲಗಳಿಂದ ಅಲಂಕೃತಳಾಗಿದ್ದ ನೀನು ಈಗ ಶೋಭಾಹೀನಳಾಗಿದ್ದೀಯೆ ಎಂದು ಯೋಚಿಸ ಬೇಡ. ಈ ದುಷ್ಟಕಲಿಯನ್ನು ನಾನು ನೋಡಿಕೊಳ್ಳುತ್ತೇನೆ.” ಎಂದು ಅವರಿಬ್ಬರನ್ನೂ ಸಮಾಧಾನಪಡಿಸಿ ಕಲಿಯ ಕಡೆಗೆ ತಿರುಗಿ ಧನುಸ್ಸಿನಲ್ಲಿ ಬಾಣ

ವನ್ನು ಕೊಟ್ಟನು. ಕೂಡಲೇ ಆತನು ಭಯದಿಂದ ನಡುಗುತ್ತಾ ತನ್ನ ರಾಜ ವೇಷವನ್ನು ಬಿಸುಟು ಪರೀಕ್ಷಿತನ ಪಾದಗಳಮೇಲೆ ಬಿದ್ದು ಶರಣಾಗತನಾದನು.

**ರಾಜ**—ಎಲೈ ಕಲಿಯೆ ? ನೀನು ಶರಣಾಗತನಾಗಿದ್ದೀಯೆ. ಅರ್ಜುನನ ವಂಶದ ರಾಜರು ಶರಣಾಗತವತ್ಸಲರು ಆದುದರಿಂದ ನಿನ್ನನ್ನು ಕೊಲ್ಲುವು ದಿಲ್ಲ. ಆದರೆ ನೀನು ನನ್ನ ರಾಜ್ಯದಲ್ಲಿರಕೂಡದು. ನೀನು ಅಧರ್ಮದ ಸ್ನೇಹಿತನು. ನೀನಿದ್ದೆಡೆಯಲ್ಲಿ ಅಧರ್ಮದ ಅನುಚರರಾದ ಲೋಭ, ಸುಳ್ಳು, ಕಳ್ಳತನ, ಪಾಪ, ದಾರಿದ್ರ್ಯ, ಮೋಸ, ಕಲಹ, ದಂಭಗಳು, ಮನೆ ಮಾಡಿ ಕೊಂಡಿರುವುವು ನನ್ನ ದೇಶದಲ್ಲಿ ಧರ್ಮವೂ, ಸತ್ಯವೂ ಶಾಶ್ವತವಾಗಿರಬೇಕು. ಯಾಜ್ಞಿಕರು ದೇವತೆಗಳಿಗೆ ಕಾಲಕಾಲಕ್ಕೆ ಯಜ್ಞಮಾಡಿ, ಹವಿರ್ಭಾಗವನ್ನು ಕೊಡುತ್ತಿರಬೇಕು ಯಜ್ಞರಕ್ಷಕನಾದ ಮಹಾವಿಷ್ಣುವು ಅಂತರ್ಯಾಮಿಯಾಗಿ ಬ್ರಹ್ಮಾವರ್ತದಲ್ಲೆಲ್ಲಾ ತುಂಬಿಕೊಂಡು ಧರ್ಮ ರಕ್ಷಣೆ ಮಾಡುತ್ತಿರುವನು. ಆದುದರಿಂದ ನೀನು ನನ್ನ ದೇಶವನ್ನು ಬಿಟ್ಟು ಹೊರ ಹೊರಡು.

**ಕಲಿ**— ಮಹಾರಾಜ ! ನಾನು ಎಲ್ಲಿಗೆ ಹೊರಡಬೇಕೆಂದರೂ ನೀನು ಅಲ್ಲಲ್ಲಿಯೇ ಧನುರ್ಬಾಣ ಧರನಾಗಿ ನಿಂತಿರುವಂತೆ ಭಾಸವಾಗುತ್ತದೆ. ಆದುದ ರಿಂದ ನಾನು ಎಲ್ಲಿರಬೇಕೆಂಬುದನ್ನು ನೀನು ಅಪ್ಪಣೆ ಕೊಡಿಸಿದರೆ ಅಲ್ಲಿಯೇ ಇದ್ದು ನಿನ್ನ ಆಜ್ಞಾಪಾಲನೆ ಮಾಡುವೆನು.

**ರಾಜ**— ಎಲೈ ಕಲಿಯೇ ? ನಿನಗೆ ವಾಸಮಾಡಲು ನಾಲ್ಕು ಸ್ಥಾನಗಳನ್ನು ಗೊತ್ತುಮಾಡಿ ಕೊಡುತ್ತೇನೆ. ಅವಾವುವೆಂದರೆ—ಜೂಜು, ಮಾಂಸ, ಸ್ತ್ರೀ, ಹಿಂಸೆ ಈ ನಾಲ್ಕು ಸ್ಥಾನಗಳಲ್ಲಿದ್ದುಕೊಂಡಿರು.

**ಕಲಿ**—ನನಗೆ ಸ್ಥಳವು ಸಂಕೋಚವಾಗುತ್ತದೆ. ಇನ್ನೊಂದು ಸ್ಥಾನವನ್ನು ದೊರಕಿಸಿ ಕೊಡು.

**ರಾಜ**—ಓಹೋ ! ಆಗಬಹುದು. ಅದು ಸುವರ್ಣ—ಭಂಗಾರ. ಭಂಗಾರದೊಡನೆ ಮಿಥ್ಯಾ, ಕಾಮ, ಮದ, ವೈರ, ರಜೋಗುಣಪ್ರವೃತ್ತಿ (ಅಹಂಕಾರ) ಈ ಐದು ಅಧರ್ಮಗಳೂ ನೇರಿಕೊಂಡಿರುತ್ತವೆ. ನೀನು ಅಲ್ಲಿಯೂ ಇರಬಹುದು.

ಕಲಿಯು ಈ ಆಜ್ಞೆಯಂತೆ ಅಪ್ಪಣೆಪಡೆದು ಹೊರಟು ಹೋದನು.

**ಶೌನಕ**—ದುಷ್ಟನಾದ ಕಲಿಯನ್ನು ಕೊಲ್ಲದೇ ಬಿಟ್ಟದರಿಂದ ಲೋಕಕ್ಕೇನುಪಕಾರವಾಯಿತು ?

**ಸೂತರು**—ಕಲಿಯಲ್ಲಿ ಅನೇಕ ದೋಷಗಳಿದ್ದಾಗ್ಯೂ ಒಂದೇ ಒಂದು ಗುಣವಿದೆ. ಅದರಿಂದ ಭಕ್ತರಿಗೆ ಬಹಳ ಉಪಕಾರವಾಗುತ್ತದೆ.

"ಅದೇನು ?"

"ಬೇರೆಬೇರೆ ಯುಗಗಳಲ್ಲಿ ಬಹುಕಾಲ ತಪಸ್ಸು ಮಾಡಿದರೆ ಸಿಕ್ಕುವ ಫಲವು ಕಲಿಯುಗದಲ್ಲಿ ಅತ್ಯಲ್ಪಕಾಲದಲ್ಲಿಯೇ ಪ್ರಾಪ್ತವಾಗುತ್ತದೆ. ಈ ಒಂದೇ ಒಂದು ಗುಣದಿಂದ ಭಕ್ತರಿಗೆ ಕಲಿಯು ಸಹಾಯಕನಾಗಿದ್ದಾನೆ. ಕಲಿಯಲ್ಲಿ ದುಷ್ಟರಿಗೆ ಶೌರ್ಯ ಹೆಚ್ಚಿದರೂ ಸಾಧು ಭಕ್ತರೆದುರಿಗೆ ಕಲಿಯು ಅತ್ಯಂತ ಅಶಕ್ತನು. ಅವರನ್ನೇನೂ ಮಾಡಲಾರ.

ಪರೀಕ್ಷಿತನು ಬಹುಕಾಲ ಕಲಿಯನ್ನು ಕಟ್ಟಿ ರಾಜ್ಯಭಾರ ಮಾಡಿದ ನಂತರ ವಿಪ್ರಶಾಪದಿಂದ ತಕ್ಷಕನಿಂದ ಕಡಿಯಲ್ಪಟ್ಟನು. ಮೋಹಕ್ಕೆ ಒಳಗಾಗದೆ ಸಮಸ್ತ ಸಂಗವನ್ನೂ ತ್ಯಜಿಸಿ ಗಂಗಾತಟದಲ್ಲಿ ಶುಕಮಹರ್ಷಿಯಿಂದ ಭಾಗವತ ಕಥಾ ಶ್ರವಣಮಾಡಿ ದೇಹತ್ಯಾಗ ಮಾಡಿದನು. ಪರಮಾತ್ಮನ ಗುಣಾನುವಾದಮಾಡುತ್ತಾ ಆತನ ಧ್ಯಾನ ಭಜನೆಗಳಲ್ಲಿಯೇ ಲೀನರಾದವರು ಅಂತ್ಯಕಾಲದಲ್ಲಿ ಮೋಹವಶರಾಗುವುದಿಲ್ಲ."

"ಪರೀಕ್ಷಿತನಂತಹ ಭಗವದ್ಭಕ್ತನಿಗೆ ವಿಪ್ರಶಾಪಬಂದುದು ಆಶ್ಚರ್ಯವಲ್ಲವೆ !"

"ಅಹುದಹುದು ! ಕಾಲಗತಿಯನ್ನು ಮೀರಲಾಗುವುದೋ ? ಆತನ ದೇಹದ ಮರಣಕ್ಕೇನಾದರೂ ಕಾರಣವು ಬೇಕಷ್ಟೆ ! ವಿಪ್ರಶಾಪವು ಒಂದು ನೆಪವು ಮಾತ್ರ. ಮೃತ್ಯುವಿನ ಕರೆಯೇ ಮುಖ್ಯ."

"ಸೂತರೇ, ಆ ಕಥೆಯನ್ನೆಲ್ಲಾ ನಮಗೆ ವಿಸ್ತಾರವಾಗಿ ಹೇಳಿರಿ. ನೀವು ಬಹುಪುಣ್ಯಾತ್ಮರು. ಮೃತ್ಯುವಶರಾದ ಮನುಷ್ಯರ ಅಂತಃಕರಣಗಳಲ್ಲಿ ಪರಮಾತ್ಮನ ಭಕ್ತಿಯನ್ನು ತುಂಬಿ ಅವರನ್ನು ಅಮರರನ್ನಾಗಿ ಮಾಡುತ್ತೀರಿ. ನಾವು ನಿತ್ಯವೂ ಮಾಡುತ್ತಿರುವ ಹವನ ಹೋಮಗಳು ಮುಕ್ತಿಯನ್ನು ಕೊಡ

ಲಾರವು. ಹೊಗೆಯಿಂದ ನಾವೆಲ್ಲಾ ಧೂಮ್ರ ವರ್ಣವುಳ್ಳವರಾಗುತ್ತಿದೆ ಇವ್ಟೇ! ಶ್ರೀಕೃಷ್ಣನ ಚರಣಕಮಲಾಮೃತವ ಪಾನಮಾಡಿಸುತ್ತಿರುವಿರಲ್ಲಾ! ಇವೆಂತಹಪುಣ್ಯ! ನೀವು ಚಿರಾಯುಗಳಾಗಿ ಲೋಕಸೇವೆಮಾಡಬೇಕು ಒಂದು ನಿಮಿಷದ ಸಾಧು ಸಂಗಕ್ಕೆ ಸ್ವರ್ಗಸುಖವೂ ಸರಿಯಾಗಲಾರದು. ಮೋಕ್ಷವೂ ಸರಿಯಾಗಲಾರದು ಇನ್ನು ಸಂಸಾರದ ಮಾತೇನು? ಸಾಧುಗಳಿಗೆ ಏಕಮಾತ್ರ ಅವಲಂಬನಸ್ವರೂಪನಾದ ಶ್ರೀಕೃಷ್ಣನ ಚರಿತ್ರಾಮೃತ ಪಾನಮಾಡುವ ರಸಿಕನೆಂತಹ ಭಾಗ್ಯಶಾಲಿ! ನೀವು ನಮಗೆ ಕೃಷ್ಣಕಥಾಮೃತ ವನ್ನು ಚೆನ್ನಾಗಿ ಪಾನಮಾಡಿಸಿರಿ. ನಾವು ಅತ್ಯಂತ ಶ್ರದ್ಧಾಳುಗಳಾಗಿದ್ದೇವೆ

**ಸೂತ—**ಋಷಿಗಳೇ ನಿಜವಾಗಿಯೂ ನೀವು ಧನ್ಯರು. ನಿಮಗಿಂತ ಕಡಿಮೆಕುಲದಲ್ಲಿ ಹುಟ್ಟಿದರೂ ನನ್ನನ್ನು ಗೌರವಿಸುತ್ತಿರುವಿರಿ. ನಿಜವಾಗಿಯೂ ನಿಮ್ಮಂತಹ ಸಜ್ಜನರ ಸಂಗವು ಹೀ ನ ಕು ಲ ದ ಲ್ಲಿ ಹುಟ್ಟಿದ ದುಃಖವನ್ನು ನಿವಾರಣೆಮಾಡಬಲ್ಲದು. ಉಚ್ಚ, ನೀಚ ಭೇದವನ್ನು ನಷ್ಟಮಾಡುವ ಜ್ಞಾನವು ಸತ್ಸಂಗದಿಂದಲೇ ಉಂಟಾಗಬೇಕಾಗಿದೆ.

ಯಾವ ಪರಮಪುರುಷನ ಪಾದದಿಂದ ಹುಟ್ಟಿದ ಗಂಗೆಯು ಬ್ರಹ್ಮನ ಕಮಂಡಲುವನ್ನು ಅಲಂಕರಿಸಿ ಈಶ್ವರನಿಂದ ಹಿಡಿದು ಲೋಕತ್ರಯಗಳನ್ನೂ ಪಾವನಮಾಡುತ್ತಿರುವಳೋ ಆ ದೇವದೇವನ ಗುಣಾನುವಾದಕ್ಕಿಂತಲೂ ಹೆಚ್ಚಿನ ಭಗವತ್ತತ್ವವಾವುದು? ನೀವು ಕೇಳಿದುದನ್ನೆಲ್ಲಾ ನನಗೆ ತಿಳಿದಮಟ್ಟಿಗೆ ಚೆನ್ನಾಗಿ ಹೇಳುತ್ತೇನೆ.

ಪರೀಕ್ಷಿತನು ಒಂದುದಿನ ಬೇಟೆಗೆ ಹೋಗಿ ಕಾಡಿನಲ್ಲಿ ಅಲೆದಲೆದು ಸಾಕಾದುದರಿಂದ ಒಂದು ಋಷ್ಯಾಶ್ರಮವನ್ನು ಕಂಡು ಅ ಲ್ಲಿ ಗೆ ಹೋ ಗಿ ನೋಡಲು ಶಮೀಕನೆಂಬ ಋಷಿಯು ಧ್ಯಾನಸ್ಥನಾಗಿ ಕಣ್ಣುಗಳನ್ನು ಮುಚ್ಚಿ ಶಾಂತಮುದ್ರೆಯಿಂದ ಕುಳಿತಿದ್ದನು. ಆತನ ಮನೋಬುದ್ಧಿ ಪ್ರಾಣೇಂದ್ರಿಯ ಗಳು ಪರಬ್ರಹ್ಮನಲ್ಲಿ ಲೀನವಾಗಿದ್ದವು. ಅ ವ ಸ್ಥಾ ತ್ರ ಯ ಗ ಳ ನ್ನು ಮೀರಿ ತುರೀಯಾವಸ್ಥೆಯಲ್ಲಿ ನಿಂತು ಬ್ರಹ್ಮಮಯನಾಗಿಬಿಟ್ಟಿದ್ದನು. ಆತನ ಉದ್ದುದ್ದವಾದ ಜಟೆಯು ದೇಹವನ್ನೆಲ್ಲಾ ಆವರಿಸಿದ್ದಿತು. ವ್ಯಾಘ್ರಚರ್ಮವನ್ನು

ಕೊಡ್ಡಿದ್ದನು. ಹೀಗೆ ಬಾಹ್ಯಜ್ಞಾನ ಶೂನ್ಯನಾಗಿದ್ದ ಋಷಿಯನ್ನು ನೋಡಿ ಕುಡಿಯುವುದಕ್ಕೆ ನೀರನ್ನು ಕೇಳಿದನು. ಋಷಿಯು ಏಳಲೂ ಇಲ್ಲ. ಆಸನವನ್ನೂ ಕೊಡಲಿಲ್ಲ. ಸ್ವಾದು-ಮಧುರವಚನಗಳಿಂದ ಆದರಿಸಲೂ ಇಲ್ಲ. ತನ್ನನ್ನು ಈ ಋಷಿಯು ನಿರಾದರಮಾಡುತ್ತಿದ್ದಾನೆಂದು ಭ್ರಾಂತಿಪಟ್ಟು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿದ್ದ ರಾಜನು ಕುಪಿತನಾಗಿ ಆ ಕುಟೀರದಿಂದ ಹೊರಹೊರಡುವ ಸಮಯದಲ್ಲಿ ಅಲ್ಲಿಯೇ ಸತ್ತುಬಿದ್ದಿದ್ದ ಹಾವನ್ನು ತನ್ನ ಬಿಲ್ಲಿನ ಕೊನೆಯಿಂದ ಎತ್ತಿ ಋಷಿಯ ಕೊರಳಿಗೆ ಸುತ್ತಿಹಾಕಿದನು. ಪಟ್ಟಣಕ್ಕೆ ಹಿಂದಿರುಗಿದಮೇಲೆ ಈ ಕ್ಷತ್ರಿಯನೇನು ಮಾಡುವನೋ ನೋಡಬೇಕೆಂದೇ ಈ ಬ್ರಾಹ್ಮಣನು ಸುಳ್ಳು ಸಮಾಧಿಯನ್ನು ನಟಿಸುತ್ತಿದ್ದಾನೆಂದೇ ಭಾವಿಸಿಕೊಂಡನು. ಮೃತ್ಯುವು ಆತನಿಗೆ ಬುದ್ಧಿಭ್ರಮಣೆಯನ್ನುಂಟುಮಾಡಿದ್ದುದರಿಂದ ನಿಜಸ್ಥಿತಿಯನ್ನರಿಯಲಾಗಲಿಲ್ಲ. ಆ ಶಮೀಕಋಷಿಯ ಮಗನಾದ ಶೃಂಗಿಯು ಕುಟೀರಕ್ಕೆ ಬಂದು ಹಾವಿನಿಂದ ಸುತ್ತುವರಿಯಲ್ಪಟ್ಟಿದ್ದ ತಂದೆಯ ದೇಹವನ್ನು ನೋಡುತ್ತಲೇ ಕಿಡಿಕಿಡಿಯಾಗಿ "ಯಾವ ದುಷ್ಟಕ್ಷತ್ರಿಯನು ನನ್ನ ತಂದೆಯ ಕೊರಳಿಗೆ ಹಾವನ್ನು ಸುತ್ತಿಹಾಕಿರುವನೋ ಅವನು ಈ ಲಾಗಾಯಿತು ಏಳು ದಿನಗಳಲ್ಲಿ ಹಾವಿನಿಂದ ಕಡಿಯಲ್ಪಟ್ಟು ಸಾಯಲಿ" ಎಂದು ಶಾಪಕೊಟ್ಟನು. ತಂದೆಯ ಸಮೀಪಕ್ಕೆ ಬಂದು ಅಳಲಾರಂಭಿಸಿದನು. ಮಗನ ದುಃಖಾಲಾಪದಿಂದ ಶಮೀಕಋಷಿಗೆ ಸಮಾಧಿಭಂಗವಾಯಿತು. ಕಣ್ಣು ಬಿಟ್ಟು ನೋಡುವಾಗ ತನ್ನ ಕೊರಳಿಗೆ ಹಾವು ಸುತ್ತಲ್ಪಟ್ಟಿದ್ದಿತು. ಅದನ್ನು ಹೊರಕ್ಕೆಸೆದು ಮಗನ ದುಃಖಕ್ಕೆ ಕಾರಣವೇನೆಂದು ಕೇಳಿದನು. ಮಗನು ವೃತ್ತಾಂತವನ್ನೆಲ್ಲಾ ವಿವರಿಸಿದನು. ತಂದೆಯು ಮಗನ ಆತುರಕ್ಕಾಗಿ ಬಹಳ ವ್ಯಸನಪಟ್ಟು ಹೇಳಿದನು.

‘ ಎಲೈ ಅಜ್ಞಾನಿಯಾದ ಬಾಲಕನೇ ’ ನೀನು ನಿಜವಾಗಿಯೂ ಬಹಳ ಅಪರಾಧಮಾಡಿಬಿಟ್ಟೆ ? ಶಾಪಕೊಡಲು ಅಯೋಗ್ಯನಾದ ರಾಜನನ್ನು ಶಪಿಸಿದೆಯಲ್ಲಾ ! ರಾಜನು ಸಾಮಾನ್ಯ ಮನುಷ್ಯನೆಂದು ತಿಳಿದಿರುವೆಯೋ ? ರಾಜನ ಪ್ರಚಂಡತೇಜಸ್ಸಿನಿಂದಲೇ ಅಲ್ಲವೆ ಪ್ರಜೆಗಳು ನಿರ್ಭಯರಾಗಿ ಜೀವನ ಮಾಡುತ್ತಿರುವುದು ? "ನಾವಿಷ್ಣುಃ ಪೃಥಿವೀಪತಿಃ" ಎಂಬ ಮಾತನ್ನು

ಜ್ಞಾಪಿಸಿಕೋ. ತೇಜಸ್ವಿಯಾದ ರಾಜನಿಲ್ಲದಿದ್ದರೆ ಲೋಕವೆಲ್ಲಾ ಚೋರ, ದುಷ್ಟಭಯದಿಂದ ಅನಾಯಕವಾಗುವುದು. ರಾಜನಿಲ್ಲದಿದ್ದರೆ ದುಷ್ಟರ ಸಂಖ್ಯೆಯು ಹೆಚ್ಚುವುದು ಸ್ತ್ರೀಯರ, ಪಶುಗಳ ಅಪಹರಣವಾಗುವುದು. ಜನಗಳು ಒಬ್ಬರೊಡನೊಬ್ಬರು ಹೊಡೆದಾಡುವರು. ವರ್ಣಾಶ್ರಮ ಧರ್ಮ ರೂಪವಾದ ವೇದ ವಿಹಿತವಾದ ಆರ್ಯಧರ್ಮವು ನಷ್ಟವಾಗುವುದು. ಜನಗಳು ಕಾಮಪ್ರವೃತ್ತರಾಗುವುದರಿಂದ ನಾಯಿಗಳಂತೆ, ಕಪಿಗಳಂತೆ ಸ್ವೇಚ್ಛಾಚಾರಿಗಳಾಗಿ ವರ್ಣಸಂಕರವಾಗುವುದು. ಪರೀಕ್ಷಿತನಂತಹ ಧರ್ಮಾತ್ಮನಾದ ರಾಜನು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ನಮ್ಮ ಆಶ್ರಮಕ್ಕೆ ಬಂದಿದ್ದಾಗ್ಯೂ ನಾವು ಆತನನ್ನು ಉಪಚರಿಸಲಾಗಲಿಲ್ಲ. ಆತನು ಮಾಡಿದ ಈ ಸಣ್ಣ ಅಪರಾಧಕ್ಕೆ (ಸತ್ತ ಹಾವನ್ನು ಕೊರಳಿಗೆ ಸುತ್ತಿದ್ದಕ್ಕೆ) ಈ ಮರಣಾಂತ ಶಿಕ್ಷೆಯನ್ನು (ಶಾಪವನ್ನು) ಕೊಟ್ಟುದು ನಮ್ಮ ದೊಡ್ಡ ಅವಿವೇಕವಾಯಿತು. ಪರಮಾತ್ಮಾ! ಈ ನಿರ್ದೋಷಿಯಾದ ದಾಸನ ಅರ್ಧಶಿಕ್ಷಿತ ಬಾಲಕನ ಅಪರಾಧವನ್ನು ಕ್ಷಮಿಸಿ ರಾಜನನ್ನು ರಕ್ಷಿಸು." ಎಂದು ಪ್ರಾರ್ಥಿಸ ಲಾರಂಭಿಸಿದನು.

ಸಾಧುಗಳ ಸ್ವಭಾವವೇ ಇಂತಹುದು. ಶಮೀಕಋಷಿಯು ರಾಜನ ಅಪರಾಧವನ್ನು ಅತ್ಯಲ್ಪವೆಂದೇ ಎಣಿಸಿದನು. "**ಪ್ರಾಯಶಸ್ಸಾಧವೋ ಲೋಕೇ ಪರೈರ್ದ್ವಂದ್ವೇಷು ಯೋಜಿತಾಃ । ನ ವ್ಯಥಂತಿ ನ ಹೃಷ್ಯಂತಿ ಯತ ಆತ್ಮಾಽಗುಣಾಶ್ರಯಃ ॥** (ಭಾಗ ॥ ೧-೧೮-೫೦)

ದುಃಖವಾದಾಗ ಅವರು ದುಃಖಿಸುವುದೇ ಇಲ್ಲ. ಸುಖವಾದಾಗ ಆನಂದವನ್ನೂ ಹೊಂದುವುದಿಲ್ಲ. ಆತ್ಮನು ಯಾವ ಗುಣದ ವಿಕಾರಕ್ಕೂ ಸಿಕ್ಕದಿರುವ ನಿರ್ಗುಣನಾದುದರಿಂದ ಸುಖ ದುಃಖಭೋಗಕ್ಕೆ ಸಂಬಂಧಪಡದವನೆಂಬುದನ್ನು ತಿಳಿದಿರುತ್ತಾರೆ.

ರಾಜನು ಅರಮನೆಗೆ ಬಂದಮೇಲೆ ತನ್ನಿಂದ ಮಾಡಲ್ಪಟ್ಟ ಅಕಾರ್ಯಕ್ಕಾಗಿ ಪಶ್ಚಾತ್ತಾಪಪಡಲಾರಂಭಿಸಿದನು. "ಅನಾರ್ಯನಾದ ಅವಿವೇಕಿಯಂತೆ ನಾನು ನಿರ್ದೋಷಿಯಾದ ಬ್ರಾಹ್ಮಣನಿಗೆ ಅಪರಾಧಮಾಡಿಬಿಟ್ಟೆ !

ಆತನ ಬೆನ್ನುಹಿಂದೆ ಇರುವ ತೇಜಸ್ಸನ್ನು ನಾನು ಅರ್ಥಮಾಡಿಕೊಳ್ಳಲಾರದೇ ಹೋದೆನಲ್ಲಾ! ಈ ದೈವದ್ರೋಹದ ಫಲವಾಗಿ ನನಗೇನಾದರೂ ವಿಪತ್ತು ಒದಗಬಹುದು. ನನ್ನ ಈ ಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವಾಗಲೇಬೇಕಲ್ಲವೆ ? ಪ್ರಜ್ವಲಿತ ಬ್ರಹ್ಮಕೋಪದಿಂದ ರಾಜ್ಯ, ಕೋಶ, ಸೈನ್ಯ, ಎಲ್ಲವೂ ನಷ್ಟ ವಾದೀತು. ನಾನು ಮುಂದೆ ಎಂದೆಂದಿಗೂ ಇಂತಹ ನೀಚ ಕರ್ಮವನ್ನು ಮಾಡದಿರುವಂತಹ ರೀತಿಯಲ್ಲಿ ಶಿಕ್ಷೆಯು ಸಿದ್ಧವಾಗಿರಬಹುದು." ಎಂದು ಚಿಂತಿಸುತ್ತಿರುವಾಗಲೇ ಒಬ್ಬ ಋಷಿಪುತ್ರನು ಬಂದು ಶಮೀಕಋಷಿಯ ಮಗ ನಾದ ಶೃಂಗಿಯು ರಾಜನಿಗೆ ಕೊಟ್ಟ ಶಾಪದ ವೃತ್ತಾಂತವನ್ನು ತಿಳಿಸಿದನು. ಈ ಏಳುದಿನಗಳ ಅವಧಿಯಲ್ಲಿಯೇ ಪರಮಾತ್ಮ ಪ್ರಾಪ್ತಿಯ ಉಪಾಯವು ಸಿದ್ಧವಾಗಬೇಕಾದುದರಿಂದ ಶಾಪದ ವಿಷಯವನ್ನು ಕೇಳುತ್ತಲೇ ಇದೂ ಒಂದು ದೈವಾನುಗ್ರಹವೆಂದೇ ಭಾವಿಸಿ ಬಂಧುಮಿತ್ರರನ್ನೂ, ರಾಜ್ಯಭೋಗ ವನ್ನೂ ತ್ಯಜಿಸಿ ವಿರಕ್ತನಾಗಿ ನೀರನ್ನೂ ಆಹಾರವನ್ನೂ ತ್ಯಜಿಸಿ ಪ್ರಾಣತ್ಯಾಗಕ್ಕೆ ಸಿದ್ಧನಾಗಿ ಮುನಿವೇಷಧಾರಿಯಾಗಿ ಗಂಗಾತಟಕ್ಕೆ ಬಂದುಸೇರಿದನು. ರಾಜನು ಗಂಗಾತಟದಲ್ಲಿ ಪ್ರಾಣತ್ಯಾಗಕ್ಕೆ ಸಿದ್ಧನಾದ ವರ್ತಮಾನವನ್ನು ಕೇಳಿ ಅತ್ರಿ, ವಸಿಷ್ಠ, ಚ್ಯವನ, ಭೃಗು, ಅಂಗಿರ, ಪಿಪ್ಪಲಾದ ಮುಂತಾದ ತಪಸ್ವಿಗಳೆಲ್ಲಾ, ದೇವರ್ಷಿ, ರಾಜರ್ಷಿ, ಬ್ರಹ್ಮರ್ಷಿಗಳೆಲ್ಲಾ *ಅಲ್ಲಿಗೆ ಬಂದು ನೇರಿದರು. ಎಲ್ಲರೂ ಸುಖವಾಗಿ ತಂತಮ್ಮ ಆಸನಗಳಲ್ಲಿ ಕುಳಿತುಕೊಂಡ ನಂತರ ರಾಜನು ಅವರೆಲ್ಲರಿಗೂ ಪ್ರಣಾಮಮಾಡಿ ಅವರ ಆಶೀರ್ವಾದ ವನ್ನು ಪಡೆದು ಹೇಳಿದನು.

"ಮುನಿವರ್ಯರೇ, ನಾನು ಮಾಡಿದ ನೀಚಕರ್ಮದಿಂದ ನನಗೂ ನನ್ನ ವಂಶಕ್ಕೂ ಬರಬಾರದ ಅಪಕೀರ್ತಿಯು ಬಂದಿದೆ. ಬ್ರಾಹ್ಮಣರ ಆಶೀರ್ವಾದಕ್ಕೆ ಪ್ರತಿಯಾಗಿ ನಾನು ಬ್ರಹ್ಮಶಾಪಕ್ಕೆ ತುತ್ತಾಗಿದ್ದೇನೆ. ನೀವುಗಳೆಲ್ಲರೂ ಇಲ್ಲಿಗೆ ಬಂದು ನನ್ನನ್ನು ಆ ಶೀ ರ್ವ ದಿ ಸು ತ್ತಿ ರು ವು ದ ರಿ ಂ ದ ಋಷಿಪುತ್ರನ ಶಾಪವು

---

*ಪ್ರಾಯೇಣ ತೀರ್ಥಾಭಿಗಮಾಪದೇಶೈಃ ಸ್ವಯಂ ಹಿ ತೀರ್ಥಾನಿ ಪುನಂತಿ ಸನ್ತಃ ।

(ಭಾಗ ॥ ೧-೯-೮ )

ಅನುಗ್ರಹವೆಂದೇ ಭಾವಿಸುತ್ತಿದ್ದೇನೆ. ನಾನು ಪಾಪಿ! ಸಂಸಾರ ಸುಖದಲ್ಲಿ ಬಹಳ ಆಸಕ್ತನಾಗಿದ್ದೆ. ಈ ಚರಾಚರ ಪ್ರಪಂಚಕ್ಕೆ ಒಡೆಯನಾದ ಪರಮಾತ್ಮನು ಬ್ರಾಹ್ಮಣಪುತ್ರನಿಂದ ಶಾಪಕೊಡಿಸಿ ನನ್ನ ಅಂತಃಕರಣದಲ್ಲಿ ವೈರಾಗ್ಯ ಪ್ರಕಾಶವನ್ನು ಬೀರಿದ್ದಾನೆ. ಸಂಸಾರಸಾಗರದಲ್ಲಿ ಭಯವನ್ನು ಹುಟ್ಟಿಸಿ ಅಭಯಸ್ವರೂಪವಾದ ವೈರಾಗ್ಯವನ್ನು ನನಗೆ ಹೊಂದಿಸಕೊಡುವುದೇ ಶಾಪದ ಮುಖ್ಯೋದ್ದೇಶವೆಂದು ಭಾವಿಸುತ್ತೇನೆ. ಶರಣಾಗತನಾದ ನನ್ನ ಮೇಲೆ ಗಂಗಾದೇವಿಯೂ ತಾವುಗಳೂ ಸೇರಿ ಅನುಗ್ರಹಮಾಡಿರಿ. ವಿಪ್ರಶಾಪವು ನನ್ನನ್ನು ಸುಟ್ಟುಹಾಕಲಿ. ತಕ್ಷಕನೇ ನನ್ನನ್ನು ಕಡಿಯಲಿ. ನನಗೆ ಚಿಂತೆ ಯಿಲ್ಲ. ಶ್ರೀಹರಿಯ ದಿವ್ಯಗುಣಗಳನ್ನು—ಪವಿತ್ರ ಜನ್ಮ ಕರ್ಮರೂಪ ಚರಿತ್ರೆ ಯನ್ನು ನನಗೆ ತಿಳಿಸಿರಿ. ನನಗೆ ಮುಂದಿನ ಜನ್ಮದಲ್ಲಿಯೂ ಭಗವದ್ಭಕ್ತಿಯು ಹುಟ್ಟುವಂತೆಯೂ ಮುಂದೆ ಯಾವ ಯಾವ ಯೋನಿಗಳಲ್ಲಿ ನನಗೆ ಜನ್ಮವು ಬಂದರೂ ಭಗವದ್ಭಕ್ತರ ಸಂಗವೂ ಸತ್ಪುರುಷರ ಸಹವಾಸವೂ ಲಭಿಸುವಂತೆಯೂ ಅನುಗ್ರಹಿಸಿರಿ."

ಹೀಗೆ ಅಲ್ಲಿ ಸೇರಿದ ಋಷಿ ಮುನಿವೃಂದವನ್ನು ಪ್ರಾರ್ಥಿಸಿ ಜ್ಞಾನಿಯಾದ ಪರೀಕ್ಷಿತನು ತನ್ನ ಮಗನಾದ ಜನಮೇಜಯನಿಗೆ ಪಟ್ಟಾಭಿಷೇಕಮಾಡಿ ಗಂಗಾನದಿಯ ದಡದಮೇಲೆ ಪೂರ್ವಾಭಿಮುಖವಾಗಿ ಕುಶಾಸನದಲ್ಲಿ ಕುಳಿತು ಕೊಂಡನು. ರಾಜನ ಪ್ರಾಯೋಪವೇಶದ ನಿಶ್ಚಯವನ್ನು ನೋಡಿ ಸ್ವರ್ಗ ದಲ್ಲಿನ ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು. ಋಷಿಗಳೆಲ್ಲಾ "ಸಾಧು ಸಾಧು ನೀನು ಸ್ವಾಮಿಯ ಪರಮಭಕ್ತನು. ಪಾಂಡವ ವಂಶಕ್ಕೆ ಕಿರೀಟ ಪ್ರಾಯನು. ಒಂದು ಕ್ಷಣದಲ್ಲಿ ರಾಜ್ಯದ ಮೇಲಿನ ಅಭಿಮಾನವನ್ನು ತ್ಯಾಗ ಮಾಡಿ ದೇಹತ್ಯಾಗಕ್ಕೆ ಸಿದ್ಧನಾಗಿರುವೆ" ಎಂದು ಹೊಗಳುತ್ತಾ ರಾಜನು ತನ್ನ ಭೌತಿಕದೇಹವನ್ನು ತ್ಯಾಗಮಾಡುವವರೆಗೂ ಅಲ್ಲಿಯೇ ನಿಲ್ಲಲು ನಿಶ್ಚಯ ಮಾಡಿದರು.

ರಾಜನು ಕೈಜೋಡಿಸಿ ಹೇಳಿದನು.

"ವೇದ ಪುರುಷನೇ ಮೂರ್ತಿಮತ್ತಾಗಿ ಬಂದಿರುವಂತೆ ನನ್ನನ್ನು

ಅನುಗ್ರಹಿಸಿರುವಿರಿ. ನೀವು ಸಜ್ಜನರು.* ನಿಮ್ಮ ಜೀವನವು ಇತರರಿಗಾಗಿಯೇ ಅಲ್ಲದೇ ನಿಮ್ಮ ಸ್ವಾರ್ಥಕ್ಕೆ ಅಲ್ಲವೇ ಅಲ್ಲ. ನಿಮ್ಮ ಸ್ವಭಾವವು ಪರೋಪಕಾರಕ್ಕಾಗಿ ಶ್ರಮಿಸುವುದೇ ಆಗಿದೆ ನಾನು ಈಗ ತಮಗೊಂದು ಪ್ರಶ್ನೆಮಾಡಲಿಚ್ಛಿಸುತ್ತೇನೆ. ನಾನು ಈಗ ಏನುಮಾಡಬೇಕು ? ಇಂತಹ ಮರಣಕಾಲದಲ್ಲಿ ಮನುಷ್ಯರೆಲ್ಲರೂ ಏನುಮಾಡಿದರೆ ಶ್ರೇಯಸ್ಸಾಧನೆಯಾಗುವುದು ? ತಾವೆಲ್ಲರೂ ಯೋಚಿಸಿ ಹೇಳಿರಿ ? "

ಇಷ್ಟರಲ್ಲಿಯೇ ವ್ಯಾಸಪುತ್ರನಾದ ಅವಧೂತಶ್ರೇಷ್ಠ ಶುಕಮಹರ್ಷಿಯು ಅಲ್ಲಿಗೆ ಬಂದನು. ಮೈಮೇಲೆ ಬಟ್ಟೆಇಲ್ಲದೆ ದಿಗಂಬರನಾಗಿದ್ದುದರಿಂದ ಹುಡುಗರು, ಹೆಂಗಸರು ಹುಚ್ಚನೆಂದು ತಿಳಿದು ಅವನನ್ನು ಹಿಂಬಾಲಿಸಿದ್ದರು. ಆತನು ಹದಿನಾರುವರ್ಷದ ಬಾಲಕನಂತೆ ತೋರುತ್ತಿದ್ದನು. ವಿಶಾಲನಯನ, ಸುಂದರ ಶ್ಯಾಮವರ್ಣದಕಾಂತಿ, ಆಜಾನುಬಾಹುಗಳು, ಸುಕೋಮಲ ಕಪೋಲ, ಉನ್ನತನಾಸಿಕ, ಶಂಖಕಂಠ, ಮಂದಹಾಸಯುಕ್ತ ಸುಂದರ ಮುಖಮಂಡಲ, ಉನ್ನತವಾದ ವಿಶಾಲ ವಕ್ಷಃಸ್ಥಲ, ಸುಂದರ ತ್ರಿವಳಿಯುಕ್ತ ಉದರ, ಮುಂತಾದ ಸಮಸ್ತ ಅವಯವಗಳೂ ವಿಜಾತೀಯವಾದೊಂದು ತೇಜಸ್ಸನ್ನು ಬೀರುತ್ತಾ ನೋಡುತ್ತಲೇ ಈತನು ಮಹಾನುಭಾವನಾದ ಶುಕ ಮಹರ್ಷಿಯೆಂದೇ ತೋರ್ಪಡಿಸುತ್ತಿದ್ದುವು.

ಈ ಅವಧೂತಮೂರ್ತಿಯು ಬರುತ್ತಿದ್ದಂತೆಯೇ ಎಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಎದ್ದುನಿಂತು ಗೌರವಿಸಿದರು. ರಾಜನು ಎದ್ದುಬಂದು ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ ದೀರ್ಘದಂಡಪ್ರಣಾಮಮಾಡಿ ಉಚ್ಚಾಸನದಲ್ಲಿ ಕುಳ್ಳಿರಿಸಿ, " ಮಹಾನುಭಾವ ! ತಾವು ಈಗ ಇಲ್ಲಿಗೆ ದಯಮಾಡಿಸಿದುದು ನನ್ನ ಭಾಗ್ಯವೇ ಸರಿ. ಶ್ರೀಕೃಷ್ಣಪರಮಾತ್ಮನೇ ತಮ್ಮನ್ನು ಸಮಯಕ್ಕೆ ಸರಿಯಾಗಿ ಕಳುಹಿಸಿರುವನೆಂದು ತೋರುತ್ತದೆ. ತಾವು ಸ್ವೇಚ್ಛಾವಿಹಾರಿಗಳು ಅನಪೇಕ್ಷರು. ನಿಮ್ಮಂತಹವರ ದರ್ಶನವು ಅದರಲ್ಲಿಯೂ ಮರಣಕಾಲದಲ್ಲಿ

---

*ನೇಹಾಥವಾಮುತ್ರ ಚ ಕಶ್ಚನಾರ್ಥ ಋತೇ ಪರಾನುಗ್ರಹಮಾತ್ಮಶೀಲಂ ।

(ಭಾ॥ ೧-೧೯-೨೩)

ಸಂದರ್ಶವು ನನ್ನ ಪುಣ್ಯಫಲವೇ !! ತಾವು ಗೃಹಸ್ಥರಲ್ಲಿ ಹಸುವಿನ ಹಾಲು ಕರೆಯುವಷ್ಟುಹೊತ್ತು ನಿಲ್ಲುವವರಲ್ಲ. ಈಗ ನನ್ನನ್ನು ಅನುಗ್ರಹಿಸುತ್ತಿರುವಿರಿ ! ಮನುಷ್ಯನು ಮರಣಕಾಲ ಪ್ರಾಪ್ತವಾದಾಗ ತನ್ನ ಕಲ್ಯಾಣಕ್ಕಾಗಿ ಏನುಮಾಡಬೇಕು ? ಅಂತ್ಯಕಾಲದಲ್ಲಿ ಯಾವುದನ್ನು ಕೇಳಬೇಕು ? ಯಾವ ಜಪಮಾಡಬೇಕು ? ಯಾವ ಸ್ಮರಣೆ ಮಾಡಬೇಕು ? ಯಾವ ಭಜನೆ ಮಾಡಬೇಕು ? ಯೋಗಿಗಳಿಗೆಲ್ಲಾ ಗುರುವಾಗಿ ಮಹಾತ್ಮರಾದ ನೀವು ದಯವಿಟ್ಟು ನನ್ನ ಪ್ರಶ್ನೆಗೆ ಉತ್ತರಕೊಟ್ಟು ಉದ್ಧರಿಸಬೇಕು. ಎಂದು ಪ್ರಾರ್ಥಿಸಿಕೊಂಡನು.



# ಷಷ್ಠ ಕಿರಣ

ಶುಕರು ಹೇಳತೊಡಗಿದರು—

"**ರಾಜ!** ನೀನು ಮಾಡಿದ ಪ್ರಶ್ನೆಯಿಂದ ನಿನಗಾಗಿಯೇ ಅಲ್ಲ ಸಮಸ್ತ ಲೋಕಕ್ಕೇ ಕಲ್ಯಾಣವಾಗುವುದು. ಈ ಪ್ರಶ್ನೆಯು ಬ್ರಹ್ಮಜ್ಞಾನಿಗಳಿಗೆ ಸಮ್ಮತವಾದುದು. ಗೃಹಸ್ಥಾಶ್ರಮದಲ್ಲಿಯೇ ಲಿಪ್ತರಾಗಿ ವಿಷಯಾಸಕ್ತರಾಗಿರುವ ಜನಗಳು ಕೇಳಬೇಕಾದ ವಿಷಯಗಳೂ ಮಾಡಬೇಕಾದ ಕರ್ಮಗಳೂ ಬೇಕಾದಷ್ಟಿವೆ. ಅವರ ಆಯುಸ್ಸು ವ್ಯರ್ಥವಾಗಿ ಕಳೆಯಲ್ಪಡುತ್ತಿರುವುದು. ರಾತ್ರಿಯನ್ನು ನಿದ್ರೆಯಲ್ಲಿಯೂ ಯೌವನವನ್ನು ಭೋಗವಿಲಾಸಗಳಲ್ಲಿಯೂ ಹಗಲನ್ನೆಲ್ಲಾ ಹಣಸಂಪಾದನೆಮಾಡಿ ಕುಟುಂಬಪೋಷಣೆಮಾಡುವುದರಲ್ಲಿಯೂ ಕಳೆಯುತ್ತಿರುವರು. ದೇಹ ಪುತ್ರ ಸ್ತ್ರೀ ಮುಂತಾದವರುಗಳ ನಾಶವನ್ನು ನೋಡುತ್ತಿದ್ದರೂ ತಮ್ಮ ಮೃತ್ಯುವನ್ನರಿಯರು. ಜಗತ್ತಿನ ಕಷ್ಟನಷ್ಟಗಳಿಂದ ನಿರ್ಭಯನಾಗಿರಬೇಕೆಂದು ಇಷ್ಟಪಡುವ ಪುರುಷನು ಸರ್ವವ್ಯಾಪಿಯಾದ ಪರಮಾತ್ಮ—ಹರಿಯ ಸ್ಮರಣೆಕೀರ್ತನೆಗಳನ್ನು ಮಾಡುತ್ತಾ ಆತನ ಗುಣಗಾನಮಾಡುತ್ತಿರಬೇಕು. ಸಾಂಖ್ಯಶಾಸ್ತ್ರ ಅಥವಾ ಯೋಗಶಾಸ್ತ್ರಗಳಲ್ಲಾವುದರಲ್ಲಾದರೂ ಧಾರ್ಮಿಕ ನಿಷ್ಠೆಯನ್ನು ಹಿಡಿದು ತನ್ನ ದೇಹಾಂತದವರೆಗೆ ನಾರಾಯಣ ಸ್ಮರಣೆಮಾಡುವುದೇ ಪುರುಷಾರ್ಥವೆಂದು ತಿಳಿಯಬೇಕು. ವಿಷಯಾಸಕ್ತ ಮನುಷ್ಯನಿಗೂ ಪಶುವಿಗೂ ವ್ಯತ್ಯಾಸವೇನಿದೆ ? ಆದುದರಿಂದ ನಿರ್ಗುಣಬ್ರಹ್ಮನನ್ನು ಉಪಾಸನೆಮಾಡುವ, ವಿಧಿನಿಷೇಧರಹಿತರಾದ ಮುನಿಗಳು ಶ್ರೀಹರಿಯ ಗುಣಾನುವಾದವನ್ನು ಹೇಳುತ್ತಲೂ ಕೇಳುತ್ತಲೂ ಕಾಲ ಕಳೆಯುವರು. ನಾನು ಈಗ ನಿನಗೆ ಹೇಳುವುದು **ಭಾಗವತವೆಂಬ ಮಹಾ ಪುರಾಣವು.** ಇದು ವೇದಕ್ಕೆ ಸಮಾನವಾದುದು. ಇದನ್ನು ನನ್ನ ತಂದೆಯಾದ ವ್ಯಾಸಮಹರ್ಷಿಗಳು ನನಗೆ ಕಲಿಸಿದರು. ವ್ಯಾಸರು, ನಿರ್ಗುಣೋಪಾಸಕರಾದಾಗ್ಯೂ ಶ್ರೀಹರಿಯ ಮನಮೋಹಕ ಚರಿತ್ರೆಯಿಂದ ಮುಗ್ಧರಾಗಿ ಈ ಆಖ್ಯಾನವನ್ನು ನನಗೆ ಹೇಳಿದರು*. ನೀನು ಇದನ್ನು ಕೇಳು

---

* ಪರಿನಿಷ್ಠಿತೋಽಪಿ ನೈರ್ಗುಣ್ಯೇ ಉತ್ತಮಶ್ಲೋಕಲೀಲಯಾ
ಗೃಹೀತಚೇತಾ ರಾಜರ್ಷೇ ಆಖ್ಯಾನಂ ಯದಧೀತವಾನ್ ॥[೨—೧—೯]

ವುದಕ್ಕೆ ಯೋಗ್ಯನಾದ ಪಾತ್ರನಾಗಿದ್ದೀಯೆ. ರಾಜರ್ಷಿಯಾದ ಭಕ್ತನಾಗಿದ್ದೀಯೆ ಶ್ರದ್ಧಾಳುವಾಗಿದ್ದೀಯೆ ಆದುದರಿಂದ ನಿನಗಿದನ್ನು ಹೇಳುತ್ತಿದ್ದೇನೆ. ಇದನ್ನು ಕೇಳುವವರ ಬುದ್ಧಿಯು ಶುದ್ಧವಾಗಿ ಪರಮಾತ್ಮನ ಚರಣಕಮಲಗಳನ್ನು ಸೇರುವುದು. ಯಾರಿಗೆ ಸಂಸಾರದಲ್ಲಿ ವೈರಾಗ್ಯ ಹುಟ್ಟುತ್ತದೋ ಯಾರು †ಅಕುತೋಭಯರಾಗಲು ಇಷ್ಟಪಡುವರೋ ಅಂತಹ ಯೋಗಿಗಳಿಗೆ ಹರಿಸ್ಮರಣೆಯೇ ಮುಖ್ಯ ಕರ್ತವ್ಯವು. ವಿಷಯಗಳಲ್ಲಿ ಆಸಕ್ತರಾಗಿ ಸತ್ತನಂತರ ಮುಂದಿನ ಗತಿಯನ್ನೂ ಪರಲೋಕವನ್ನೂ ಆಲೋಚಿಸದಿರುವವರು ಬಹುಕಾಲ ಬದುಕಿದರೇನು ಪ್ರಯೋಜನ? ತನ್ನ* ಪಾರಲೌಕಿಕ ಕಲ್ಯಾಣವು ಸಿದ್ಧವಾಗುವುದಾದರೆ ಎರಡುಘಳಿಗೆ ಬದುಕಿದರೂ ಸಾಕು ಎಂದೇ ನಮ್ಮ ಅಭಿಪ್ರಾಯ. ರಾಜರ್ಷಿಯಾದ ಖಟ್ವಾಂಗನು ತನಗೆ ಒಂದು ಮುಹೂರ್ತಮಾತ್ರವೇ ಆಯುಸ್ಸಿರುವುದೆಂದು ತಿಳಿದೊಡನೆಯೇ ತಟ್ಟನೆ ಸಮಸ್ತ ಸಂಸಾರದ ಅಭಿಮಾನವನ್ನು ತ್ಯಾಗಮಾಡಿ ಶ್ರೀಹರಿಯನ್ನು ಶರಣುಹೊಂದಿ ಮೋಕ್ಷವನ್ನು ಪಡೆಯಲಿಲ್ಲವೇ? ನಿನಗೆ ಏಳು ದಿನಗಳು ಅವಧಿಯು ಇರುವಾಗ ಭಯಪಡುವುದೇಕೆ? ಮರಣಕಾಲದಲ್ಲಿ ಮಾಡಬೇಕಾದುದೇನೆನ್ನುವಿಯೋ? ಭಯವನ್ನು ತ್ಯಜಿಸಿ ದೇಹದ ಮತ್ತು ಕುಟುಂಬದ ಮೇಲಿನ ಮೋಹವನ್ನು ದೂರಮಾಡಬೇಕು. ಮನೆಯಿಂದ ಹೊರಹೊರಟು ಯಾವುದಾದರೊಂದು ಪವಿತ್ರ ಏಕಾಂತಸ್ಥಾನವನ್ನು ಸೇರಬೇಕು. ಪವಿತ್ರವಾದ ತೀರ್ಥಜಲದಲ್ಲಿ ಸ್ನಾನಮಾಡಿ ವಿಧಿವತ್ತಾಗಿ ಆಸನಹಾಕಿಕೊಂಡು ಕುಳಿತುಕೊಳ್ಳಬೇಕು. ಮನಸ್ಸನ್ನು ಸ್ಥಿರವಾಗಿಮಾಡಿ ಶುದ್ಧಾಂತಃಕರಣದಿಂದ ಬ್ರಹ್ಮಬೀಜವಾದ ಓಂಕಾರವನ್ನು ಧ್ಯಾನಿಸಬೇಕು. ಶ್ವಾಸವನ್ನು ನಿರೋಧ ಮಾಡಿ ಪ್ರಣವ ಜಪಮಾಡುತ್ತಿರಬೇಕು. ವಿಷಯಗಳನ್ನು ಇಂದ್ರಿಯಗಳಿಂದಲೂ, ಆ ಇಂದ್ರಿಯಗಳನ್ನು ಮನಸ್ಸಿನಿಂದಲೂ ಹಿಂದಿರುಗಿಸಿ ವಿಷಯ ವ್ಯಾಪಾರಗಳಲ್ಲಿ ಬಹಿರ್ಮುಖವಾದ ಮನಸ್ಸನ್ನು ಬುದ್ಧಿಯ ಸಹಾಯದಿಂದ

---

†ಸಮಸ್ತ ವ್ಯವಹಾರಗಳಿಂದಲೂ ನಿರ್ಭಯರಾಗುವರು.

*ಕಿಂ ಪ್ರಮತ್ತಸ್ಯ ಬಹುಭಿಃ ಪರೋಕ್ಷೈರ್ಹಾಯನೈರಿಹ ।
ವರಂ ಮುಹೂರ್ತಂ ವಿದಿತಂ ಘಟೇತ ಶ್ರೇಯಸೇ ಯತಃ ॥ [೨-೧-೧೨]

ಶ್ರೀಹರಿಸ್ಮರಣೆಯಲ್ಲಿ ನಿಲ್ಲಿಸಬೇಕು. ಅದೇ ಮನಸ್ಸಿನ ಚಿತ್ತದ ಸಹಾಯದಿಂದ ಶ್ರೀಹರಿಯ ಒಂದೊಂದು ಅವಯವವನ್ನು ಧ್ಯಾನಿಸಲು ಪ್ರಾರಂಭಿಸಬೇಕು ಮನಸ್ಸನ್ನು ಎಲ್ಲಾ ಚಿಂತೆಗಳಿಂದಲೂ ಬಿಡಿಸಿರಬೇಕು. ಪರಮಾತ್ಮನ ಧ್ಯಾನವಲ್ಲದ ಬೇರಾವ ಚಿಂತೆಯೂ ಹತ್ತದಂತೆ ತಡೆಯಬೇಕು. ಹೀಗೆ ಪ್ರಯತ್ನಪೂರ್ವಕ ಮನಸ್ಸನ್ನು ಶ್ರೀಹರಿಯರೂಪದಲ್ಲಿ ಲೀನಮಾಡಬೇಕು. **ಇದೇ ಶ್ರೇಷ್ಠವಾದ ಧರ್ಮ. ಇದೇ ಪರಮಪದ. ಇಲ್ಲಿಯೇ ಮನಸ್ಸನ್ನು ಶಾಂತವಾಗಿರಿಸುವುದು ಸಾಧ್ಯ.** ಶಾರೀರಿಕ ಸಂಸ್ಥವಾದ ಈ ಅಂತಃಕರಣವು ರಜೋಗುಣ ತಮೋಗುಣಗಳ ಸಹವಾಸದಿಂದ ವಿಮೂಢವಾಗುತ್ತದೆ* ಈ ಎರಡು ಗುಣಗಳ ವೇಗವನ್ನು ಸಾಹಸದಿಂದ ತಡೆಯಬೇಕು. ಹೀಗೆ ಬಾರಿಬಾರಿಗೂ ರಜಸ್ತಮೋಗುಣಗಳ ವಿಕಾರವನ್ನು ತಡೆಯುತ್ತಿದ್ದರೆ, ಚಿತ್ತವನ್ನು ಧಾರಣೆಯಲ್ಲಿ ನಿಲ್ಲಿಸುತ್ತಿದ್ದರೆ ಕ್ರಮೇಣ ಅವುಗಳ ವೇಗವು ಕಡಿಮೆಯಾಗಿ ಅವುಗಳ ಮಾಲಿನ್ಯದಿಂದ× ಬಿಡಲ್ಪಟ್ಟ ಮನಸ್ಸು ಶುದ್ಧವಾಗುವುದು ಭಕ್ತನಾಗ ಯೋಗಿಯಾಗುತ್ತಾನೆ.

ಇದು ಸಿದ್ಧಿಯಾದನಂತರ ಯಾವುದು ತನಗೆ ಶ್ರೇಯಸ್ಕರವಾದುದು ? ಅಥವಾ ಯಾವುದು ಅಹಿತವಾದುದು ? ಎಂಬುದನ್ನು ತಿಳಿಯಲು ಶಕ್ತನಾಗುತ್ತಾನೆ

**ಪರೀಕ್ಷಿತ:**–ಮಹಾನುಭಾವರೆ! ತಾವು ಹೇಳುವ ಉಪಾಯವು ಅತ್ಯುತ್ತಮವಾದುದು ಆದರೆ ಎಂತಹ ಧಾರಣೆಯು ಸರ್ವಸಮ್ಮತವಾದುದು ? ಹೇಗೆ ಧ್ಯಾನಮಾಡಿದರೆ ಮನಸ್ಸಿನ ದೋಷವು ನಾಶವಾಗುವುದು ?

**ಶುಕ:**–ಮುಂಚೆ ಆಸನವನ್ನು† ಜಯಿಸಬೇಕು. ನಂತರ ಶ್ವಾಸವನ್ನು ಜಯಿಸಿ ನಂತರ ಸಂಗವನ್ನೂ, ಅನಂತರ ಇಂದ್ರಿಯಗಳನ್ನೂ ಜಯಿಸಿ ಪರಮಾತ್ಮನ ವಿರಾಟರೂಪದಲ್ಲಿ ವಾಸನೆಯನ್ನೂ ಮನಸ್ಸನ್ನೂ ನಿಲ್ಲಿಸಬೇಕು.

---

* ಮೋಹಿತವಾಗುವುದು

× ಕೊಳೆಯಿಂದ

† ಅಲುಗಾಡದೇ ಬಹುಕಾಲ ನಿಲ್ಲುವ ಅಭ್ಯಾಸ

ರಾಜಃ—ಅದು ಹೇಗೆ ?

**ಶುಕಃ—ನಿನಗೆ ಈಗ ಕಾಣುತ್ತಿರುವ ಜಗತ್ತೂ, ಚತುರ್ದಶ ಭುವನಗಳೂ, ಮಹಾವಿಷ್ಣುವಿನ ವಿರಾಟ್ ಶರೀರ ರೂಪವಾಗಿವೆ.** ಜಗತ್ತಿನಲ್ಲಿರುವ ಸ್ಥೂಲವಸ್ತುಗಳಲ್ಲೆಲ್ಲಾ ಇದು ಬಲುದೊಡ್ಡದು ತಪೋಲೋಕ ಮುಂತಾದ ಬ್ರಹ್ಮಾಂಡದ ಸಪ್ತಾವರಣಗಳೂ ಸೇರಿದರೆ, ಇದೊಂದು ಮಹಾಶರೀರವಾಗುತ್ತದೆ. ಭೂತ, ಭವಿಷ್ಯತ್, ವರ್ತಮಾನಗಳಲ್ಲಿ ಎಲ್ಲವೂ ಇದರಲ್ಲಿ ಕಾಣಬರುವುದು. ಈ ದೊಡ್ಡದೇಹದಲ್ಲಿ ವಿರಾಜಮಾನನಾಗಿರುವ ಮಹಾಶಕ್ತಿಸ್ವರೂಪನಾದ ನೇ ನಿನ್ನ ಧಾರಣೆಗೆ ಆಧಾರವು.

ಈಗ ವಿರಾಟ್ ಸ್ವರೂಪದ ವಿವಿಧ ಅಂಗಗಳನ್ನು ವಿಭಾಗಿಸಿ ವರ್ಣಿಸುವೆವು—ಕೇಳಿರಿ !

**" ಪಾತಾಲಮೇತಸ್ಯ ಹಿ ಪಾದಮೂಲಂ**
**ಪಠನ್ತಿ ಪಾರ್ಷ್ಣಿ ಪ್ರಪದೇ ರಸಾತಲಂ ।**
**ಮಹಾತಲಂ ವಿಶ್ವಸೃಜೋಥ ಗುಲ್ಫೌ**
**ತಲಾತಲಂ ವೈ ಪುರುಷಸ್ಯ ಜಂಘೇ॥**

॥ ಭಾ ೨-೧-೨೬ ॥

**ದ್ವೇ ಜಾನುನೀ ಸುತಲಂ ವಿಶ್ವಮೂರ್ತೇ**
**ರೂರುದ್ವಯಂ ವಿತಲಂ ಚಾತುಲಂ ಚ ।**
**ಮಹಾತಲಂ ತಜ್ಜಘನಂ ಮಹೀಪತೇ**
**ನಭಸ್ಥಲಂ ನಾಭಿಸರೋ ಗೃಣಂತಿ ॥**

॥ ಭಾ ೨-೧-೨೭ ॥

**ಉರಸ್ಥಲಂ ಜ್ಯೋತಿರನೀಕಮಧ್ಯ**
**ಗ್ರೀವಾ ಮಹರ್ವದನಂ ವೈ ಜನೋಽಸ್ಯ ।**
**ತಪೋ ರರಾಟಿಂ ವಿದುರಾದಿಪುಂಸಃ**
**ಸತ್ಯಂ ತು ಶೀರ್ಷಾಣಿ ಸಹಸ್ರ ಶೀರ್ಷ್ಣಃ ॥**

॥ ಭಾ-೨-೧ ೨೮ ॥

**ಇಂದ್ರಾದಯೋ ಬಾಹವ ಆಹು ರುಸ್ರಾಃ**
**ಕರ್ಣೌ ದಿಶಃ ಶ್ರೋತ್ರಮಮುಷ್ಯ ಶಬ್ದಃ ।**

ನಾಸತ್ಯದಸ್ರೌ ಪರಮಸ್ಯ ನಾಸೇ
ಘ್ರಾಣೋಽಸ್ಯ ಗಂಧೋ ಮುಖಮಗ್ನಿರಿದ್ಧಃ ॥
॥ ಭಾ-೨-೧-೨೯ ॥

ದ್ಯೌರಕ್ಷಿಣೀ ಚಕ್ಷುರಭೂತ್ಪತಂಗಃ
ಪಕ್ಷ್ಮಾಣಿ ವಿಷ್ಣೋರಹನೀ ಉಭೇ ಚ ।
ತದ್ಭ್ರೂವಿಜೃಂಭಃ ಪರಮೇಷ್ಠಿ ಧಿಷ್ಣ್ಯ
ಮಾಪೋಽಸ್ಯ ತಾಲೂರಸ ಏವ ಜಿಹ್ವಾ ॥
॥ ಭಾ-೨-೧-೩೦ ॥

ಛಂದಾಂಸ್ಯನಂತಸ್ಯ ಶಿರೋ ಗೃಣಂತಿ
ದಂಷ್ಟ್ರಾ ಯಮಃ ಸ್ನೇಹಕಲಾ ದ್ವಿಜಾನಿ ।
ಹಾಸೋ ಜನೋನ್ಮಾದಕರೀ ಚ ಮಾಯಾ
ದುರಂತ ಸರ್ಗೋ ಯದಪಾಂಗ ಮೋಕ್ಷಃ ॥
॥ ಭಾ ೨-೧-೩೧ ॥

ವ್ರೀಡೋತ್ತರೋಷ್ಠೋಽಧರ ಏವ ಲೋಭೋ
ಧರ್ಮಃ ಸ್ತನೋಽಧರ್ಮಪಥೋಽಸ್ಯ ಪೃಷ್ಠಃ ।
ಕಸ್ತಸ್ಯ ಮೇಢ್ರಂ ವೃಷಣೌ ಚ ಮಿತ್ರೌ
ಕುಕ್ಷಿಸ್ಸಮುದ್ರಾ ಗಿರಯೋಽಸ್ಥಿಸಂಘಾಃ ॥
॥ ಭಾ-೨-೧-೩೨ ॥

ನದ್ಯೋಽಸ್ಯ ನಾಡ್ಯೋಽಥ ತನೂರುಹಾಣಿ
ಮಹೀರುಹಾ ವಿಶ್ವತನೋರ್ನೃಪೇಂದ್ರ ।
ಅನಂತವೀರ್ಯಃ ಶ್ವಸತಿಂ ಮಾತರಿಶ್ವಾ
ಗತಿರ್ವಯಃ ಕರ್ಮ ಗುಣಪ್ರವಾಹಃ ॥
॥ ಭಾ ೨-೧-೩೩ ॥

ಈಶಸ್ಯ ಕೇಶಾನ್ ವಿದುರಂಬುವಾಹಾನ್
ವಾಸಸ್ತು ಸಂಧ್ಯಾಂ ಕುರುವರ್ಯಭೂಮ್ನಃ ।
ಅವ್ಯಕ್ತಮಾಹುರ್ಹೃದಯಂ ಮನಶ್ಚ
ಸ ಚಂದ್ರಮಾಃ ಸರ್ವವಿಕಾರಕೋಶಃ ॥
॥ ಭಾ ೨-೧-೩೪ ॥

ವಿಜ್ಞಾನಶಕ್ತಿಂ ಮಹಿಮಾಮನಂತಿ

ಸರ್ವಾತ್ಮನೋಂತಃಕರಣಂ ಗಿರಿತ್ರಂ ।
ಅಶ್ವಾಶ್ವತರ್ಯುಷ್ಟ್ರಗಜಾ ನಖಾನಿ
ಸರ್ವೇ ಮೃಗಾಃ ಪಶವಃ ಶ್ರೋಣಿದೇಶೇ ॥
॥ ಭಾ ೨-೧-೩೫ ॥

ವಯಾಂಸಿ ತದ್ವ್ಯಾಕರಣಂ ವಿಚಿತ್ರಂ
ಮನುರ್ಮನೀಷಾ ಮನುಜೋ ನಿವಾಸಃ ।
ಗಂಧರ್ವವಿದ್ಯಾಧರಚಾರಣಾಪ್ಸರಾಃ
ಸ್ವರಃ ಸ್ಮೃತೀರಸುರಾನೀಕವೀರ್ಯಃ ॥
॥ ಭಾ ೨-೧-೩೬ ॥

ಬ್ರಹ್ಮಾನನಂ ಕ್ಷತ್ರಭುಜೋ ಮಹಾತ್ಮಾ
ವಿಡೂರುರಂಘ್ರಿಶ್ರಿತಕೃಷ್ಣವರ್ಣಃ ।
ನಾನಾಭಿಧಾಭೀಜ್ಯಗಣೋಪಪನ್ನೋ
ದ್ರವ್ಯಾತ್ಮಕಃ ಕರ್ಮವಿತಾನಯೋಗಃ ॥
॥ ಭಾ ೨-೧-೩೭ ॥

ಇಯಾನಸಾವೀಶ್ವರ ವಿಗ್ರಹಸ್ಯ ಯಃ
ಯಃ ಸನ್ನಿವೇಶಃ ಕಥಿತೋ ಮಯಾ ತೇ ।
ಸಂಧಾರ್ಯತೇಽಸ್ಮಿನ್ ವಪುಷಿ ಸ್ಥವಿಷ್ಠೇ
ಮನಃ ಸ್ವಬುದ್ಧ್ಯಾ ನ ಯತೋಽಸ್ತಿ ಕಿಂಚಿತ್ ॥
॥ ಭಾ ೨-೧-೩೮ ॥

ವೇದಜ್ಞರಾದ ಪಂಡಿತರು ಈ ವಿರಾಟ್ ಪುರುಷನ [illegible]ಂಗಾಲನ್ನು ಪಾತಾಳವೆಂದೂ, ಚರಣದ ಉಪವಿಭಾಗಗಳನ್ನು ರಸಾತಲವೆಂದೂ, ಎರಡು ಚರಣಗಳ ಗುಲ್ಫಗಳನ್ನು ಮಹಾತಲವೆಂದೂ, ಎರಡು ಜಂಘೆಗಳನ್ನು ತಲಾತಲವೆಂದೂ, ಆತನ ಎರಡು ಜಾನುಗಳನ್ನು ಸುತಲವೆಂದೂ, ಎರಡು ತೊಡೆಗಳನ್ನು ಅತಲ ವಿತಲಗಳೆಂದೂ, ಹೇಳುತ್ತಾರೆ. ಜಘನಪ್ರದೇಶವನ್ನು ಮಹೀತಳವೆಂದೂ, ನಾಭಿಯನ್ನು ನಭಸ್ಥಲವೆಂದೂ, ಹೇಳುತ್ತಾರೆ. ಸ್ವರ್ಗಲೋಕವು ಪರಮಾತ್ಮನ ಹೊಟ್ಟೆಯಾಗಿದೆ. ಮಹರ್ಲೋಕವು ಕುತ್ತಿಗೆಯು, ಜನೋಲೋಕವು ಮುಖವು, ತಪೋಲೋಕವು ಲಲಾಟವು, ಸಹಸ್ರ ಶೀರ್ಷನಾದ ಈಶ್ವರನ ಶಿರಸ್ಸು ಸತ್ಯಲೋಕವಾಗಿದೆ. ಇಂದ್ರಾದಿ ದೇವತೆಗಳೇ ಬಾಹು

ಗಳು. ಹತ್ತು ದಿಕ್ಕುಗಳು [illegible]ಗಳು. ಶಬ್ದವೇ ಶ್ರವಣೇಂದ್ರಿಯವು. ಅಶ್ವಿನೀ ಕುಮಾರರು ಮೂಗಿನ ಎರಡು ಹೊಳ್ಳೆಗಳು. ಗಂಧಶಕ್ತಿಯೇ ಘ್ರಾಣೇಂದ್ರಿಯವು ದೇದೀಪ್ಯಮಾನನಾದ ಅಗ್ನಿಯೇ ಮುಖದ ಒಳಭಾಗವು. ಅಂತರಿಕ್ಷವೇ ಆತನ ವರ್ಣಗಳು. ಸೂರ್ಯನೇ ಚಕ್ಷುರಿಂದ್ರಿಯವು, ರೆಪ್ಪೆಗಳೇ ಹಗಲುರಾತ್ರಿಗಳು. ಹುಬ್ಬು ಬ್ರಹ್ಮನ ಆಸನವು, ಜಲವೇ ನಾಲಿಗೆಯ ರಸಶಕ್ತಿ ಜಿಹ್ವೇಂದ್ರಿಯವು ವೇದಗಳೇ ಆತನ ಬ್ರಹ್ಮರಂಧ್ರವು, ಯಮರಾಜನೇ ಆತನ ದವಡೆಯು. ಎಲ್ಲಾ ವಿಧವಾದ ಕೊಬ್ಬು ಆತನ ಹಲ್ಲುಗಳು. ಲೋಕಮೋಹಿನಿಯಾದ ಮಾಯೆಯೇ ಆತನ ಮಂದಹಾಸವು. ಅನಂತಸೃಷ್ಟಿಯೇ ಆತನ ಕಟಾಕ್ಷವು ಲಜ್ಜೆಯೇ ಮೇಲ್ತುಟಿಯು. ಲೋಭವೇ ಕೆಳದುಟಿಯು. ಪವಿತ್ರವಾದ ಧರ್ಮ ಗಳು ಆತನ ಶರೀರದ ಉತ್ತಮಭಾಗವು ಮತ್ತು ಅಧರ್ಮಗಳೆಲ್ಲಾ ಹಿಂಭಾಗವು. ಸೃಷ್ಟಿಕರ್ತನಾದ ಪ್ರಜಾಪತಿಯು ಆತನ ಜನನೇಂದ್ರಿಯವು. ಮಿತ್ರಾವರು ಣನು ಅಂಡಕೋಶವು, ಸಮುದ್ರವು ಆತನ ಕುಕ್ಷಿಯು. ಪರ್ವತಸಮೂಹವೇ ಮೂಳೆಗಳು. ನದಿಗಳೆಲ್ಲಾ ನಾಡಿಗಳು. ವೃಕ್ಷಸಮೂಹವು ರೋಮಗಳು. ವಾಯುವು ಆತನ ಬ್ವಾಸವು. ಪರಮಪ್ರಬಲನಾದ ಕಾಲ ಕಾಲಪುರುಷನೇ ನಡಿಗೆಯು. ಗುಣಕರ್ಮಪ್ರವಾಹ ರೂಪವಾದ ಸಂಸಾರವೇ ಆತನ ಕರ್ಮವು ಮೇಘಗಳ ಗುಂಪು ಆ ಈಶ್ವರನ ಕೇಶರಾಶಿಯು. ವಿಶ್ವವ್ಯಾಪಿಯಾದ ಆ ದೇವನ ವಸ್ತ್ರವೇ ಸಂಧ್ಯಾಕಾಲವು. ಅವ್ಯಕ್ತ ಮೂಲವಸ್ತುವು ಆತನ ಹೃದಯವು. ಚಂದ್ರನು ಆತನ ಮನಸ್ಸು ಈ ಮನಸ್ಸು ಎಲ್ಲಾ ವಿಕಾರಗಳಿಗೂ ಆಧಾರ ವಾಗಿದೆ ವಿಜ್ಞಾನಸ್ಪೃದ್ಧಿಯೇ ಆತನ ಚಿತ್ತವು. ಪಂಡಿತರು ಮಹತ್ತತ್ವವೆಂದು ಯಾವುದನ್ನು ಸೂಚಿಸುತ್ತಾರೋ ಅದೇ ಆ ಚಿತ್ತದ ಗುಣವು ಅಹಂಕಾರಾತ್ಮಕ ವಾದ ಅಂತಃಕರಣವೇ ಆ ಸರ್ವಾತ್ಮನ ಅಭಿಮಾನವೆನ್ನುತ್ತಾರೆ ರುದ್ರ ದೇವನೇ ಆತನ ಅಂತಃಕರಣವು. ಅಶ್ವ, ಅಶ್ವತರಿ, ಒಂಟೆ, ಆನೆಗಳು ಆತನ ನಖಗಳು. ಎಲ್ಲಾಜಾತಿಯ ಮೃಗಸಮೂಹವು ಆತನ ಶ್ರೋಣಿದೇಶವು ಪಕ್ಷಿ ಗಳು ಆತನ ಕಲಾಕೌಶಲ್ಯದ ವ್ಯಾಕರಣವು ಸ್ವಯಂಭುವು ಆತನ ಬುದ್ಧಿಯು. ಮನುಷ್ಯನೇ ಆತನ ನಿವಾಸಸ್ಥಾನವು. ಗಂಧರ್ವ, ವಿದ್ಯಾಧರ, ಚಾರಣ, ಅಪ್ಸರೆಯರು, ಆತನ ಸ್ವರವು. ದೈತ್ಯಶ್ರೇಷ್ಠನಾದ ಪ್ರಹ್ಲಾದನು ಆತನ

ಸ್ಮರಣಶಕ್ತಿ ಅಥವಾ ಸ್ಮೃತಿ. ಬ್ರಾಹ್ಮಣನು ಮುಖವು. ಕ್ಷತ್ರಿಯನು ಭುಜವು, ವೈಶ್ಯನು ತೊಡೆಯು. ಶೂದ್ರನು ಚರಣವು. ವಿವಿಧವಾದ ಯಜ್ಞಗಳ ನಿಯಮಗಳು, ಅಲ್ಲಿ ಉಚ್ಚರಿಸಲ್ಪಡುವ ದೇವತೆಗಳ ಹೆಸರುಗಳು.

ಯಜ್ಞಗಳಲ್ಲಿ ಉಪಯೋಗಿಸಲ್ಪಡುವ ಹವಿಸ್ಸುಗಳು ಆತನಿಗೇ ಅರ್ಪಣವಾಗುತ್ತವೆ. ಈರೀತಿಯಲ್ಲಿ ಯಾವದೇವನು ಸಮಷ್ಟಿಭೂತನಾಗಿದ್ದಾನೆಯೋ ಆತನ ಅಭಿಪ್ರಾಯವೇ ಪಿಪ್ಪಲ್ಯಾತ್ಮಕವಾದ ಯಜ್ಞರೂಪಗಳಾಗಿವೆ ಎಲೈ ರಾಜನೆ! ನಾನು ನಿನಗೆ ಈಗ ಯಾವ ವಿರಾಟ್‌ಸ್ವರೂಪದ ವರ್ಣನೆಯನ್ನು ಮಾಡಿದ್ದೇನೆಯೋ ಅದರಿಂದ ಈಶ್ವರನ ಸ್ವರೂಪವು ಪ್ರಕಟವಾಗಿದೆ. ಮೋಕ್ಷೇಚ್ಛೆಯುಳ್ಳ ಪುರುಷನು ಅದರ ಆಧಾರದ ಮೇಲೆ ಪರಮಾತ್ಮನ ಈ ಸ್ಥೂಲಶರೀರದ ಸ್ವರೂಪವನ್ನು ತಿಳಿದು ತನ್ನ ಬುದ್ಧಿಯ ಸಹಾಯದಿಂದ ಈ ಈಶ್ವರನ ಸೂಕ್ಷ್ಮರೂಪವನ್ನು ಧಾರಣೆಮಾಡಬೇಕು ಧ್ಯಾನಮಾಡಬೇಕು. ರೂಪವನ್ನು ಬಿಟ್ಟರೆ ಈ ಜಗತ್ತಿನಲ್ಲಿ ಧ್ಯಾನಕ್ಕಾಶ್ರಯವಾದುದಾವುದೂ ಇಲ್ಲವೇ ಇಲ್ಲ. ಹೆಚ್ಚು ಹೇಳುವುದೇನು? ಜೀವನು ಕನಸಿನಲ್ಲಿ ತನ್ನ ಸಂಕಲ್ಪದಿಂದ ಒಂದು ದೇಹವನ್ನು ನಿರ್ಮಾಣಮಾಡಿಕೊಂಡು ಆ ದೇಹದ ಮತ್ತು ಇಂದ್ರಿಯಗಳ ಅನುಭವದ ಸಹಾಯದಿಂದ ತನ್ನ ಸ್ವಪ್ನದ ಉದ್ದೇಶ್ಯವನ್ನು ಹೇಗೆ ಸಿದ್ಧಮಾಡಿಕೊಳ್ಳುತ್ತಾನೆಯೋ ಹಾಗೆಯೇ ಆ ಜಗದೀಶ್ವರನು ತಾನೇ ಆತ್ಮರೂಪದಿಂದ ಸಮಸ್ತ ಜೀವರಾಶಿಯಲ್ಲೂ ನಿಂತು ಬೇರೆಬೇರೆ ನಾಮರೂಪಗಳಿಂದ ಕಲ್ಪಿತನಾಗಿ ಚೈತನ್ಯ ದ್ವಾರ ಎಲ್ಲವನ್ನೂ ಅನುಭವಿಸುತ್ತಾನೆ. ಆದುದರಿಂದ ಹೃದಯದಲ್ಲಿ ಆ ಸತ್ಯರೂಪನಾದ ಅನನ್ಯಸಿಧಿಯಾದ ಈಶ್ವರನನ್ನೇ ಧ್ಯಾನಿಸುವುದು ಕರ್ತವ್ಯ. ಈಶ್ವರನಲ್ಲದೆ ಉಳಿದ ವಸ್ತುಗಳ ಭಾವನೆಯನ್ನು ಬಿಡುವುದು ಯೋಗ್ಯವಾದುದು. ಇತರ ವಸ್ತುಗಳ ಮೇಲಿನ ಭಾವನೆ(ಅಭಿಮಾನ)ಗಳನ್ನು ತ್ಯಾಗಮಾಡದಿದ್ದರೆ ಅಧಃಪತನವಲ್ಲದೆ ಮತ್ತಾವ ಪ್ರಯೋಜನವೂ ಸಿಕ್ಕಲಾರದು. ಆದುದರಿಂದ ಎಲ್ಲಾಯೋಚನೆಗಳನ್ನೂ ಬಿಟ್ಟು ಆ ಈಶ್ವರನನ್ನೇ ಧ್ಯಾನಮಾಡಬೇಕು.

ಜಗತ್ತಿನ ಪ್ರಳಯವಾದ ನಂತರ ಹೊಸ ಸೃಷ್ಟಿಯನ್ನು ಪ್ರಾರಂಭದಲ್ಲಿ

ಮಾಡುವಾಗ ತನ್ನ ಹಿಂದಿನ ಧಾರಣೆಯ ಬಲದಿಂದ ಅನಾದಿಯಾದ ಈಶ್ವರನನ್ನು ತೃಪ್ತಿಪಡಿಸುವುದಕ್ಕಾಗಿ ಆತ್ಮಯೋನಿಯಾದ, ಅಮೋಘದೃಷ್ಟಿಯುಳ್ಳ, ವ್ಯವಸಾಯಬುದ್ಧಿಯುಳ್ಳವ ಬ್ರಹ್ಮದೇವನು ನಷ್ಟವಾದ ಸ್ಮೃತಿಯನ್ನು ಪುನಃ ಹಿಂದಿನಂತೆಯೇ ಪಡೆದು ಅದೇ ಕ್ರಮದಲ್ಲಿಯೇ ಈ ಜಗತ್ತನ್ನು ಉತ್ಪನ್ನ ಮಾಡಿದನು. ಶಬ್ದ ಬ್ರಹ್ಮರೂಪವಾದ ವೇದದಲ್ಲಿ ಹೇಳಿರುವ ಯಜ್ಞಾದಿ ಮಾರ್ಗಗಳಲ್ಲಿ ಪ್ರವೃತ್ತನಾದ ಮನುಷ್ಯನು ಅಶಾಶ್ವತವಾದ ಸ್ವರ್ಗಾದಿ ಸುಖಗಳಿಗೆ ಪ್ರಯತ್ನಿಸುತ್ತಾನೆ. ಆತನಿಗೆ ನಿಜವಾದ ಸುಖವು ಸಿಕ್ಕುವುದಿಲ್ಲ. ಸ್ವರ್ಗಾದಿ ಸುಖಗಳು ಮನೋರಾಜ್ಯವಾದ ಸ್ವಪ್ನದಂತೆಯೇ ಸರಿ. ನಿಜವಾದ ಸುಖವು ಬ್ರಹ್ಮಾನಂದ ಒಂದೇ. ಅದು ಮೇಲೆ ಹೇಳಿದ ಈಶ್ವರಾರಾಧನೆಯಿಂದಲೇ ಸಿಕ್ಕಬಲ್ಲದು. ಆದುದರಿಂದ ವಿವೇಕಿಯಾದ ಮನುಷ್ಯನು ಜಗತ್ತಿನ ಸುಖೋಪಭೋಗ ವಸ್ತುಗಳಲ್ಲಿ ದೇಹರಕ್ಷಣೆಗೆಷ್ಟು ಬೇಕೋ ಅಷ್ಟನ್ನು ಮಾತ್ರ ಇಟ್ಟುಕೊಳ್ಳಬೇಕು. ಆದರಲ್ಲಿಯೂ ಆಸಕ್ತನಾಗದೆ ಅದು ಸುಖವಲ್ಲವೆಂದೇ ತಿಳಿದು ಕರ್ತವ್ಯ ನಿರ್ವಹಣೆಗೆ ಮಾತ್ರ ಅವುಗಳನ್ನು ಸ್ವೀಕರಿಸಬೇಕು. ಕರ್ಮಾನುಗುಣವಾಗಿ ಯಾವಯಾವ ಸುಖದುಃಖಗಳು ಒದಗಬೇಕೋ ಅವು ಪ್ರಯತ್ನವಿಲ್ಲದೆ ಒದಗುವುವು. ಆದುದರಿಂದ ಅವುಗಳಿಗಾಗಿ ಹೆಚ್ಚು ಪ್ರಯತ್ನ ಮಾಡುವ ಅವಶ್ಯಕತೆಯೇ ಇಲ್ಲ. **ಪ್ರಯತ್ನಮಾಡುವುದಾದರೆ ಬ್ರಹ್ಮಾನಂದ ಪ್ರಾಪ್ತಿಗೇ ಪ್ರಯತ್ನಮಾಡಬೇಕು.** ಭೂಮಿಯಂತಹ ಹಾಸಿಗೆ ಇರುವಾಗ ಬೇರೆ ಹಾಸಿಗೆಯ ಅವಶ್ಯಕತೆಯೇನಿದೆ? ತೋಳುಗಳು ಗಟ್ಟಿಯಾಗಿರುವಾಗ ಮತ್ತಾವ ತಲೆದಿಂಬು ಬೇಕು? ಎರಡು ಕೈಗಳನ್ನು ಜೋಡಿಸಿದ ಬೊಗಸೆಯಿರುವಾಗ ನೀರು ಕುಡಿಯಲು ಬೇರೆ ಪಾತ್ರೆ ಬೇಕೆ? ದಿಕ್ಕುಗಳೆಂಬ ಹೊದ್ದಿಕೆಯಿರುವಾಗ ದೇಹದ ಮೇಲೆ ಬಟ್ಟೆಯನ್ನೇಕೆ ಹೊದೆಯಬೇಕು? ಇದೆಲ್ಲವೂ ಇದ್ದರೂ ಅನ್ನವನ್ನೂ ನೀರನ್ನೂ ಭಿಕ್ಷೆಮಾಡದಿದ್ದರೆ ಹೇಗೆನ್ನುವಿಯೋ? ಅದಕ್ಕೂ ಉತ್ತರವಿದೆ. ರಸ್ತೆಯಲ್ಲಿ ಹರಿದುಬಿದ್ದಿರುವ ಚಿಂದಿಗಳಿಲ್ಲವೇ? ಮರಗಳ ಎಲೆಯಿಲ್ಲವೇ? ಮರಗಳಲ್ಲಿ ಹಣ್ಣೇ ಸಿಕ್ಕುವುದಿಲ್ಲವೇ? ನದಿಗಳೆಲ್ಲಾ ಬತ್ತಿಹೋಗಿ ಪ್ರಪಂಚದಲ್ಲಿ ನೀರೇ ಇಲ್ಲದಂತಾಗಿದೆಯೇ? ವಾಸಕ್ಕಾಗಿ ಗುಹೆಗಳಿಲ್ಲವೋ? ಶರಣಾಗತ ರಕ್ಷಕನಾದ ಪರಮಾತ್ಮನಿಗಿಂತಲೂ ಹೆಚ್ಚಿನ

ರಕ್ಷಕರಿನ್ನಾರಿದ್ದಾರೆ? ಇಷ್ಟಾಗಿ ಇರುವಾಗ ಪರಮ ಹಂಸರಾದ ಯೋಗಿಗಳು ಐಶ್ವರ್ಯಾದಿಗಳಿಂದ ಮದಾಂಧರಾದ ಜನಗಳನ್ನೇಕೆ ಅನುಸರಿಸಬೇಕು? ಅವರಲ್ಲೇಕೆ ಯಾಚನೆ ಮಾಡಬೇಕು? ರಾಜ! ಈ ರೀತಿ ಆಲೋಚಿಸುತ್ತಾ ವೈರಾಗ್ಯವನ್ನು ಧಾರಣೆಮಾಡಿ, ತನ್ನ ಶಕ್ತಿಮೀರಿ, ತನ್ನಲ್ಲಿಯೇ ಇರುವ ಆತ್ಮನನ್ನು ಭಜಿಸುವುದೇ ಯೋಗ್ಯ. ಆತ್ಮನಿಗಿಂತ ಹೆಚ್ಚು ಪ್ರೇಮಪಾತ್ರನೂ ಸೇವೆಗೆ ಯೋಗ್ಯನೂ ಮತ್ತಿನ್ನಾರು? ಆತನು ಅರ್ಥಯುಕ್ತನು ಅಥವಾ ಸತ್ಯಸ್ವರೂಪನು ಆ ಆತ್ಮನೇ ಜಗದ್ವ್ಯಾಪಿಯಾದ ಪರಮ ಪುರುಷನು. ಅನಂತನು. ನಿತ್ಯಸಿದ್ಧನು. ಆತನ ಗುಣಗಳೇ ಭಜನೆಗೆ ಯೋಗ್ಯವಾದವು ಆದುದರಿಂದ ಸಾಧಕರು ಆ ಆತ್ಮನ ಅನುಭವಾನಂದದಲ್ಲೇ ಉನ್ಮತ್ತರಾಗಿ, ಆತನನ್ನೇ ಭಜನೆಮಾಡಬೇಕು. ಹೀಗೆ ಮಾಡಿದರೆ ಮಾತ್ರ ಸಂಸಾರಕ್ಕೆ ಕಾರಣವಾದ ಅವಿದ್ಯೆಯು ಅಥವಾ ಮಾಯೆಯು ಶಾಂತವಾಗುವುದು ಇಂತಹ ಭಗವದ್ಭಕ್ತಿಯನ್ನು ತ್ಯಾಗಮಾಡಿ ವಿಷಯಭೋಗವನ್ನು ಪ್ರೀತಿಸುವವನು ಪಶುವಿಗಿಂತಲೂ ಕಡೆ ಈ ಸಂಸಾರ ರೂಪವಾದ ವೈತರಣಿಯಲ್ಲಿ ಕರ್ಮಫಲಸ್ವರೂಪವಾದ ದುಃಖವನ್ನು ಭೋಗಿಸುತ್ತಿರುವ ಪ್ರಾಣಿಗಳನ್ನು ನೋಡಿಯಾದರೂ ಎಚ್ಚರಿಕೆಯನ್ನು ತೆಗೆದುಕೊಳ್ಳದಿರುವ ಮನುಷ್ಯನು ನರಪಶುವಲ್ಲವೇ? ಕೆಲವರು ಸಾಧಕರು ತಮ್ಮ ಹೃದಯದಲ್ಲಿ ಪರಮಾತ್ಮನನ್ನು ಈ ರೀತಿ ಧ್ಯಾನಿಸುತ್ತಾರೆ:—

"ಪರಮಾತ್ಮನು ಹೃದಯ ಸಿಂಹಾಸನದಲ್ಲಿ ಕುಳಿತಿದ್ದಾನೆ. ಆತನ ಶರೀರವು ಪ್ರಾದೇಶ ಮಾತ್ರ; ಹೆಬ್ಬೆರಳಿನಷ್ಟು ನಾಲ್ಕು ಭುಜಗಳಲ್ಲಿಯೂ ಶಂಖ ಚಕ್ರ ಗದಾ ಪದ್ಮಗಳನ್ನು ಧಾರಣೆಮಾಡಿದ್ದಾನೆ. ಮುಖ ಕಮಲವು ಪ್ರಸನ್ನವಾಗಿದೆ. ಕಮಲ ನೇತ್ರಗಳಿಂದ ಶೋಭಿಸುತ್ತಿದ್ದಾನೆ. ಕದಂಬ ಕುಸುಮದಂತೆ ಹಳದಿಯಾದ ಪೀತಾಂಬರವನ್ನು ಧರಿಸಿದ್ದಾನೆ. ನವರತ್ನಖಚಿತವಾದ ಸುವರ್ಣರಚಿತ ಭುಜಕೀರ್ತಿಗಳು ಶೋಭಿಸುತ್ತಿವೆ. ರತ್ನಖಚಿತವಾದ ಮನೋಹರವಾದ ಕಿರೀಟವೂ, ಕನಕ ಕುಂಡಲಗಳೂ, ಮುಖಮಂಡಲದ ಮತ್ತು ಗಂಡಸ್ಥಲದ ಕಾಂತಿಯನ್ನು ಹೆಚ್ಚಿಸುತ್ತಿವೆ. ಭಕ್ತರ ಪ್ರಕ್ಷಾಲಿತವಾದ ಹೃದಯ ಕಮಲದ ಮೇಲೆ ಚರಣಕಮಲಗಳು ವಿರಾಜಿಸುತ್ತಿವೆ.

ಕಂಠದಲ್ಲಿ ಕೌಸ್ತುಭಮಣಿಯೂ ಎಂದೆಂದಿಗೂ ಒಣಗದಿರುವ ವನಮಾಲೆಯೂ ಶೋಭಿಸುತ್ತಿವೆ. ಈ ಪರಮಾತ್ಮನ ಉಡಿದಾರವೂ ಬೆರಳುಗಳಲ್ಲಿನ ಉಂಗುರಗಳೂ ಕೈಗಳಲ್ಲಿನ ಕಂಕಣಗಳೂ ಕಾಲು ಬೆರಳುಗಳಲ್ಲಿನ ಉಂಗುರಗಳೂ ಸೌಂದರ್ಯವನ್ನು ಹೆಚ್ಚಿಸುತ್ತಿವೆ. ಸುಂದರವಾದ ಮುಂಗುರುಳುಗಳಿಂದ ಶೋಭಿತವಾದ ಮಂದಹಾಸಯುಕ್ತ ಮುಖವು ಮನಮೋಹಕವಾಗಿದೆ."

ಭಕ್ತನು ಧ್ಯಾನ ಮಾಡುತ್ತಿರುವವರೆಗೆ ಇಂತಹ ಮೂರ್ತಿಯನ್ನು ಮನಸ್ಸಿನಲ್ಲಿ ಧಾರಣೆ ಮಾಡಬಲ್ಲನೋ ಅಷ್ಟು ಕಾಲದವರೆಗೂ ಪರಮೇಶ್ವರನ ಮಂದ ಸ್ಮಿತ ಪ್ರಸನ್ನ ವದನವನ್ನು—ಉದಾರ ಸ್ವಭಾವ ಯುಕ್ತವಾದ ಭಕ್ತಾನುಗ್ರಹ ಪೂರ್ಣವಾದ ಸುಂದರ ಮೂರ್ತಿಯನ್ನು ದರ್ಶನ ಮಾಡಬಲ್ಲನು. ಧ್ಯಾನ ಮಾಡುವವನು ಮುಂಚೆ ಒಂದೊಂದು ಅಂಗವನ್ನು ಧ್ಯಾನ ಮಾಡಲಾರಂಭಿಸಬೇಕು. ಅಂದರೆ ಪಾದದಿಂದ ಹಿಡಿದು ಶಿರದ ಪರ್ಯಂತ ಪ್ರತಿಯೊಂದು ಅವಯವವನ್ನೂ ತನ್ನ ಹೃದಯದಲ್ಲಿ ಅನುಭವಮಾಡಿಕೊಳ್ಳಬೇಕು. ಪಾದದಿಂದ ಹಿಡಿದು ಮಂದಹಾಸ ಯುಕ್ತವಾದ ಮುಖಕಮಲದವರೆಗೆ ಒಂದೊಂದು ಅವಯವವನ್ನೇ ಧ್ಯಾನಮಾಡುತ್ತಾ ಅದು ಚೆನ್ನಾಗಿ ಎಚ್ಚರದಲ್ಲಿ ಎದುರಿಗಿದ್ದಂತೆ ಕಾಣುವವರೆಗೂ ಎಡೆಬಿಡದೆ ಧ್ಯಾನಿಸುತ್ತಾ ಅದು ಸಂಪೂರ್ಣವಾಗಿ ಮನಸ್ಸಿಗೆ ಸ್ವಾಧೀನಕ್ಕೆ ಬಂದನಂತರ ಅದನ್ನು ಬಿಟ್ಟು ಮೇಲಿನ ಅವಯವವನ್ನು ಧ್ಯಾನಕ್ಕೆ ನಿಲ್ಲಿಸಿಕೊಳ್ಳುತ್ತಾ ಹೋಗಬೇಕು. ಹೀಗೆ ಮಾಡುತ್ತಾ ಬರುವಾಗ ಆತನ ಬುದ್ಧಿಯೂ ಶುದ್ಧವಾಗುತ್ತಾ ಬರುವುದು. ನಿಶ್ಚಲ ಮನಸ್ಸಿನಿಂದ ಸತತವೂ ಪ್ರಯತ್ನಮಾಡಿದರೆ ಮಾತ್ರ ಸಂಪೂರ್ಣ ಮೂರ್ತಿಯನ್ನು ಹೃದಯದಲ್ಲಿ ಧಾರಣೆಮಾಡಿ ಧ್ಯಾನಕ್ಕೆ ನಿಲ್ಲಿಸಿಕೊಳ್ಳುವುದು ಸಾಧ್ಯವಾಗುವುದು. ಎಲ್ಲಿಯವರೆಗೆ ಸಾಧಕನು ಈ ಸೂಕ್ಷ್ಮರೂಪವನ್ನು ಧ್ಯಾನದಲ್ಲಿ ನಿಲ್ಲಿಸಿಕೊಳ್ಳಲು ಶಕ್ತನಾಗುವುದಿಲ್ಲವೋ ಅಲ್ಲಿಯವರೆಗೂ ಆತನು ನಿತ್ಯ ನೈಮಿತ್ತಿಕ ಕರ್ಮಗಳಿಂದ ವಿಶ್ರಾಂತಿಹೊಂದಿ ಸರ್ವವ್ಯಾಪಿಯಾದ ಈ ಜಗತ್ಸೃಷ್ಟಿ ರೂಪವಾದ ಈಶ್ವರನ ವಿರಾಡ್ರೂಪವನ್ನು ಧ್ಯಾನಿಸುತ್ತಿರಬೇಕು. **ವೈರಾಗ್ಯವು ಹುಟ್ಟುವುದಕ್ಕೂ ಬುದ್ಧಿಯು ಶುದ್ಧವಾಗುವುದಕ್ಕೂ ವಿರಾಡ್ರೂಪವು ಅವಶ್ಯಕ.** ಭಕ್ತಸಾಧಕನು ಈ ಲೋಕವನ್ನು

(ದೇಹವನ್ನು)ಬಿಡುವ ಸಮಯದಲ್ಲಿ ಶಾಂತನಾದ ಪವಿತ್ರಸ್ಥಳದಲ್ಲಿ ತನಗೆ ಅನುಕೂಲವಾದ ಆಸನದಲ್ಲಿ ಕುಳಿತು ಕೊಳ್ಳಬೇಕು. ನಂತರ ಅಂಗಗಳನ್ನು ವಿಚಾರಮಾಡದೆ ಮನಸ್ಸನ್ನು ಇಂದ್ರಿಯಗಳಿಂದ ಬಂಧಿಸಿ ನವ ಪ್ರಾಣಾಯಾಮದಲ್ಲಿ ಪ್ರವೃತ್ತನಾಗಬೇಕು. ತನ್ನ ವಿವೇಕರೂಪಿಯಾದ ನಿರ್ಮಲ ಬುದ್ಧಿಯಿಂದ ಮನಸ್ಸನ್ನು ಕ್ಷೇತ್ರಜ್ಞನಲ್ಲಿಯೂ ಆ ಶುದ್ಧಬುದ್ಧಿಯನ್ನು ಜೀವಾತ್ಮನಲ್ಲಿಯೂ ಆ ಜೀವಾತ್ಮನನ್ನು ಪರಬ್ರಹ್ಮನಲ್ಲಿಯೂ ಲೀನಮಾಡಿ ಬಾಹ್ಯಕೃತ್ಯಗಳಿಂದ ವಿಮುಕ್ತನಾಗಬೇಕು. ಈ ಸ್ಥಿತಿಯಲ್ಲಿ ಧೀರನಾದ ಪುರುಷನಿಗೆ ಪೂರ್ಣ ಶಾಂತಿಯು ಸಿಕ್ಕಬಲ್ಲದು. ಎಲ್ಲರನ್ನೂ ದಮಿಸುವ ಬಲಶಾಲಿಯಾದ ಕಾಲನ ಭಯವು ಇರುವುದಿಲ್ಲ. ಕಾಲಕ್ಕೆ ಅಧೀನವಾದ ಶಕ್ತಿಗಳ—ದೇವತೆಗಳ ಭಯವಿನ್ನೆಲ್ಲಿದೆ? ಸತ್ವರಜಸ್ತಮೋಗುಣಗಳ ವಿಕಾರವಾಗಲೀ ಮಹತ್ತತ್ವ—ಅಹಂಕಾರಗಳ ವಿಕಾರವಾಗಲಿ ಇಲ್ಲ. ಇಲ್ಲವೇ ಇಲ್ಲ. **ಇದೇ ಬ್ರಹ್ಮಾಂಡದ—ಪರಮಶಾಂತಿಪದವು** ಈ ಸ್ಥಿತಿಯಲ್ಲಿ ಸಹಜಶಾಂತಿಯು ಸಾಧ್ಯವಾಗುವುದು ಎಂಬ ವಿಷಯದಲ್ಲಿ ಎಷ್ಟು ಹೇಳಿದರೂ ಸ್ವಲ್ಪವೇ. ಸರಿ ತತ್ವವಾದಿಗಳು ಜೀವತತ್ವವನ್ನು ನಿಶ್ಚಯ ಮಾಡುವುದರಲ್ಲಿ ಕೆಲವರು ಆತ್ಮನನ್ನೇ ಶ್ರೇಷ್ಠನೆನ್ನುತ್ತಾರೆ. ಇನ್ನು ಕೆಲವರು ಆತ್ಮನಿಗಿಂತಲೂ ಭಿನ್ನ ಪರಮಾತ್ಮತತ್ವವಿದೆ ಎನ್ನುತ್ತಾರೆ. ಆದರೆ ಕೊನೆಗೆ ಅವರ ಸಂಶಯಗಳೆಲ್ಲಾ ದೂರವಾಗುತ್ತವೆ. ಜೀವಾತ್ಮನು ತನ್ನ ಶಾಂತಿಗಾಗಿ ಸಾವಧಾನ ಮನಸ್ಕನಾಗಿ ತನ್ನ ಹೃದಯದಲ್ಲಿ ಪರಮ ಪವಿತ್ರನಾದ ಪರಮಾತ್ಮನನ್ನು ಪ್ರತಿಕ್ಷಣದಲ್ಲಿಯೂ ಚಿಂತನೆಮಾಡುವುದೇ ಕರ್ತವ್ಯವೆಂದೂ, ಆ ಪರಮಾತ್ಮನನ್ನೇ ಪರಮಪದವೆಂದೂ, ಸ್ವೀಕಾರಮಾಡುತ್ತಾರೆ.

ಮೇಲೆ ಹೇಳಿದ ರೀತಿಯಲ್ಲಿ ಸಮಾಧಿಸ್ಥನಾದ ಮುನಿಯು ಜೀವನ್ಮುಕ್ತಾವಸ್ಥೆಯನ್ನು ಪಡೆಯುತ್ತಾನೆ. ಜೀವನ್ಮುಕ್ತಾವಸ್ಥೆಯು ಬೇಡವಾಗಿ ದೇಹತ್ಯಾಗಮಾಡುವುದೇ ಇಷ್ಟವಾದರೆ ವಿಷಯವಾಸನೆಯನ್ನು ತ್ಯಜಿಸಿ, ಕ್ಲೇಶವನ್ನು ಜಯಿಸಿ, ಆ ಯೋಗಿಯು ಆಸನದಲ್ಲಿ ಕುಳಿತು ಗುದದ್ವಾರವನ್ನು ಕಾಲಿನ ಹಿಮ್ಮಡಿಯಿಂದ ಒತ್ತಿಹಿಡಿದು ವಾಯುವನ್ನು ಮೇಲಕ್ಕೆ ಎಳೆದುಕೊಳ್ಳಬೇಕು. ಗುಹ್ಯಸ್ಥಾನದಿಂದ ನಾಭಿಗೂ ನಾಭಿಯಿಂದ ಹೃದಯಕ್ಕೂ ಎಳೆದುಕೊಳ್ಳಬೇಕು ಉದಾನ ವಾಯುವಿನ ಸಹಾಯದಿಂದ ಪ್ರಾಣವಾಯುವನ್ನು ಕಂಠದಿಂದ ಕೆಳಗೆ ವಕ್ಷಃಸ್ಥಳದಲ್ಲಿ ನಿಲ್ಲಿಸಬೇಕು. ಸದ್ಬುದ್ಧಿಯ ಸಹಾಯದಿಂದ ಮನಸ್ಸಿನ ಮೇಲೆ ಅಧಿಕಾರವನ್ನು ಹೊಂದಿರುವ ಆ ಯೋಗಿಯು ಕಂಠದ ಕೆಳಗಿನಿಂದ ತಾಲು ಮೂಲಕ್ಕೆ—ನಾಲಿಗೆಯ ಬುಡಕ್ಕೆ ಒಯ್ಯಬೇಕು. ಅಲ್ಲಿಂದ ಅದನ್ನು ಭ್ರೂಮಧ್ಯಕ್ಕೆ ತಂದು ನಿಲ್ಲಿಸಿ ಮುಖದ ಏಳು ರಂಧ್ರಗಳನ್ನು ಮುಚ್ಚಿ ಏನೊಂದೂ ಯೋಚಿಸದೆ ಏಕಾಗ್ರದೃಷ್ಟಿಯುಳ್ಳವನಾಗಬೇಕು. ಹೀಗೆ ಮಾಡಿದರೆ ಪ್ರಾಣವಾಯುವು ಅರ್ಧ ಮುಹೂರ್ತದಲ್ಲಿ ಬ್ರಹ್ಮರಂಧ್ರವನ್ನು ಭೇದಿಸಿ ದೇಹದಿಂದ ಹೊರಕ್ಕೆ ಬಂದು ಬ್ರಹ್ಮದಲ್ಲಿ ಲೀನವಾಗುವುದು. ಆಕಾಶವಿಹಾರಿಗಳಾದ ಸಿದ್ಧಗಣಗಳು ವಾಸಮಾಡುವ ಪಾರಮೇಷ್ಠ್ಯ ಪದದಲ್ಲಿ ಸುಖಿಸಬೇಕೆಂದು ಇಷ್ಟಪಡುವುದಾದರೆ ಮತ್ತು ಈ ತ್ರಿಗುಣಾತ್ಮಕವಾದ ಬ್ರಹ್ಮಾಂಡದಲ್ಲಿ ಆಷ್ಟಾಧಿಪತ್ಯವನ್ನು ಸ್ಥಾಪನೆಮಾಡಲು ಅಂದರೆ ಅಣಿಮಾದಿ ಅಷ್ಟಸಿದ್ಧಿಗಳನ್ನುಹೊಂದಿ ಬ್ರಹ್ಮಾಂಡದಲ್ಲಿ ಮನಬಂದೆಡೆ ಸಂಚರಿಸಲು ಇಷ್ಟಪಡುವುದಾದರೆ ದೇಹಾಂತ ಕಾಲದಲ್ಲಿ ಮನಸ್ಸು ಇಂದ್ರಿಯಗಳಿಂದೊಡಗೂಡಿದ ಲಿಂಗ ಶರೀರವನ್ನು ತ್ಯಾಗಮಾಡಬಾರದು. ಪರಮಾತ್ಮನಲ್ಲಿ ಲೀನರಾದ ಯೋಗಿಗಳು ಲೋಕತ್ರಯಗಳ ಒಳಗೂ ಹೊರಗೂ ಸಂಚರಿಸಬಲ್ಲರು. ಅವರು ಬೇಕಾದಲ್ಲಿಗೆ ಹೋಗಬಲ್ಲರು ಯಜ್ಞಾದಿ ಕರ್ಮಗಳಿಂದ ವಿದ್ಯಾ, ತಪ, ಯೋಗ, ಸಮಾಧಿಗಳಿಂದ, ಈ ಅಮೋಘ ಗತಿಯು ಪ್ರಾಪ್ತವಾಗಲರಿಯದು. ಈ ಯೋಗಿಗಳು ಹೇಗೆ ಪರಮಾತ್ಮನಲ್ಲಿ ಲೀನರಾಗುತ್ತಾರೆಂದರೆ ವೈಶ್ವಾನರ ಅಗ್ನಿಯ ಸಹಾಯದಿಂದ ಶೂನ್ಯಮಾರ್ಗದಲ್ಲಿ ಆರೋಹಣಮಾಡಿ ಜ್ಯೋತಿರ್ಮಯವಾದ ಬ್ರಹ್ಮಮಾರ್ಗದಲ್ಲಿ ಬ್ರಹ್ಮವೀಥಿಸ್ವರೂಪವಾದ ಸುಷುಮ್ನಾ

ನಾಡಿಯಸಹಾಯದಿಂದ ಎಲ್ಲಾ ದೋಷಗಳಿಂದಲೂ ವಿಮುಕ್ತರಾಗಿ ಪರಮಾತ್ಮ ತೇಜಸ್ಸಿನ ಉದಯಸ್ಥಾನವಾದ ಶಿಂಶುಮಾರ ಚಕ್ರವನ್ನು ಸೇರಿರುತ್ತಾರೆ.ಆ ಶಿಂಶುಮಾರ ಚಕ್ರವು ಈ ಜಗತ್ತಿನ ನಾಭಿಯಂತೆ ಇದೆ. ಈ ವಿಷ್ಣು ಚಕ್ರವನ್ನು ದಾಟಿ ಸಮಸ್ತತತ್ವವಿಕಾರರೂಪವಾದ ರಜೋಗಣದಿಂದ ವಿಶುದ್ಧರಾಗಿ ಪರಮಸೂಕ್ಷ್ಮಾತ್ಮರೂಪವಾದಲಿಂಗ ಶರೀರದ ಸಹಾಯದಿಂದ ಬ್ರಹ್ಮಜ್ಞಾನಿಗಳು ನಮಸ್ಕರಿಸುವ ಕಲ್ಪಾಂತದವರೆಗೂ ದೇವಗಣಗಳು ಎಲ್ಲಿ ವಾಸ ಮಾಡುವರೋ ಅಂತಹ ಪವಿತ್ರಸ್ಥಾನವನ್ನು ಯೋಗಿಗಳು ಹೊಂದುತ್ತಾರೆ. ಅವರು ಪ್ರಳಯಕಾಲದಲ್ಲಿ ಇತರ ಪ್ರಾಣಿಗಳಂತೆ ದಹಿಸಲ್ಪಡುವುದಿಲ್ಲ. ವಿಮಾನವಿಹಾರಿಗಳಾದ ಸಿದ್ಧಗಣಗಳ ಎರಡೂವರೆಯಷ್ಟು ಕಾಲಪರಿಮಿತಿಯವರೆಗೆ ಪಾರಮೇಷ್ಠ್ಯಪದ[ಸತ್ಯಲೋಕ]ದಲ್ಲಿ ಇರುತ್ತಾರೆ. ಆ ಸತ್ಯಲೋಕದಲ್ಲಿ ಶೋಕ, ವೃದ್ಧಾಪ್ಯ, ಮೃತ್ಯು, ದುಃಖ, ಉದ್ವೇಗಗಳು ಇರುವುದಿಲ್ಲ. ಯಾವ ವಿಧವಾದ ಸಾಂಸಾರಿಕ ಅಮಂಗಳವನ್ನೂ ಅಲ್ಲಿ ಕಾಣಲಾರೆವು. ಇದು ಜ್ಞಾನಿಗಳಿಗೆ ಪರಮಾನಂದಮಯವಾದುದು. ಇದನ್ನು ತಿಳಿಯದವರಿಗೆ ದುಃಖದಾಯಕವಾದುದು. ಯೋಗಿಗಳು ಈ ದೇಹವಿರುವ ಕಾಲದಲ್ಲಿಯೂ ಹೇಗೆ ಭಗವದ್ಭಕ್ತಿಯನ್ನು ಹೊಂದುವರೆಂದು ಕೇಳುವೆಯೋ ? ಮುಂಚೆ ಯೋಗಿಯು ಎಲ್ಲಾ ವಿಧವಾದ ಭಯವನ್ನೂ ತ್ಯಜಿಸಿ ತನ್ನನ್ನು ಮುಂಚೆ ಪೃಥ್ವೀಮಯನೆಂದು ಭಾವಿಸಿಕೊಳ್ಳಬೇಕು. ಅಲ್ಲಿಂದ ಮೇಲಕ್ಕೆ ಜಲಮಯನೆಂದೂ, ಹಾಗೆಯೇ ತೇಜೋಮಯ, ವಾಯುಮಯ, ಆಕಾಶಮಯನೆಂದೂ ವಿಚಾರಮಾಡಿಕೊಳ್ಳುತ್ತಾ ಕೊನೆಗೆ ಆತ್ಮಸ್ವರೂಪದಲ್ಲಿ ತನ್ನನ್ನು ಲೀನಮಾಡಬೇಕು. ಇಂದ್ರಿಯ, ಮನ, ಪ್ರಾಣಗಳಿಂದ ಅತೀತನಾಗಲು ಅಥವಾ ಅವುಗಳ ಅಭಿಮಾನವನ್ನು ಬಿಟ್ಟು ಅವುಗಳನ್ನು ಮೀರಿದ ಸ್ಥಿತಿಗೆ ಏರಲು ಏನುಮಾಡಬೇಕೆಂದರೆ—ಇಂದ್ರಿಯ ವಿಷಯಗಳ ಸಂಬಂಧದಿಂದ ಉಂಟಾಗುವ ಅನುಭವಗಳಿಂದ ಅಥವಾ ಅವುಗಳ ಸುಖದುಃಖಗಳಿಂದ ದೂರನಾಗಲು ಪ್ರಯತ್ನಿಸಬೇಕು. ಆಯಾ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಅನುಭವಮಾಡುವಾಗ ತಾನು ಮಗ್ನನಾಗದೆ ನಿಲ್ಲಲೆತ್ನಿಸಬೇಕು. ಘ್ರಾಣೇಂದ್ರಿಯದಿಂದ ಗಂಧವಿಷಯವನ್ನು ಆಘ್ರಾಣಮಾಡಬೇಕು.

ಚಕ್ಷುಸ್ಸಿನಿಂದ ರೂಪವನ್ನು ದರ್ಶನಮಾಡಬೇಕು. ತ್ವಕ್‌ನಿಂದ ವಸ್ತುಗಳನ್ನು ಸ್ಪರ್ಶಮಾಡಬೇಕು ಜಿಹ್ವೆಯಿಂದ ಎಲ್ಲ ವಸ್ತುಗಳನ್ನೂ ರುಚಿನೋಡಬೇಕು. ಹಾಗೆಯೇ ಶ್ರೋತ್ರದಿಂದ ಶಬ್ದವನ್ನು ಗ್ರಹಣಮಾಡಬೇಕು. ಪ್ರಾಣಾದಿಗಳಿಂದ ಈ ಇಂದ್ರಿಯಗಳು ವ್ಯವಹಾರಯೋಗ್ಯಗಳಾಗುವಂತೆ ಮಾಡಬೇಕು. ಸ್ಪಷ್ಟವಾಗಿ ಹೇಳುವುದಾದರೆ ಈ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ವ್ಯವಹರಿಸುತ್ತಿವೆಯೆಂದೇ ತಿಳಿಯಬೇಕು. ತಾನು ಅನುಭವಿಸುತ್ತೇನೆಂದು ಅಭಿಮಾನವಿಡಬಾರದು.

ಇದುವರೆಗೂ ಜೀವನ್ಮುಕ್ತ ಅಥವಾ ಪೂರ್ಣಲಯದ ಅವಸ್ಥೆಯನ್ನು ತಿಳಿಸಿದೆನು. ಈಗ ಕ್ರಮ ಮುಕ್ತಿಯನ್ನು ಹೇಳುವೆನು. ಯೋಗಿಯಾದ ಪುರುಷನು ಅಹಂಕಾರ ತತ್ವವನ್ನು ಸ್ವಾ ಧೀ ನ ಮಾ ಡಿ ಕೊಂ ಡು ನಂತರ ವಿಜ್ಞಾನ ತತ್ವಕ್ಕೆ ಹೋಗುತ್ತಾನೆ ಅಹಂಕಾರವು ಸಾತ್ವಿಕ, ರಾಜಸ, ತಾಮಸ, ಎಂದು ಮೂರು ವಿಧವಾಗಿದೆ. ತಾಮಸದಿಂದ ಜಡ ಅಥವಾ ಭೂತ ಸೂಕ್ಷ್ಮಗಳು ಉತ್ಪನ್ನವಾಗುತ್ತವೆ. ರಾಜಸದಿಂದ ಇಂದ್ರಿಯಗಳು ಸಾತ್ವಿಕದಿಂದ ಮನಸ್ಸು, ಮತ್ತು ಇಂದ್ರಿಯಾಭಿಮಾನಿ ದೇವತೆಗಳು ಹುಟ್ಟುತ್ತಾರೆ. ಯೋಗಿಯು ಕ್ರಮಶಃ ಈ ಮೂರು ಅಹಂಕಾರಗಳನ್ನು ಸ್ವಾಧೀನ ಮಾಡಿಕೊಂಡು ಮಹತ್ತತ್ವವನ್ನು ಹೊಂದಿ ಪ್ರಧಾನ ತತ್ವವಾದ ಆತ್ಮನನ್ನು ಹೊಂದುತ್ತಾನೆ. ಆ ಆತ್ಮನಲ್ಲಿ ಈ ತ್ರಿಗುಣಗಳೂ ಲಯಹೊಂದುತ್ತವೆ. ಕೊನೆಯಲ್ಲಿ ಈ ಉಪಾಧಿಗಳೆಲ್ಲಾ ದೂರವಾದ ನಂತರ ಪರಮಾನಂದಮಯನಾದ ಪರಮಾತ್ಮನನ್ನು ಹೊಂದುತ್ತಾನೆ. ಈ ಭಾಗವತೀ ಗತಿಯ ಪ್ರಯಾಣಮಾಡಿದವನು ಪುನಃ ಸಂಸಾರಕ್ಕೆ ಹಿಂತಿರುಗಲಾರನು.

ಎಲೈ ರಾಜನೆ ! ನೀನು ಕೇಳಿದ ವೇದಪ್ರತಿಪಾದಿತವಾದ ಸದ್ಯೋಮುಕ್ತಿ, ಕ್ರಮಮುಕ್ತಿ ಎಂಬ ಎರಡು ಸನಾತನ ಮುಕ್ತಿಮಾರ್ಗಗಳನ್ನೂ ಹೇಳಿದ್ದೇನೆ. ಬ್ರಹ್ಮನ ಆರಾಧನೆಯಿಂದ ಸಂತುಷ್ಟನಾದ ವಾಸುದೇವನು ಈ ಮಾರ್ಗಗಳನ್ನು ಬ್ರಹ್ಮನಿಗೆ ಮೊದಲು ಹೇಳಿದನು. ಈ ಸಂಸಾರ ಕೂಪದಿಂದ ಉದ್ಧಾರವಾಗಬೇಕೆಂದು ಇಚ್ಛಿಸುವಪುರುಷನಿಗೆ ಯಾವ ಮಾರ್ಗದಿಂದ ಶ್ರೀ ವಾಸುದೇವಭಕ್ತಿಯ ವಿಚಾರವಿನಿಮಯವಾಗುವುದೋ ಆ ಮಾರ್ಗಕ್ಕಿಂತಲೂ

ಉತ್ತಮವಾದ ಶ್ರೇಯಸ್ಸಾಧನೆಯ ಮಾರ್ಗವು ಆವುದಿದೆ ? ಬ್ರಹ್ಮದೇವನು ಏಕಾಗ್ರಚಿತ್ತನಾಗಿ ವೇದಗಳನ್ನು ಮೂರಾವರ್ತಿ ನೋಡಿ ವಿಚಾರಮಾಡಿ ತನ್ನ ಬುದ್ಧಿಯಿಂದ ಆತ್ಮರೂಪನಾದ ಈಶ್ವರನಲ್ಲಿ ಪ್ರೇಮಹುಟ್ಟುವುದಕ್ಕಿಂತ ಹೆಚ್ಚಿನ ಕಲ್ಯಾಣಕಾರಿಯಾದ ಉಪಾಯವೇ ಇಲ್ಲವೆಂದು ನಿಶ್ಚಯಿಸಿದನು. ಕಣ್ಣಿನಲ್ಲಿ ನೋಡಿದ ವಸ್ತುವಿನಲ್ಲಿ ಮನಸ್ಸಿಡುವುದು ಸಾಧ್ಯವಾದರೆ ದೃಷ್ಟಿ ಗೋಚರನಾಗದಿರುವ ಪರಮಾತ್ಮನಲ್ಲಿ ಪ್ರೇಮವು ನಿಲ್ಲುವುದು ಹೇಗೆಂದು ಶಂಕಿಸುವೆಯಲ್ಲವೆ ? ಪರಮಾತ್ಮನಾದ ಹರಿಯು ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೂ ಜೀವರೂಪದಿಂದ ನಿಂತಿದ್ದಾನೆ. ಭಕ್ತರು ಅಂತರ್ಯಾಮಿತ್ವ ಲಕ್ಷಣದಿಂದ ತಮ್ಮ ತಮ್ಮ ಬುದ್ಧಿ ಮುಂತಾದುವುಗಳಿಗೆ ಸಾಕ್ಷಿಯಾಗಿರುವ ನೆಂದು ಆ ಈಶ್ವರನನ್ನು ನೋಡಬಲ್ಲರು. ಅಥವಾ ಹೃದಯದೊಳಗಿರುವ ಆತ್ಮನಲ್ಲಿ ಮನಸ್ಸನ್ನು ನಿಲ್ಲಿಸಿ ಬುದ್ಧಿಯ ಸಹಾಯದಿಂದ ಅಂತರ್ಯಾಮಿತ್ವಾದಿ ಲಕ್ಷಣಗಳಿಂದ ಗುರ್ತಿಸುತ್ತಾ ಆ ಪರಮಾತ್ಮನ ಪರಿಚಯವನ್ನು ಹೊಂದುವುದು ಎಲ್ಲರಿಗೂ ಸಾಧ್ಯ. ಆದುದರಿಂದ ಸರ್ವತ್ರ, ಸರ್ವದಾ ಸಮಸ್ತ ಪ್ರಾಣಿಗಳ ಲ್ಲಿಯೂ ಆತ್ಮನನ್ನು ನೋಡುವ ಮಹಾಪುರುಷರು ಆ ಹರಿಯ ಗುಣಗಾನ ವನ್ನು ಶ್ರವಣ, ಕೀರ್ತನ, ಸ್ಮರಣೆಗಳನ್ನು ಮಾಡುವುದೇ ತಮ್ಮ ಕರ್ತವ್ಯ ವೆಂದು ತಿಳಿಯಬೇಕು.

ಯಾರು ಭಗವತ್ಕಥಾರೂಪ ಅಮೃತವನ್ನು ತಮ್ಮ ಕಿವಿಗಳೆಂಬ ಅಂಜಲಿ ಗಳಿಂದ [ಬೊಗಸೆಗಳಿಂದ] ಅನನ್ಯ ಮನಸ್ಕರಾಗಿ ಪಾನಮಾಡುವರೋ ಅಂತಹ ಸಾಧುಗಳು ವಿಷಯಗಳಿಂದ ಮಲಿನವಾದ ತಮ್ಮ ತಮ್ಮ ಅಂತಃಕರಣಗಳನ್ನು ಆ ಅಮೃತದಿಂದ ತೊಳೆಯುತ್ತಾ ಶ್ರೀಹರಿಯ ಚರಣ ಗಳನ್ನು ಶರಣುಹೊಂದುತ್ತಾರೆ.

ಎಲೈ ರಾಜನೆ ! ಮರಣಸಮಯದಲ್ಲಿ ಬುದ್ಧಿಶಾಲಿಯಾದ ಮನುಷ್ಯನು ಏನುಮಾಡಬೇಕು ಎಂಬುದೇ ನಿನ್ನ ಪ್ರಶ್ನೆಯಲ್ಲವೆ ? ಅದಕ್ಕೆ ಉತ್ತರರೂಪ ವಾಗಿ ಇದುವರೆಗೂ ನಿನಗೆ ಹೇಳಿರುವೆನು ಅದರ ರಹಸ್ಯವು ಇಷ್ಟೇ. ಮರಣ ಕಾಲದಲ್ಲಿ ಯಾವ ಸಂಕಲ್ಪವು—ಆಶೆಯು ಮುಂದೆಬರುವುದೋ, ಧ್ಯಾನ ಕಾಲದಲ್ಲಿ ಯಾವ ಭಾಗವನ್ನು ಮುಂದುಮಾಡಿ ಕೊಂಡು ಏಕಾಗ್ರತೆಯನ್ನು

ಅಭ್ಯಾಸಮಾಡುವೆವೋ ಆ ಸಂಕಲ್ಪಕ್ಕೆ ತಕ್ಕಂತೆ ಫಲವು ಲಭಿಸುತ್ತದೆ

ಪರಮಾತ್ಮನು ಎಲ್ಲಾ ದೇವಶಕ್ತಿಗಳಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ಆತನ ಪ್ರೇರಣೆಯನ್ನನುಸರಿಸಿ ಆಯಾ ಇಷ್ಟ—ಕಾಮನೆಗೆ ಅಧಿಷ್ಠಾತೃಗಳಾದ ದೇವತೆಗಳು ಫಲವನ್ನು ಕೊಡುವರು.

ಈ ವಿಶಾಲ ಜಗತ್ತಿನಲ್ಲಿ--ಲೋಕತ್ರಯಗಳಲ್ಲಿ ಇರುವ ಸುಖಗಳೆಲ್ಲಾ ಪಾಂಚಭೌತಿಕಗಳಾದುದರಿಂದಲೂ ಆಯಾ ಸುಖಗಳನ್ನು ಕೊಡುವ ಶಕ್ತಿಗಳೇ ದೇವತೆಗಳಾದುದರಿಂದಲೂ, ಯಾರು ಯಾವ ಕಾಮನೆಯಿಂದ ಮನಸ್ಸನ್ನು ಏಕಾಗ್ರವಮಾಡಿ ಭಜಿಸುವರೋ ಅವರವರಿಗೆ ಅವರವರ ಏಕಾಗ್ರತೆಯ ತೀವ್ರತೆಗೆ ತಕ್ಕಂತೆ ಫಲಗಳನ್ನು ಕೊಡತಕ್ಕದ್ದು ಆಯಾ ದೇವತೆಗಳ ಧರ್ಮ. [ಕರ್ತವ್ಯ] ಬ್ರಹ್ಮತೇಜಸ್ಸನ್ನು ಹೊಂದಬೇಕೆಂದು ಆಪೇಕ್ಷಿಸುವವನು ಬ್ರಹ್ಮನನ್ನೂ, ಇಂದ್ರಿಯಪಟುತ್ವವನ್ನು ಅಪೇಕ್ಷಿಸುವವನು ಇಂದ್ರಿಯಾಭಿಮಾನಿ ದೇವತೆಗಳನ್ನೂ, ಪ್ರಜಾಕಾಮನಾದವನು ಪ್ರಜಾಪತಿಯನ್ನೂ, ಲಕ್ಷ್ಮೀಕಟಾಕ್ಷವನ್ನು ಅಪೇಕ್ಷಿಸುವವನು ದೇವಿಯನ್ನೂ, ಹೀಗೆ ಯಾರಿಗೆ ಯಾವ ಸೌಖ್ಯ, ಸಂತಾನ, ಯಶಸ್ಸು, ಕೀರ್ತಿ, ಐಶ್ವರ್ಯ, ಅಧಿಕಾರ, ಸಂಪತ್ತುಗಳು ಬೇಕಾದರೂ ಅವುಗಳಿಗೆ ಅಧಿದೇವತೆಗಳನ್ನು ಪೂಜಿಸಿ ಅವರ ಅನುಗ್ರಹವನ್ನು ಪಡೆಯಬೇಕು. ಯಾವ ಅಪೇಕ್ಷೆಯೂ ಇಲ್ಲದೆ ಪರಮಾತ್ಮಾನುಗ್ರಹವನ್ನು ಕೋರುವವನು ಅನನ್ಯ ಮನಸ್ಸಿನಿಂದ ಜಗದೀಶನಾದ ಪರಮಪುರುಷನನ್ನು ಭಜಿಸಬೇಕು. ಚಿಕ್ಕ ಚಿಕ್ಕ ದೇವತೆಗಳನ್ನು ಸಣ್ಣ ಸಣ್ಣ ಫಲಗಳಿಗಾಗಿ ಬೇರೆ ಬೇರೆ ಭಜಿಸುವುದಕ್ಕಿಂತಲೂ ಸರ್ವ ದೇವಾಂತರ್ಯಾಮಿಯಾದ ಪರಮಪುರುಷನನ್ನೇ ತನಗೇನುಬೇಕಾದರೂ ಕೇಳಿಕೊಳ್ಳುವುದು ಶ್ರೇಯಸ್ಕರ. ಅಕಾಮಿಯಾಗಲೀ, ಸಕಾಮಿಯಾಗಲೀ ಮೋಕ್ಷಕಾಮಿಯಾಗಲೀ ಆ ದೇವಾಧಿದೇವನನ್ನೇ ದೃಢ ಭಕ್ತಿಯೋಗದಿಂದ ಭಜಿಸುವುದೇ ವಿವೇಕಿಯ ಕರ್ತವ್ಯ- ಪರಮಾತ್ಮನಲ್ಲಿ ದೃಢ ಭಕ್ತಿಯುಂಟಾಗುವುದೇ—ಆತನ ಭಕ್ತರ ಸಂಗ ಸೌಖ್ಯವು ಲಭಿಸುವುದೇ ಸಾಧಕನಿಗೆ ಕಲ್ಯಾಣಕಾರಿಯಾದುದು. ಯಾವ ಭಕ್ತಿಯೋಗದಿಂದ ಜ್ಞಾನವು ಪ್ರಕಾಶವಾಗು

ವುದೋ ರಜಸ್ತಮೋ ಗುಣಗಳ ತರಂಗರೂಪಗಳಾದ ಕಾಮಕ್ರೋಧಾದಿಗಳು ಶಾಂತವಾಗುವುವೋ, ಈ ಗುಣತ್ರಯಗ ಬಾಧೆಯು ತಪ್ಪಿ ಪರಮಾತ್ಮನ ಅನುಗ್ರಹವು ಲಭಿಸುವುದೋ ಅಂತಹ ವೈಕುಂಠಕ್ಕೆ ಪ್ರಧಾನಮಾರ್ಗವಾದ ಭಕ್ತಿಯನ್ನಾರು ಆದರಮಾಡುವುದಿಲ್ಲ ? ಇಂತಹ ಭಕ್ತಿಯನ್ನು ಕೊಡುವ ಹರಿಯ ಚರಿತ್ರೆಯನ್ನು ಕೇಳುವುದರಲ್ಲಿ ರತಿಯನ್ನು—ಆದರವನ್ನು ತೋರಿಸ ದಿರುವ ವಿರಕ್ತನಾವನಿರುವನು ಎಂದು ಹೇಳುತ್ತಿರುವಂತೆಯೇ ಸೂತರು ಧ್ಯಾನಮಗ್ನರಾದರು.

ಸ್ವಲ್ಪ ಕಾಲಾನಂತರ ಅವರು ಬಹಿರ್ಮುಖರಾದ ಮೇಲೆ ಶೌನಕರು ಕೇಳಿದರು.

ಸೂತಪುರಾಣಿಕರೆ ! ಶುಕರು ಈ ರೀತಿ ಕೊಟ್ಟ ಉತ್ತರದಿಂದ ರಾಜನಿಗೆ ತೃಪ್ತಿಯಾಯಿತೆ ? ಆತನು ಇನ್ನೇನು ಪ್ರಶ್ನೆಗಳನ್ನು ಕೇಳಿದನು ? ಎಂಬ ಮುಂತಾದ ಸಂವಾದವನ್ನು ನಮಗೆ ಸಾವಧಾನವಾಗಿ ವಿವರಿಸುವ ಕೃಪೆಮಾಡ ಬೇಕು. ಪರೀಕ್ಷಿತ ಮಹಾರಾಜನು ನಿಜವಾಗಿಯೂ ಧನ್ಯನು. ಆತನು ಬಾಲಲೀಲೆಗಳಲ್ಲಿಯೂ ಶ್ರೀಕೃಷ್ಣಪರಮಾತ್ಮನ ಪೂಜೆಗಳಲ್ಲಿಯೇ ಆಸಕ್ತಿ ಯನ್ನುಂಟಾಗಿದ್ದನೆಂದು ಕೇಳಿದ್ದೇವೆ. ಶುಕಮಹರ್ಷಿಯಂತೂ ಸದಾ ವಾಸುದೇವ ಪರಾಯಣನಾದ ಜೀವನ್ಮುಕ್ತನು. ಇವರಿಬ್ಬರ ನಡುವಿನ ಪತಿತ ಪಾವನಿಯಾದ ಹರಿಕಥಾ ಸಂವಾದವೂ ಲೋಕಾನುಗ್ರಹರೂಪವಾಗಿಯೇ ಇರಬೇಕಲ್ಲವೆ ? ಸೂರ್ಯೋದಯದಿಂದ ಸೂರ್ಯಾಸ್ತದವರೆಗಿನ ಕಾಲಚಕ್ರವು ಪ್ರತಿದಿನವೂ ಮನುಷ್ಯರ ಆಯುಸ್ಸನ್ನು ತಿಂದುಹಾಕುತ್ತಿದೆ. ಹೀಗೆ ವ್ಯರ್ಥ ವಾಗುತ್ತಿರುವ ಆಯುಸ್ಸಿನಲ್ಲಿ ಹರಿಕಥಾಕೀರ್ತನ, ಶ್ರವಣಗಳಿಗಾಗಿ ವಿನಿಯೋಗ ವಾಗುವುದೊಂದೇ ನಮಗೆ ಲಾಭಕರವಾದುದು. ಮನುಷ್ಯರಂತೆ ವೃಕ್ಷಗಳೂ ಬದುಕುವುದಿಲ್ಲವೆ ? ಕಮ್ಮಾರನ ತಿದಿಯು ನಮ್ಮಂತೆಯೇ ಉಸಿರುಬಿಡುವು ದಿಲ್ಲವೆ ? ಗ್ರಾಮ್ಯ ಪಶುಗಳಾದ ನಾಯಿ, ಹಂದಿ ಳು ನಮ್ಮಂತೆಯೇ ತಿಂದು ಬಿಸಾಡುವುದಿಲ್ಲವೆ ? ಭಕ್ತಿಯೊಂದಿಲ್ಲದಿದ್ದರೆ ಮನುಷ್ಯನಿಗೂ ಈ ಮೃಗಗಳಿಗೂ ಭೇದವೇನಿದೆ ? ನಾಯಿಗಳು ಮನೆಮನೆಗೂ ಅಲೆಯುತ್ತಾ ಎಟುತಿನ್ನುತ್ತಿರು ತ್ತವೆ. ಹಂದಿಗಳು ತಿನ್ನಬಾರದ ಅಸಾರ ವಸ್ತುವನ್ನು ತಿಂದು ಜೀವಿಸುತ್ತವೆ.

ಒಂಟೆಯು ಮುಳ್ಳನ್ನು ತಿನ್ನುತ್ತದೆ. ಕತ್ತೆಯು ಭಾರವನ್ನು ಹೊರುತ್ತದೆ. ಹಾಗೆಯೇ ಹರಿಭಕ್ತಿಯಿಲ್ಲದ ಮನುಷ್ಯನೂ ಸಹ ನಾಯಿಯಂತೆ ಎಲ್ಲರಿಂದಲೂ ತಿರಸ್ಕಾರವನ್ನು ಹೊಂದುತ್ತಾ ಹಂದಿಯಂತೆ ಅಸಾರವಾದ ವಿಷಯ ಸುಖ ಗಳನ್ನೇ ಅಪೇಕ್ಷಿಸುತ್ತಾ ಒಂಟೆಯಂತೆ ಮುಳ್ಳಿನಂತಿರುವ ಸಂಸಾರದ ದುಃಖ ಗಳನ್ನು ಅನುಭವಿಸುತ್ತಾ ಕತ್ತೆಯಂತೆ ಸಂಸಾರದ ಭಾರವನ್ನು ಹೊತ್ತು ನರಳುತ್ತಿರುತ್ತಾನೆ. ಶ್ರೀಕೃಷ್ಣ ಚರಿತ್ರೆಯು ಯಾರ ಕಿವಿಯಲ್ಲಿ ಪ್ರವೇಶಮಾಡು ವುದಿಲ್ಲವೋ ಆ ಕಿವಿಯು ಬಿಲದಂತೆ ಅಪ್ರಯೋಜಕವು. ಹರಿಕಥಾ ಕೀರ್ತನೆ ಮಾಡದ ನಾಲಗೆಯು ಕಪ್ಪೆಯ ನಾಲಗೆಯಂತೆ ವ್ಯರ್ಥವು. ಜರತಾರಿ ಪೇಟ ವಿರುವ ಕಿರೀಟಾದಿಗಳಿಂದಲಂಕೃತವಾದ ಶಿರಸ್ಸು ಪರಮಾತ್ಮನಿಗಾಗಿ ಬಗ್ಗ ದಿದ್ದರೆ ಭಾರರೂಪವೇ ಸರಿ. ಪರಮಾತ್ಮನ ಸೇವೆಗೆ ಸಿದ್ಧವಾಗದಿರುವ ಸ್ವರ್ಣ ಕಂಕಣಯುಕ್ತವಾದ ಕೈಗಳು ಶವದ (ಹೆಣದ) ಕೈಗಳಂತೆ ನಿಷ್ಪ್ರಯೋಜನ ವಾದವುಗಳು. ಪರಮಾತ್ಮನ ದಿವ್ಯ ಮೂರ್ತಿಗಳನ್ನು ದರ್ಶನಮಾಡದಿರುವ ಕಣ್ಣುಗಳು ನವಿಲುಗರಿಯೊಳಗಿನ ಕಣ್ಣುಗಳಂತೆ ಅ ಲಂ ಕಾ ರ ಮಾ ತ್ರ. ದೇವಾಲಯ, ತೀರ್ಥಗಳಿಗೆ ಹೋಗದಿರುವ ಕಾಲುಗಳು ಮರದ ಕಾಲು ಗಳಂತೆ. ಪರಮಾತ್ಮನ ಪಾದಧೂಳಿಯಿಂದಪವಿತ್ರನಾಗದ, ಆ ಚರಣಗಳಿಗೆ ಅರ್ಪಿಸಲ್ಪಟ್ಟ ತುಳಸೀ ದಳದ ಸುಗಂಧವನ್ನು ಆಘ್ರಾಣಿಸದ ಮನುಷ್ಯನು ಬದುಕಿದ್ದರೂ ಸತ್ತಂತೆಯೇ ಎಂದು ತಿಳಿಯಬೇಕು. **ಹರಿನಾಮಗಳನ್ನು ಕೇಳುತ್ತಿದ್ದಂತೆ ಆನಂದದಿಂದ ವಿಹ್ವಲನಾಗದೆ, ಕಂಠವು ಗದ್ಗದವಾಗದೆ, ಮೈಯಲ್ಲಿ ರೋಮಾಂಚನವಾಗದೆ, ನೇತ್ರಗಳಲ್ಲಿ ಆನಂದಬಾಷ್ಪವು ತೊಟ್ಟಿಕ್ಕದೆ ಇರುವ ಅಭಕ್ತನ ಅಂತಃಕರಣವು ವಜ್ರದಂತೆ ಕಠಿಣ— ಜಡವಾದುದು ಎಂದೇ ತಿಳಿಯಬೇಕು.** ಆದುದರಿಂದ ನೀವು ಇದುವರೆಗೆ ತಿಳಿಸಿದಂತೆಯೇ ಮುಂದೆಯೂ ಆ ಮಹಾಪುರುಷರಿಬ್ಬರ ಸಂವಾದವನ್ನು ವಿವರಿಸುವ ಕೃಪೆಮಾಡಿರಿ.



# ಸಪ್ತಮ ಕಿರಣ

ಸೂತರು ಹೇಳತೊಡಗಿದರು.

ಆತ್ಮತತ್ವದ ನಿರ್ಣಾಯಕರೂಪವಾದ ಶುಕಮಹರ್ಷಿಗಳ ಮಾತುಗಳನ್ನು ಕೇಳುತ್ತಿದ್ದಂತೆಯೇ ಪರೀಕ್ಷಿದ್ರಾಜನ ಹೃದಯದಲ್ಲಿ ಶ್ರೀಕೃಷ್ಣ ಭಕ್ತಿಯು ಉದಯವಾಯಿತು. ಆತನು ದೇಹ, ಸ್ತ್ರೀ, ಪುತ್ರ, ಭವನ, ಪಶು, ಸಂಪತ್ತು, ಬಂಧು ಮತ್ತು ಚಕ್ರವರ್ತಿತ್ವದ ಅಭಿಮಾನಗಳನ್ನೆಲ್ಲಾ ತೊರೆದನು. ಆ ಪುಣ್ಯ ಪುರುಷನಾದ ಪರೀಕ್ಷಿತನು ಶ್ರೀಕೃಷ್ಣ ಕಥೆಗಳನ್ನು ಕೇಳುವುದರಲ್ಲಿ ಶ್ರದ್ಧಾಯುಕ್ತನಾಗಿ ನೀವು. ಈಗ ನನ್ನನ್ನು ಕೇಳುತ್ತಿರುವಂತೆಯೇ ಪ್ರಶ್ನಮಾಡಲಾರಂಭಿಸಿದನು ಹೇಳಿದನು. ಹೇ ಬ್ರಹ್ಮರ್ಷೆ, ಹೇ ನಿಷ್ಪಾಪ, ನೀವು ಹೇಳುವುದೆಲ್ಲಾ ಸತ್ಯವೇ, ಏಕೆಂದರೆ ತಾವು ಸರ್ವಜ್ಞರು. ನೀವು ಹರಿಕಥೆಯನ್ನು ಹೇಳುತ್ತಿರುವಂತೆಯೇ ನನ್ನ ಅಜ್ಞಾನವು ಕಡಿಮೆಯಾಗುತ್ತಾಬರುತ್ತಿರುವುದೇ ತಾವು ಸರ್ವಜ್ಞರೆಂಬುದಕ್ಕೆ ಸಾಕ್ಷಿಯಾಗಿದೆ. ಯಾರನ್ನು ದೊಡ್ಡ ದೊಡ್ಡ ದೇವತೆಗಳು—ಬ್ರಹ್ಮ, ವಿಷ್ಣು, ಮಹೇಶ್ವರರುಗಳು ತಿಳಿಯಲಾರರೋ ಅಂತಹ ಪರಮಪುರುಷನು ಹೇಗೆ ಈ ಜಗತ್ತನ್ನು ತನ್ನ ಮಾಯೆಯಿಂದ ಸೃಷ್ಟಿಮಾಡುತ್ತಾನೆ ? ಆ ಸರ್ವವ್ಯಾಪಿಯಾದ ಜಗದೀಶನು ಹೇಗೆ ಈ ಜಗತ್ತಿನ ಪಾಲನೆ ಸಂಹಾರಗಳನ್ನು ಮಾಡುತ್ತಾನೆ ? ಯಾವ ಶಕ್ತಿಯೊಡಗೂಡಿ ಆ ಪರಮ ಶಕ್ತಿಶಾಲಿಯಾದ ದೇವನು ತನ್ನ ಲೀಲೆಗಾಗಿ ಯಾವ ಯಾವ ಕೆಲಸಗಳನ್ನು ಮಾಡುತ್ತಾನೆ ? ಅವೆಲ್ಲವನ್ನೂ ದಯವಿಟ್ಟು ತಿಳಿಸಿರಿ. ಆ ಅದ್ಭುತಕರ್ಮಿಯಾದ ಈಶ್ವರನ ಈ ಕರ್ಮಗಳನ್ನು [ಸೃಷ್ಟಿಸ್ಥಿತಿಲಯಾದಿ ಕರ್ಮಗಳನ್ನು] ದೊಡ್ಡ ದೊಡ್ಡ ಮೇಧಾವಿಗಳೂ, ಚತುರರೂ ತಿಳಿಯಲಾರರು. ಆತನು ತಾನೊಬ್ಬನೇ ಆದರೂ ಬ್ರಹ್ಮ, ಶಿವ ಮುಂತಾದ ರೂಪಗಳಿಂದ ಪ್ರಕಟನಾಗಿ ಅನೇಕ ಜನ್ಮಗಳನ್ನು ಧಾರಣೆ ಮಾಡುತ್ತಾ ಸತ್ವಾದಿಗುಣರೂಪಭೇದಭಾವಯುಕ್ತ ಮಾಯೆಯ ತ್ರಿಗುಣಗಳನ್ನು ರಕ್ಷಿಸುತ್ತಾ ಮಹತ್ಕಾರ್ಯಗಳನ್ನು ಹೇಗೆ ಮಾಡುತ್ತಾನೆ ? ಇದನ್ನೆಲ್ಲಾ ವಿಚಾರಮಾಡುತ್ತಿದ್ದಂತೆಯೇ ಬ್ರಹ್ಮವಸ್ತುವನ್ನು ತಿಳಿಯಲು ಅಸಮರ್ಥನಾಗುತ್ತಿರುವೆನು. ತಾವು ವೇದಗಳಿಂದ ಮತ್ತು ತಮ್ಮ ಅನುಭವ ಜ್ಞಾನದಿಂದ ಆ ಸರ್ವವ್ಯಾಪಿಯಾದ ಪರಬ್ರಹ್ಮನ ಸ್ವರೂಪವನ್ನು ಹೇಗೆ ತಿಳಿದಿರುವಿರೋ ಅದನ್ನು ಹೇಳಿ ನನ್ನ ಸಂಶಯವನ್ನು ದೂರಮಾಡಿರಿ"

ಶುಕರು—ಸರ್ವೋತ್ತಮನಾದಾ ಪರಮಪುರುಷನ ಮಹಾಮಹಿಮೆ ಯನ್ನಾರೂ ತಿಳಿಯಲಾರರು ಆತನು ಕಾರಣಮಯನಾದರೂ ಸೃಷ್ಟಿ ಸ್ಥಿತಿ ಸಂಹಾರ ರೂಪವಾದ ತನ್ನ ಲೀಲಾ ನಾಟಕಕ್ಕಾಗಿ ಸಾವಿತ್ರೀ, ಲಕ್ಷ್ಮೀ, ಉಮಾ ರೂಪಿ ಶಕ್ತಿಸಹಿತರಾದ ಬ್ರಹ್ಮ ವಿಷ್ಣು ಮಹೇಶ ರೂಪಗಳನ್ನು ಧಾರಣೆಮಾಡಿ ದ್ದಾನೆ. ಎಲ್ಲಾ ಪ್ರಾಣಿಗಳ ಅಂತಃಕರಣಗಳಲ್ಲಿಯೂ ಅಂತರ್ಯಾಮಿ ರೂಪ ದಿಂದ ನಿಂತಿದ್ದಾನೆ. ಅಂತಹ ಜಗವ್ಯಾಪ್ತನಾದ ವಿಶ್ವೇಶ್ವರನನ್ನು ಬಾರಿ ಬಾರಿಗೂ ನಮಸ್ಕರಿಸುವೆನು. ಸಾಧು ರಕ್ಷಣೆಮಾಡಿ ಅಸಾಧುಗಳಿಗೆ ಅಮಂಗಳ ರೂಪ ನಾಗಿ ಮಪ್ಪುರಿಂದ ಗುರ್ತಿಸಲಾಗದ, ಅನಂತ ದೇವತಾಮೂರ್ತಿರೂಪನಾದ, ಪರಮಹಂಸರಾದ ಜ್ಞಾನಿಗಳ ವಿಚಾರಯೋಗ್ಯವಾದ ಬ್ರಹ್ಮಜ್ಞಾನವನ್ನು ಕೊಡುವ, ಆ ಈಶ್ವರನಿಗೆ ಬಾರಿಬಾರಿಗೂ ನಮಸ್ಕರಿಸುತ್ತಿರುವೆನು. ಹೇ! ಭಕ್ತಪರಿಪಾಲಕಪ್ರಭು! ನಿನಗೆ ಪ್ರಣಾಮಗಳು. ಭಕ್ತಿಹೀನರಾದ ಯೋಗಿ ಗಳಿಗೆ ನೀನಿರುವ ದಿಕ್ಕು ಸಹಾ ಗೋಚರವಾಗುವುದಿಲ್ಲ. ನಿನಗಿಂತ ಅಧಿಕರೂ ಇಲ್ಲ. ನಿನ್ನ ಸಮಾನರೂ ಈ ಜಗತ್ತಿನಲ್ಲಿಲ್ಲ. ಅಪ್ರತಿಮ ತೇಜೋಯುಕ್ತ ನಾಗಿ ಬ್ರಹ್ಮರೂಪವಾದ ನಿನ್ನ ಧಾಮದಲ್ಲಿ ರಮಣಮಾಡುವ ಪರಬ್ರಹ್ಮನೇ, ನಿನ್ನಗೆ ವಂದಿಸುತ್ತೇನೆ. ಯಾರ ಕೀರ್ತನ, ಸ್ಮರಣ, ದರ್ಶನ, ಪ್ರಣಾಮ, ಗುಣ ಶ್ರವಣ ಮತ್ತು ಪೂಜನಗಳು ಲೋಕತ್ರಯದ ಕಲ್ಮಷಗಳನ್ನೂ ದೂರ ಮಾಡುತ್ತವೆಯೋ ಅಂತಹ ಪವಿತ್ರ ಕೀರ್ತಿಯುಳ್ಳ ಈಶ್ವರನನ್ನು ನಮಸ್ಕರಿಸು ತ್ತೇನೆ. ಚತುರನಾದ ಪುರುಷನು ಯಾರ ಚರಣಗಳನ್ನು ಶರಣುಹೊಂದಿ ಇಹಲೋಕದ ಮತ್ತು ಪರಲೋಕದ ಸುಖಗಳನ್ನೂ ಮನಸ್ಸಿನಿಂದಲೇ ತ್ಯಾಗ ಮಾಡಿ ಎಂತಹ ಕಷ್ಟವನ್ನಾದರೂ ಎದುರಿಸುತ್ತಾ ಪರಬ್ರಹ್ಮಸ್ಥಾನವನ್ನು ಹೊಂದುವನೋ ಅಂತಹ ಪವಿತ್ರ ಕೀರ್ತಿಯುಕ್ತ ಪರಮ ಪ್ರಭುವನ್ನು ವಂದಿಸುತ್ತೇನೆ. ತಪಸ್ಸುಮಾಡುವ ತಪಸ್ವಿಗಳೂ ದಾನಮಾಡುವ ಯಶಸ್ವಿ ಗಳೂ, ಸದಾಚಾರವುಳ್ಳ ಮಂತ್ರಜ್ಞರಾದ ಮನಸ್ವಿಗಳೂ, (ಯೋಗಿಗಳೂ) ಯಾರಿಗೆ ತಮ್ಮ ಕರ್ಮಗಳನ್ನೆಲ್ಲಾ ಅರ್ಪಣೆಮಾಡಿದಲ್ಲದೆ ಕೃತಕೃತ್ಯರಾಗುವು ದಿಲ್ಲವೋ ಅಂತಹ ಪುಣ್ಯಕೀರ್ತಿಯಾದ ಹರಿಯನ್ನು ವಂದಿಸುತ್ತೇನೆ. ಭಕ್ತಿಯ ಮಾತೇನು? ತನ್ನ ಭಕ್ತರ ಭಕ್ತರನ್ನೂ ಶರಣುಹೊಂದಿದಂತಹ

ಕಿರಾತ, ಹೂಣ, ಆಂಧ್ರ, ಪುಳಿಂದ, ಪುಷ್ಕಸ, ಆಭೀರ, ಕಂಕ, ಖಶ, ಮುಂತಾದ ಯವನರನ್ನೂ ಹಾಗೆಯೇ ಇತರ ಪಾಪಿ, ದೀನ, ನೀಚರುಗಳನ್ನೂ ಸಹಾ ಪವಿತ್ರವಾಗಿ ಮಾಡುವ ಆ ಪ್ರಭವಿಷ್ಣುವಾದ ಮಹಾವಿಷ್ಣುವನ್ನು ನಮಸ್ಕರಿಸುತ್ತೇನೆ. ಆತ್ಮಜ್ಞಾನಿಗಳಿಗೆಲ್ಲಾ ಯಜಮಾನನಾದ ...ವ ಪರಮಾತ್ಮನು ವೇದತ್ರಯ ರೂಪನಾಗಿದ್ದಾನೆಯೋ, ಧರ್ಮಸ್ವರೂಪ ಗಿದ್ದಾನೆಯೋ, ತಪಸ್ಸಿನ ಸ್ವರೂಪನಾಗಿದ್ದಾನೆಯೋ, ಯಾರ ರಹಸ್ಯ ... ಬ್ರಹ್ಮಾದಿಗಳೂ ತಿಳಿಯಲಾರರೋ, ಅಂತಹ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲಿ! ಲಕ್ಷ್ಮೀಪತಿಯಾಗಿ, ಯಜ್ಞಪತಿಯಾಗಿ, ಪೃಥ್ವೀ ಪತಿಯಾಗಿ, ಪ್ರಜಾಪತಿಯಾಗಿ, ಬುದ್ಧಿಗೆ ಪತಿಯಾಗಿ, ಲೋಕಕ್ಕೆ ಪತಿ ಯಾಗಿ, ಅಂಧಕ ವೃಷ್ಣಿರೂಪ ಯಾದವರಿಗೆ ಪತಿಯಾಗಿ, ಸಜ್ಜನಪತಿಯಾಗಿ, ಜಗತ್ಕಲ್ಯಾಣಮಾಡುತ್ತಿರುವ ದೇವ ದೇವನು ನಮ್ಮನ್ನು ಅನುಗ್ರಹಿಸಲಿ! ಯಾರ ಚರಣಕಮಲಗಳ ಧ್ಯಾನದಿಂದ ನಿರ್ಮಲವಾದ ಬುದ್ಧಿಯುಳ್ಳವರಾದ ವಿವೇಕಿಗಳು ಆತ್ಮತತ್ವವನ್ನು ತಿಳಿಯುವರೋ ಮತ್ತು ತಮ್ಮ ರುಚಿಗೆ ತಕ್ಕಂತೆ ಯಾರನ್ನು ವರ್ಣನೆಮಾಡುವರೋ ಆ ಮುಕುಂದನು ನಮ್ಮನ್ನು ಅನುಗ್ರಹಿಸಲಿ! ಪ್ರತಿಯೊಂದು ಕಲ್ಪದ ಪ್ರಾರಂಭದಲ್ಲಿಯೂ ಯಾರು ಸೃಷ್ಟಿ ಕರ್ತನಾದ ಪಿತಾಮಹನ ಅಂತಃಕರಣದಲ್ಲಿ ಸೃಷ್ಟಿಸಂಬಂಧವಾದ ಸ್ಮೃತಿ ಯನ್ನು ಪ್ರಕಟಮಾಡುತ್ತಾನೆಯೋ, ಮತ್ತು ಯಾರು ಅದೇ ಬ್ರಹ್ಮನ ಮುಖ ದಿಂದಲೇ ವೇದ ವೇದಾಂಗಗಳನ್ನೂ ಪ್ರಕಟಮಾಡಿದನೋ, ಆ ಋಷಿಶ್ರೇಷ್ಠ ನಾದ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲಿ! ಯಾರು ಪಂಚ ಮಹಾಭೂತ ತತ್ವಗಳಿಂದ ಈ ಜಗತ್ತಿನ ಜೀವ ದೇಹಗಳನ್ನೆಲ್ಲಾ ನಿರ್ಮಾಣ ಮಾಡಿ, ಆ ದೇಹರೂಪ ಪುರಗಳಲ್ಲೆಲ್ಲಾ ವಾಸಮಾಡುತ್ತಿರುವುದರಿಂದ ಪುರುಷ ನೆಂದು ಕರೆಯಲ್ಪಡುವನೋ, ಯಾರು ದೇಹರೂಪ ಪುರದಲ್ಲಿರುವ ಹದಿನಾರು ಗುಣಗಳನ್ನು ಉಪಭೋಗಮಾಡುತ್ತಾ ಷೋಡಶಾತ್ಮಕನಾಗಿ ನಿಂತಿರುವನೋ ಆ ಸರ್ವಜ್ಞನಾದ, ಸರ್ವಮಯನಾದ, ಈಶ್ವರನು ನಮ್ಮ ವಾಕ್ಯಗಳನ್ನಲಂಕರಿ ಸಲಿ! ಸಾಧುಗಳು ಯಾರ ಮುಖಪದ್ಮದಿಂದ ಹೊರಹೊರಟ ಜ್ಞಾನಾಮೃತ ವನ್ನು ಪಾನಮಾಡಿ ಅಮರತ್ವವನ್ನು ಪಡೆದು ಆನಂದಿಸುವರೋ ಆ

ವಾಸುದೇವ ಅಥವಾ ವ್ಯಾಸದೇವನಾದ ಭಗವಂತನನ್ನು ನಮಸ್ಕರಿಸುತ್ತೇವೆ "

ಎಲೈ ರಾಜನೆ! ನೀನು ಈಗ ನನ್ನನ್ನು ಹೇಗೆ ಕೇಳಿದೆಯೋ ಹಾಗೆಯೇ ದೇವರ್ಷಿಯಾದ ನಾರದನು ಬ್ರಹ್ಮನನ್ನು ಪ್ರಶ್ನೆಮಾಡಿದನು. ಬ್ರಹ್ಮನು ನಾರಾಯಣನಿಂದ ತಾನು ಕೇಳಿ ತಿಳಿದುಕೊಂಡು ನಾರದನಿಗೆ ಹೇಳಿದುದನ್ನು– ಬ್ರಹ್ಮನಾರದ ಸಂವಾದವನ್ನು ನಿನಗೆ ತಿಳಿಸುತ್ತೇನೆ

ನಾರದನು ಒಂದಾನೊಂದು ಸಮಯದಲ್ಲಿ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಕುರಿತು ಪ್ರಶ್ನೆಮಾಡಿದನು.

"ಎಲೈ ಭೂತಭಾವನನೆ! ಪೂರ್ವಜನೆ! ನಿನ್ನನ್ನು ನಮಸ್ಕರಿಸುತ್ತೇನೆ. ಯಾವ ಜ್ಞಾನದಿಂದ ಆತ್ಮತತ್ವದ ನಿರ್ಣಯವಾಗುವುದೋ ಅದನ್ನು ವಿಸ್ತಾರವಾಗಿ ನನಗೆ ತಿಳಿಸಿರಿ! ಎಲೈ ಬ್ರಹ್ಮನೇ ಈ ಜಗತ್ತು ಯಾರ ಸ್ವರೂಪವಾಗಿದೆ? ಯಾರ ಆಶ್ರಯದಿಂದ ನಿಂತಿದೆ? ಯಾರಿಂದ ಉತ್ಪನ್ನವಾಗುವುದು? ಯಾರಲ್ಲಿ ಲೀನವಾಗುವುದು? ಯಾರ ಅಧೀನವಾಗಿದೆ? ಯಾರ ಅಧಿಕಾರದೊಳಗಿರುವುದು? ಆ ವಸ್ತುವಿನ ತತ್ವವನ್ನು ವಿಸ್ತಾರವಾಗಿ ನನಗೆ ತಿಳಿಸಿರಿ. ತಾವು ಇದೆಲ್ಲವನ್ನೂ ತಿಳಿದಿರುವಿರಿ. ಭೂತಭವಿಷ್ಯದ್ವರ್ತಮಾನಗಳೆಲ್ಲಾ ತಮಗೆ ಕರತಲಾಮಲಕವಾಗಿರುವುವು. ತಾವು ಪ್ರಭುಗಳು. ಎಲೈ ದೇವನೆ! ನಿಮಗೆ ವಿಜ್ಞಾನಶಕ್ತಿಯನ್ನು ದಯಪಾಲಿಸಿದವರಾರು? ತಾವು ಯಾರ ಆಧಾರದಿಂದಿರುವಿರಿ? ತಾವು ಯಾರ ಅಧೀನರು? ಯಾರ ಸ್ವರೂಪದಿಂದ ಪ್ರಕಾಶಿತರಾಗಿದ್ದೀರಿ? ಯಾರ ಮಾಯೆಯ ಆಧಾರದಿಂದ ಇತರರಾರ ಸಹಾಯವೂ ಇಲ್ಲದೆ ನೀವೊಬ್ಬರೇ ಪಂಚಭೂತಗಳಾದ ಈ ಜಗತ್ತನ್ನು ಸೃಷ್ಟಿಮಾಡುವಿರಿ? ಜೇಡರಹುಳುವು ತನ್ನಿಂದಲೇ ದಾರವನ್ನು ಉತ್ಪನ್ನಮಾಡಿ ಅದರಿಂದಲೇ ಬಲೆಯನ್ನು ಹೆಣೆಯುತ್ತಾ ಅದರಲ್ಲಿಯೇ ಸ್ವತಂತ್ರವಾಗಿ ವಿಹರಿಸುತ್ತಿರುವಂತೆ, ತಾವೂ ಸಹಾ ಈ ಜಗತ್ತನ್ನು ಮತ್ತಾರ ಸಹಾಯವೂ ಇಲ್ಲದೆ ಒಬ್ಬರೇ ಸೃಷ್ಟಿಮಾಡಿದರೂ ಆ ಸೃಷ್ಟಿಕಾರ್ಯದಲ್ಲಿ ಲಿಪ್ತರಾಗುವುದಿಲ್ಲ. ಈ ಜಗತ್ತಿನಲ್ಲಿರುವ ನಾಮರೂಪ ಗುಣಯುಕ್ತವಸ್ತುವಾವುದೂ ನಿಮ್ಮಿಂದ ಭಿನ್ನವಾಗಿಲ್ಲ. ಇದ

ರಲ್ಲಿ ನಿಮಗಿಂತ ಶ್ರೇಷ್ಠರನ್ನೂ, ಮಧ್ಯಮರನ್ನೂ, ನಿಮ್ಮ ಸಮಾನರನ್ನೂ ನಾನು ಕಾಣೆನು. ತಾವು ಈ ಇಂತಹ ಸರ್ವೋತ್ತಮವಾದ ಈಶ್ವರ ಸ್ವರೂಪ ರಾದರೂ ತಾವು ಏಕಾಗ್ರಚಿತ್ತರಾಗಿ ಘೋರತಪಸ್ಸುಮಾಡುತ್ತಿರುವುದನ್ನು ನೋಡಿದರೆ ನಿಮಗಿಂತಲೂ ದೊಡ್ಡವನಾದ ದೇವನೊಬ್ಬನಿರುವನೆಂದೂ ಆತನನ್ನು ತಾವು ಉಪಾಸನೆಮಾಡುತ್ತಿರುವಿರೆಂದೂ ನನಗೆ ತೋರುತ್ತಿದೆ. ತಾವು ಸರ್ವಜ್ಞರಾದುದರಿಂದ ನಾನು ಕೇಳುವ ಪ್ರಶ್ನೆಗೆ ಉತ್ತರವು ನಿಮಗೆ ಗೊತ್ತೇ ಇದೆ. ಆದುದರಿಂದ ದಯವಿಟ್ಟು ನನಗೆ ತಿಳಿಯುವಂತೆ ಆ ಗೂಢ ತತ್ವವನ್ನು ಅನುಗ್ರಹಿಸಬೇಕು."

**ಬ್ರಹ್ಮ—ಪುತ್ರ** ! ನೀನು ಕೇಳಿದ ಪ್ರಶ್ನೆಯು ಪರಮಶ್ರೇಷ್ಠವಾದುದು. ಇದರಿಂದ ಪರಮಾತ್ಮನ ಪತಿತಪಾವನೀ ಲೀಲೆಯು ಪ್ರಕಟವಾಗುವುದು. ಆ ಕರುಣಾಮಯನ ಕೃಪೆಯನ್ನು ವಿಸ್ತಾರಮಾಡುವುದಕ್ಕಾಗಿಯೇ ನಾನು ಉತ್ಪನ್ನನಾಗಿರುವುದು. ನೀನು ನನ್ನಿಂದ ಆ ಭಗವದ್ಗುಣಗಳನ್ನು ವರ್ಣನೆ ಮಾಡಿಸುವುದರಿಂದ ಜಗತ್ತಿಗೇ ಕಲ್ಯಾಣಮಾಡಿ ಆತನ ಮಹಾಮಹಿಮೆಯನ್ನು ಪ್ರಕಾಶಪಡಿಸಿದಂತಾಗುವುದು. ನಾರದ ! ನೀನು ನನ್ನನ್ನು ಜಗತ್ತಿನಲ್ಲಿ ಎಲ್ಲಕ್ಕೂ ಹೆಚ್ಚಿನವನೆಂದು ಅನುಮಾನಮಾಡಿದುದು ಸರಿಯಾದರೂ ನನ್ನನ್ನೇ ಸರ್ವಶ್ರೇಷ್ಠನೆಂದೂ, ಸ್ವತಂತ್ರನೆಂದೂ, ತಿಳಿಯುವುದು ಭ್ರಾಂತಿಮಾತ್ರ. ನನ್ನ ಮೇಲೆಯೂ ಅಧಿಕಾರಮಾಡಬಲ್ಲ ಪುರಾಣಪುರುಷನೊಬ್ಬನಿದ್ದಾನೆ. ಆ ಪರಮೇಶ್ವರ ಇಚ್ಛೆಯನ್ನನುಸರಿಸಿಯೇ ನಾನು ಈ ಪ್ರಪಂಚವನ್ನು ಸೃಷ್ಟಿ ಮಾಡುತ್ತೇನೆ- ಆತನೇ ನನ್ನ ಪರಮಪೂಜ್ಯನಾದ ತಂದೆಯು. ಮತ್ತು ಇಷ್ಟದೇವನು. ಸೂರ್ಯ, ಅಗ್ನಿ, ಚಂದ್ರ, ನಕ್ಷತ್ರ, ಗ್ರಹ, ತಾರಾಗಣಗಳು ಮತ್ತೊಬ್ಬ ಈಶ್ವರನ ಶಕ್ತಿಯಿಂದ ಬೆಳಕನ್ನುಂಟಾಗಿರುವುವಾದರೂ, ಅವುಗಳೇ ತೇಜೋಯುಕ್ತಗಳಾದುವುಗಳೆಂದು ಜಗತ್ತಿನಲ್ಲಿ ಪ್ರತೀತಿಯಾಗಿರುವಂತೆ, ಯಾವ ಮಹಾಮಹಿಮನ ಚೈತನ್ಯಮಯಪ್ರಕಾಶದಿಂದ ಪ್ರಕಾಶಿತವಾದ ಜಗತ್ತನ್ನು ಉತ್ಪನ್ನಮಾಡುವವನೆಂದು ಹೇಳಲ್ಪಡುತ್ತೇನೆಯೋ, ಆ ವಾಸುದೇವನಾದ ಭಗವಾನ್ ಪರಮೇಶ್ವರನನ್ನು ವಂದಿಸುತ್ತಿದ್ದೇನೆ. ಆತನ ಮಾಯೆಯಿಂದ ಮೋಹಿತರಾದ ಜನಗಳು ನನ್ನನ್ನೇ ಜಗದ್ಗುರುವೆಂದು

ಕರೆಯುತ್ತಾರೆ. ಆ ಮಾಯೆಯೇ ಆ ಈಶ್ವರನೆದುರಿಗೆ ನಿಲ್ಲಲು ನಾಚಿಕೊಂಡು ಹಿಂಸರಿಯುತ್ತಾಳೆ. ಆಕೆಯಿಂದ ಮೋಹಿತರಾದ ಪ್ರಾಣಿಗಳು 'ನಾನು' 'ನನ್ನದು' ಎಂಬ ಭ್ರಾಂತಿಯಲ್ಲಿ ಸಿಕ್ಕಿಬಿಟ್ಟಿದ್ದಾರೆ. ಆ ವಾಸುದೇವನಿಗಿಂತ ಭಿನ್ನವಾದ, ಆತನಿಗಿಂತ ಶ್ರೇಷ್ಠವಾದ ವಸ್ತುವಾವುದೂ ಇಲ್ಲ ಏಕೆಂದರೆ ಸೃಷ್ಟಿಯ ಉಪಾದಾನರೂಪಗಳಾದ ದ್ರವ್ಯ, ಕರ್ಮ, ಕಾಲ, ಸ್ವಭಾವ, ಜೀವ, ಎಂಬ ತತ್ವಗಳು ವಾಸುದೇವ ಮಯವಾಗಿಯೇ ಇರುವುವು ಎಲ್ಲಾ ವೇದ, ದೇವ, ಲೋಕ, ಯಜ್ಞ, ಜೀವ ಇವೆಲ್ಲವೂ ನಾರಾಯಣನಿಂದಲೇ ಉತ್ಪನ್ನ ವಾಗಿವೆ. ಇವೆಲ್ಲವೂ ಆತನ ಮೂರ್ತಿಗಳೆ. ಯೋಗ, ತಪಸ್ಸು, ಜ್ಞಾನ, ಗತಿ, ಸರ್ವವೂ ನಾರಾಯಣನೇ ಎಂದು ತಿಳಿ. ನಾನು ಆದೇ ಜಗದುತ್ಪತ್ತಿ ಕಾರಣನಾದ ಮತ್ತು ಕೂಟಸ್ಥ ಚೈತನ್ಯನಾಗಿ ಜಗತ್ತಿನಲ್ಲಿ ತುಂಬಿರುವ ಈಶ್ವರನ ಕಟಾಕ್ಷದಿಂದಲೇ ಉತ್ಪನ್ನನಾಗಿ ಈ ಪ್ರಪಂಚವನ್ನು ಪ್ರಕಟಮಾಡು ತ್ತಿರುವೆನು ನಿರ್ಗುಣ ನಿರಾಕಾರನಾದ ಆ ಈಶ್ವರನೇ ಸೃಷ್ಟಿ ಸ್ಥಿತಿ, ಲಯ ಕಾರಣಗಳಾಗಿ ತನ್ನ ಮಾಯೆಯ ಸತ್ವ ರಜಸ್ತಮೋಗುಣಗಳನ್ನು ಗ್ರಹಣ ಮಾಡಿಕೊಂಡು ಸಗುಣನಾಗುತ್ತಾನೆ. ನಿತ್ಯಸ್ವತಂತ್ರನಾದ ಮಾಯಾಧಾರಿ ಯಾದ ಈ ಪರಮಪುರುಷನನ್ನೇ ದ್ರವ್ಯ, ಜ್ಞಾನ, ಕ್ರಿಯಾಶಕ್ತಿಗಳಿಗೆ (ಪಂಚ ತತ್ವಗಳೂ, ಇಂದ್ರಿಯಗಳೂ, ಇಂದ್ರಿಯಾಭಿಮಾನಿ ದೇವತೆಗಳು) ಕಾರಣ ಸ್ವರೂಪವಾದ ಗುಣತ್ರಯವು ಕಾರ್ಯ, ಕಾರಣ, ಕರ್ತೃರೂಪದಿಂದ ಕಟ್ಟಿ ಹಾಕುತ್ತದೆ. ಇಂದ್ರಿಯಾಧೀಶನಾದ ಆ ಈಶ್ವರನೇ ಗುಣತ್ರಯಗಳಿಂದೊಡ ಗೂಡಿ ಗುಣಗಳ ಆವರಣದಲ್ಲಿ ಮುಚ್ಚಿಹೋಗುತ್ತಾನೆ ಆತನ ಗತಿಯನ್ನು ಆತನಲ್ಲದೆ ಮತ್ತಾರೂ ತಿಳಿಯಲಾರರು. ಆತನೇ ಈ ಜಗತ್ತಿಗೆಲ್ಲಾ ಈಶ್ವರನು. ಮತ್ತು ನನಗೆ ಆವನೇ ಯಜಮಾನನು. ಎಲೈ ನಾರದನೇ! ಆ ಸರ್ವವ್ಯಾಪಿಯಾದ ಈಶ್ವರನೇ "ನಾನು ಅನೇಕ ರೂಪಗಳನ್ನು ಧಾರಣೆ ಮಾಡುತ್ತೇನೆ." ಎಂಬ ಭಾವನೆಯಿಂದ ಇಚ್ಛಾಶಕ್ತಿ ರೂಪಿಯಾದ ಮಾಯೆ ಯಿಂದ ತನ್ನೊಳಕ್ಕೆ ಕಾಲ, ಕರ್ಮ, ಸ್ವಭಾವಗಳನ್ನು ಪ್ರಕಟಮಾಡಿದನು. ಆದೇ ಪರಮಪುರುಷನಲ್ಲಿ ಅಧಿಷ್ಠಿತವಾದ ಕಾಲದಿಂದ ಮಾಯಾಶ್ರಿತ ಗುಣ ತ್ರಯಗಳು ಕ್ಷೋಭೆಯನ್ನು ಪಡೆದು ಸ್ವಭಾವದ ಮೂಲಕ ಪರಿಣಾಮ

ಹೊಂದಿ ಕರ್ಮದ ಮೂಲಕ ಸಮ್ಮೇಳನವನ್ನು ಹೊಂದಿ ಮಹತ್ತತ್ವ" ಎಂಬ ಹೆಸರನ್ನು ಹೊಂದಿದುವು ಮಹತ್ತತ್ವವು ವಿಕಾರವನ್ನು ಹೊಂದಿದಾಗ, ಅವರೊಳಗಿನ ಸತ್ವರಜಸ್ತಮೋಗುಣಗಳು ಒಂದರೊಳಗೊಂದು ಮಿಶ್ರಿತವಾಗಿ, ಮಾಯೆಯೊಳಗಿನ ದ್ರವ್ಯವೂ (ಪಂಚಭೂತ) ಜ್ಞಾನವೂ (ಇಂದ್ರಿಯಾಧಿಷ್ಠಿತ ದೇವತೆಗಳು) ಕ್ರಿಯೆಯೂ (ಇಂದ್ರಿಯಗಳು) ತಮೋಗುಣಪ್ರಧಾನವಾದ ಅವಸ್ಥೆಯಲ್ಲಿ ರೂಪಾಂತರ ಹೊಂದಿದುವು. ಆ ತಮೋಗುಣಪ್ರಧಾನವಾದ ಅವಸ್ಥೆಯನ್ನೇ ಅಹಂಕಾರವೆನ್ನುತ್ತಾರೆ. ಆ ಅಹಂಕಾರವು ಮೂರು ಪ್ರಕಾರವಾಗಿದೆ. ಜ್ಞಾನಶಕ್ತಿಯ ಸಮ್ಮೇಳನದಿಂದುಂಟಾದ ಅಹಂಕಾರದ ಸ್ವರೂಪವನ್ನೇ **ವೈಕಾರಿಕ ಅಹಂಕಾರ**ವೆನ್ನುತ್ತಾರೆ. ಕ್ರಿಯಾಶಕ್ತಿಯ ಸಮ್ಮೇಳನದಿಂದುಂಟಾದುದನ್ನೇ ರಾಜಸ ಅಹಂಕಾರವೆನ್ನುತ್ತಾರೆ. ದ್ರವ್ಯಶಕ್ತಿಯಿಂದೊಡಗೂಡಿದುದನ್ನೇ ತಾಮಸ ಅಹಂಕಾರವೆನ್ನುತ್ತಾರೆ. ಈ ತತ್ವಗಳಿಗೆಲ್ಲಾ ಆದಿಯಾದ ತಾಮಸಾಹಂಕಾರವು ರೂಪಾಂತರವನ್ನು ಹೊಂದಿ **ಮೊದಲು** ಆಕಾಶವನ್ನು ಪ್ರಕಟಮಾಡಿತು. ಈ ಆಕಾಶದ ಮಾತ್ರೆಯನ್ನು–ಗುಣವನ್ನು **ಶಬ್ದ**ವೆನ್ನುತ್ತಾರೆ. ಈ ಶಬ್ದವೇ ಜಗತ್ತಿನಲ್ಲಿ ಎಲ್ಲಕ್ಕೆ ಅಂದರೆ ದೃಶ್ಯಾ ದೃಶ್ಯಗಳಿಗೆಲ್ಲಾ ಬೋಧಕವಾಗಿದೆ.

ಈ **ಆಕಾಶವೇ** ರೂಪಾಂತರಹೊಂದಿ ಸ್ಪರ್ಶಗುಣಯುಕ್ತವಾದ **ವಾಯುವು** ಉತ್ಪನ್ನವಾಯಿತು. ಇದರ ಸ್ಪರ್ಶಗುಣದೊಂದಿಗೆ ಆಕಾಶದ ಕಾರಣ ಮಾತ್ರವಾದ ಶಬ್ದಗುಣವೂ ಸೇರಿಕೊಂಡೇ ಇದೆ. ಈ ವಾಯುವೇ ಜಗತ್ತಿನಲ್ಲಿ ಬಲ, ವೀರ್ಯ ಓಜಸ್ಸುಗಳನ್ನೂ ಇಂದ್ರಿಯಗಳಿಗೆ ಸ್ಫೂರ್ತಿಯನ್ನೂ ಕೊಡುತ್ತಿರುವುದು.

ಈ ವಾಯುವೂ ಸಹಾ ಕಾಲ, ಕರ್ಮ, ಸ್ವಭಾವಗಳಿಂದ ಸ್ಫೂರ್ತಿಯನ್ನು ಹೊಂದಿ **ತೇಜಸ್ಸನ್ನು** ಪ್ರಕಟಮಾಡಿತು. ಈ ತೇಜಸ್ಸಿನ ಗುಣವು, ರೂಪವು, ಈ ರೂಪಗುಣದೊಡನೆ ಆಕಾಶದ ಶಬ್ದವೂ, ವಾಯುವಿನ ಸ್ಪರ್ಶವೂ ಸೇರಿಕೊಂಡೇ ಇರುವುವು.

ಈ ತೇಜಸ್ಸು ತತ್ವವೂ ಸಹಾ ಆಕಾಶವಾಯುಗಳಂತೆಯೇ

ರೂಪಾಂತರ ಹೊಂದಿ ರಸಗುಣವನ್ನುಳ್ಳ ಜಲತತ್ವವನ್ನು ಹುಟ್ಟಿಸಿತು ಇದ ರಲ್ಲಿರುವ ರಸಗುಣದ ಜೊತೆಗೆ ಮೇಲಿನ ಮೂರು ತತ್ವಗಳ ಗುಣಗಳಿಂದ ಶಬ್ದ, ಸ್ಪರ್ಶ, ರೂಪಗಳೂ ಕೂಡಿಕೊಂಡೇ ಇರುವುವು

ಇದೇ ರೂಪಾಂತರ ಹೊಂದಿ ಗಂಧಗುಣಯುಕ್ತವಾದ ಪೃಥ್ವಿಯು ಉತ್ಪನ್ನವಾಯಿತು. ಇದರ ಗುಣವು ಗಂಧವು. ಈ ಗಂಧಗುಣದ ಜೊತೆ ಯಲ್ಲಿಯೇ ಮೇಲಿನ ತತ್ವಗುಣಗಳಾದ ಶಬ್ದ, ಸ್ಪರ್ಶ, ರೂಪ, ರಸಗಳು ಬೆರಕೆಯಾಗಿಯೇ ಇರುತ್ತವೆ.

ವೈಕಾರಿಕ ಅಹಂಕಾರದಿಂದ ಮನಸ್ಸೂ ಅದರೊಡನೆ ದಶ ಸಾತ್ವಿಕ ದೇವತೆಗಳೂ ಉತ್ಪನ್ನವಾದುವು ೧. ದಿಶಾ ೨. ವಾಯು ೩. ಸೂರ‍್ಯ ೪. ಪ್ರಚೇತಾ ೫. ಅಶ್ವಿನೀ ಕುಮಾರ ೬. ಅಗ್ನಿ ೭. ಇಂದ್ರ ೮. ಉಪೇಂದ್ರ ೯. ಮಿತ್ರ ೧೦. ಪ್ರಜಾಪತಿ ಎಂಬುವುಗಳೇ ಆ ದಶ ದೇವತೆಗಳು.

ತೈಜಸ ಅಹಂಕಾರದಿಂದ ಬುದ್ಧಿ ಪ್ರಾಣಗಳೂ ಶ್ರೋತ್ರ, ಸ್ಪರ್ಶ, ಚಕ್ಷು, ರಸನಾ, ಘ್ರಾಣಗಳೆಂಬ ಪಂಚೇಂದ್ರಿಯಗಳೂ ವಾಕ್, ಪಾಣಿ, ಪಾದ, ಉಪಸ್ಥ, ಗುದಗಳೆಂಬ ಕರ್ಮೇಂದ್ರಿಯಗಳೂ ಹುಟ್ಟಿದುವು. ಆ ಸಮ್ಮಿಳಿತಾವಸ್ಥೆಯಲ್ಲಿದ್ದ ಈ ತತ್ವಗಳೂ ಇಂದ್ರಿಯ, ಮನಸ್ಸು, ಗುಣ ಗಳೆಂಬ ಭಾವಗಳೂ ತಮಗೆ ಆಧಾರವಾದ ಯಾವ ಆಯತನ—ವಾಸಸ್ಥಾನ ವನ್ನೂ ಮಾಡಿಕೊಳ್ಳಲಾರದೆ ಹೋದುದರಿಂದ ಭಗವಂತನ ಶಕ್ತಿಯು ಅವು ಗಳಲ್ಲಿ ಪ್ರವೇಶಿಸಿ ಈ ಕಾರಣಸಮೂಹವು ಒಂದರೊಡನೊಂದು ಸೇರುವಂತ ಮಾಡಿತು. ಆಗ ಈ ಕಾರಣಸಮೂಹದ ಪ್ರಧಾನ ಗುಣಗಳಿಂದ ವ್ಯಷ್ಟಿ, (ಸ್ಥೂಲ) ಸಮಷ್ಟಿ, (ಸೂಕ್ಷ್ಮ) ರೂಪವಾದ ಉಭಯಾತ್ಮಕ ಶರೀರವು ಉತ್ಪನ್ನವಾಯಿತು. ಕಾಲ, ಕರ್ಮ, ಸ್ವಭಾವಗಳೊಳಗೆ ನಿಂತ ಜೀವನು— ಈಶ್ವರನ ಸಚೇತನಾತ್ಮಕ ಶಕ್ತಿಯು ಸಹಸ್ರ (ಅನಂತ) ವರ್ಷಗಳ ನಂತರ ಜಲಸ್ಥಿತ ತತ್ವಮಯವಾದ ಆ ನಿರ್ಜೀವವಾದಾ ಬ್ರಹ್ಮಾಂಡವನ್ನು ಸಚೇತನ ವನ್ನಾಗಿ ಮಾಡಿತು. ಆ ಬಹ್ಮಾಂಡವನ್ನು ಭೇದಿಸಿಕೊಂಡು ಸಹಸ್ರಶೀರ್ಷ, ಸಹಸ್ರಬಾಹು, ಸಹಸ್ರಪಾದ, ಸಹಸ್ರನೇತ್ರಗಳುಳ್ಳ ವಿರಾಟ್ ಪುರುಷನು

ಪ್ರಕಟನಾದನು ಆ ವಿರಾಟ್ ಪುರುಷನ ಸೊಂಟದಿಂದ ಕೆಳಗಿನ ಏಳು ಅಂಗ ಗಳಲ್ಲಿ ಅತಲಾದಿ ಏಳು ಪತಾಳಲೋಕಗಳನ್ನೂ, ಸೊಂಟದಿಂದ ಮೇಲಿನ ಏಳು ಸ್ಥಾನಗಳಲ್ಲಿ ಭೂರ್ಭುವಾದಿ ಏಳು ಲೋಕಗಳನ್ನೂ ಜ್ಞಾನಿಗಳು ಕಲ್ಪನೆ ಮಾಡುತ್ತಾರೆ ಆ ವಿರಾಟ್ ಪುರುಷನ ಮುಖದಿಂಗ ಬ್ರಾಹ್ಮಣನೂ, ಭುಜ ದಿಂದ ಕ್ಷತ್ರಿಯನೂ, ತೊಡೆಯಿಂನ ವೈಶ್ಯನೂ, ಪಾದದಿಂದ ಶೂದ್ರನೂ, ಹುಟ್ಟಿದರು. ನಮ್ಮೆಲ್ಲರ ಮಾತುಗಳಿಗೂ ಅಧಿಷ್ಠಾತೃವಾದ ಅಗ್ನಿದೇವನು ಆ ವಿರಾಟ್ ಪುರುಷನ ಮುಖದಿಂದ ಹುಟ್ಟಿದನು. ಗಾಯತ್ರಿಯೇ ಮೊದ ಲಾದ ಏಳು ಛಂದಸ್ಸುಗಳು ಆತನ ಸಪ್ತಧಾತುಗಳಿಂದ ಉತ್ಪನ್ನವಾದುವು. ಹವ್ಯ (ದೇ ವ ತೆ ಗ ಳ ಆ ಹಾ ರ) ಕವ್ಯ (ಪಿತೃಗಳ ಆಹಾರ.) ಅಮೃತ (ಮನುಷ್ಯರ ಆಹಾರ) ರೂಪಿಯಾದ ಅನ್ನತ್ರಯವೂ ಕಹಿ ಸಿಹಿ ಮುಂತಾದ ಷಡ್ರಸಗಳೂ ಆತನ ನಾಲಿಗೆಯಿಂದ ಉತ್ಪನ್ನವಾದುವು. ಪಂಚಪ್ರಾಣಗಳೂ ಪ್ರಾಣಿಗಳ ಶರೀರದಲ್ಲಿರುವ ವಾಯುವೂ ಆತನ ನಾಸಿಕದಿಂದಲೂ ಹಾಗೆಯೇ ಅ ಶ್ವಿ ನೀ ಕು ಮಾ ರ ರೂ, ಔಷಧಿಗಳೂ, ಸುಗಂಧಗಳೂ, ಆತನ ಘ್ರಾಣೇಂದ್ರಿಯದಿಂದಲೂ ಹುಟ್ಟಿದುವು ರೂಪವೂ ರೂಪಪ್ರಕಾಶಕವಾದ ತೇಜಸ್ಸೂ ಆತನ ಚಕ್ಷುರಿಂದ್ರಿಯದಿಂದಲೂ, ಪ್ರಭಾಯುಕ್ತನಾದ ಸೂರ್ಯನು ಆತನ ನೇತ್ರಗೋಲಕದಿಂದಲೂ, ದಶ ದಿ ಕ್ಕುಗಳೂ ತೀರ್ಥಗಳೂ, ಆತನ ಕಿವಿಗಳಿಂದಲೂ, ಆಕಾಶ, ಶಬ್ದಗಳು ಆತನ ಶ್ರೋತ್ರೇಂದ್ರಿಯ ದಿಂದಲೂ ಉತ್ಪನ್ನವಾದುವು. ಆತನ ಶರೀರದಿಂದ ಎಲ್ಲಾವಸ್ತುಗಳಲ್ಲಿಯೂ ಇರುವ ಕಾಂತಿಯೂ, ಚೈತನ್ಯದ ಅಂಶವೂ, ಉದ್ಭವಿಸಿದವು. ಸ್ಪರ್ಶವೂ ವಾಯುವೂ, ಸಮಸ್ತಯಜ್ಞಗಳೂ ಆತನ ಚರ್ಮದಿಂದ ಹುಟ್ಟಿದವು. ಭೂಮಿಯನ್ನು ಒಡೆದುಕೊಂಡು ಹುಟ್ಟುವ ವೃಕ್ಷಗಳೂ, ಹುಲ್ಲುಗಳೂ, ಆತನ ರೋಮಗಳಿಂದ, ಕೇಶಗಳಿಂವ ಮೇಘವೂ, ಶ್ಮಶ್ರು (ಮೀಸೆ) ಗಳಿಂದ ಮಿಂಚೂ, ಕೈಕಾಲುಗಳ ಉಗುರುಗಳಿಂದ ಶಿಲೆಗಳೂ, ವಿವಿಧ ಧಾತುಗಳೂ ಉತ್ಪನ್ನವಾದುವು.

ಜಗತ್ತನ್ನು ಕಾಪಾಡುತ್ತಿರುವ ಲೋಕಪಾಲಕರು ಆತನ ಬಾಹು ಗಳಿಂದಲೂ, ಭೂರ್ಭುವಸ್ಸುವರ್ಲೋಕಗಳು ಆತನ ಪದವಿನ್ಯಾಸದಿಂದಲೂ,

ಕ್ಷೇಮ, ಶರಣ, ವರದಾನಗಳು ಆತನ ಚರಣದಿಂದಲೂ, ವೀರ್ಯ, ಜಲ, ಜಗತ್ತಿನಲ್ಲಿ ಹುಟ್ಟಿದ ಸಮಸ್ತ ವಸ್ತುಗಳೂ, ಪರ್ಜನ್ಯ, ಪ್ರಜಾಪತಿ, ಇವುಗಳೆಲ್ಲಾ ಆತನ ಜನನೇಂದ್ರಿಯದಿಂದಲೂ, ಸ್ತ್ರೀ ಪುರುಷ ಸಂಬಂಧದಿಂದ ಸಂತಾನಾರ್ಥವಾಗಿ ಹುಟ್ಟುವ ಆನಂದರೂಪ ಭೋಗಶಕ್ತಿಯು ಆತನ ಉಪಸ್ಥೇಂದ್ರಿಯದಿಂದಲೂ, ಮಿತ್ರದೇವತೆ, ಯಮದೇವರ, ಮಲತ್ಯಾಗ ಇವುಗಳು ಆತನ ಪಾಯು ಇಂದ್ರಿಯದಿಂದಲೂ, ಹಿಂಸೆ, ಮೃತ್ಯು, ನರಕಗಳು ಆತನ ಗುದೇಂದ್ರಿಯದಿಂದಲೂ, ಅಧರ್ಮ, ಅಜ್ಞಾನಗಳು ಆತನ ಬೆನ್ನಿನಿಂದಲೂ, ಆತನ ನಾಡಿಗಳಿಂದ ನದಿಗಳೂ, ಅಸ್ಥಿಗಳಿಂದ ಪರ್ವತಗಳೂ ಉತ್ಪನ್ನವಾದುವು.

ಎಲೈ ನಾರದನೇ! ಫಲ, ಪುಷ್ಪ, ಅನ್ನರಸಗಳೂ, ನದೀ ನದ ಸರೋವರ ಸಮುದ್ರಗಳಲ್ಲಿರುವ ರಸಗಳೂ, ತತ್ವ ಸಮೂಹದ ಲಯಸ್ಥಾನಗಳೂ ಆತನ ಉದರದಿಂದಲೂ, ಜೀವನ ಲಿಂಗಶರೀರವಾದ ಮನಸ್ಸು ಆ ಪರಮ ಪುರುಷನ ಹೃದಯದಿಂದಲೂ, ಧರ್ಮಪುರುಷನೂ, ನಾನೂ, ನೀನೂ, ಸನತ್ಕುಮಾರಾದಿ ನಾಲ್ವರು ಕುಮಾರರೂ, ಶಿವ, ವಿಜ್ಞಾನ, ಚೈತನ್ಯ, ಇವರೆಲ್ಲರೂ ಆತನ ಆತ್ಮದಿಂದಲೂ ಉತ್ಪನ್ನರಾಗಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ, ನಾನೂ, ನೀನೂ, ಶಂಕರನೂ ನಿನ್ನ ಹಿರಿಯರಾದ ಋಷಿಗಳೂ, ದೇವ, ದೈತ್ಯ, ಮಾನವ, ನಾಗ, ಯಕ್ಷ, ಕಿನ್ನರ, ರಾಕ್ಷಸ, ಭೂತಸಮೂಹ, ಪಶು, ಪಕ್ಷಿ, ಸರ್ಪ, ಗಂಧರ್ವ, ಅಪ್ಸರ, ಪಿತೃ, ಸಿದ್ಧ, ವಿದ್ಯಾಧರ, ಚಾರಣ, ವೃಕ್ಷಗಳೂ, ಜಲ, ಭೂಚರ, ಖೇಚರಪ್ರಾಣಿಗಳೂ, ಗ್ರಹ, ನಕ್ಷತ್ರ, ವಿದ್ಯುತ್, ತಾರಾಗಣಗಳೂ ಆ ವಿರಾಟ್ ಸ್ವರೂಪವೇ—ಆತನ ಶರೀರವೇ ಎಂದು ತಿಳಿಯಬೇಕು. ಭೂತ ಭವಿಷ್ಯತ್ ವರ್ತಮಾನಗಳೆಲ್ಲಾ ಈಶ್ವರನಿಂದಲೇ ವ್ಯಾಪ್ತವಾಗಿವೆ. ಸೂರ್ಯನು ತನ್ನ ಮಂಡಲದಿಂದ ಬ್ರಹ್ಮಾಂಡವನ್ನೆಲ್ಲಾ ಹೇಗೆ ಬೆಳಗಿಸುತ್ತಾನೆಯೋ ಹಾಗೆಯೇ ಈ ಪರಮಪುರುಷನಿಂದ ಬ್ರಹ್ಮಾಂಡವೆಲ್ಲಾ ಒಳಗೂ, ಹೊರಗೂ, ಪ್ರಕಾಶಿಸಲ್ಪಡುತ್ತಿದೆ. ಆತನು ಜಗತ್ತನ್ನು ರಕ್ಷಣೆಮಾಡುವ ಭರಣಧರ್ಮದಿಂದಲೇ ಇರುವನೆಂದು ತಿಳಿಯಬಾರದು. ಆತನು ಅಮೃತಕ್ಕೂ ಅಭಯಕ್ಕೂ

ಸ್ವಾಮಿಯಾಗಿದ್ದಾನೆ. ಅಂದರೆ ಅಮೃತ–ಶಾಶ್ವತ ಮೋಕ್ಷರೂಪ ಅಭಯ–ಬ್ರಹ್ಮಾನಂದಕ್ಕೂ ಸ್ವಾಮಿಯಾಗಿದ್ದಾನೆ. ಆತನ ಮಹಿಮೆಯನ್ನು ಇಷ್ಟೇ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ ಅವಿನಾಶಿಯಾದಾ ಪರಮಪುರುಷನ ಅಂಗಗಳಲ್ಲಿ ಸಮಸ್ತಸೃಷ್ಟಿಯೂ ಅಡಕವಾಗಿದೆ. ಆತನ ಶಿರೋಭಾಗದಲ್ಲಿ ಅಮೃತ, ಕ್ಷೇಮ, ಅಭಯಗಳು ವಿರಾಜಮಾನವಾಗಿವೆ. ಈ ಲೋಕತ್ರಯಗಳ ಹೊರಗೆ ಬ್ರಹ್ಮಚರ್ಯ, ವಾನಪ್ರಸ್ಥಗಳನ್ನು ಧಾರಣೆಮಾಡುವ ಋಷಿಗಳ ಲೋಕ (ತಪೋಲೋಕ, ಮಹೋಲೋಕ, ಜನೋಲೋಕಗಳೂ) ಗಳೂ, ಲೋಕತ್ರಯಗಳೊಳಗೆ ಬ್ರಹ್ಮಚರ್ಯರೂಪವಾದ ಮಹಾವ್ರತವನ್ನು ಅನುಸರಿಸದಿರುವ ಗೃಹಸ್ಥರ ಲೋಕಗಳೂ ಇವೆ. ಭೋಗ ಮೋಕ್ಷಗಳಿಗೆ ಸಾಧನರೂಪಗಳಾದ ಪ್ರವೃತ್ತಿ, ನಿವೃತ್ತಿ ಧರ್ಮಗಳು ಆ ಕ್ಷೇತ್ರಜ್ಞಪುರುಷನನ್ನು (ಈಶ್ವರನನ್ನು) ಆಶ್ರಯಿಸಿರುವುವು. ನಿವೃತ್ತಿಮಾರ್ಗವನ್ನು ವಿದ್ಯೆಯೆಂದೂ, ಪ್ರವೃತ್ತಿಮಾರ್ಗವನ್ನು ಅವಿದ್ಯೆಯೆಂದೂ ಕರೆಯುತ್ತಾರೆ. ಯಾರಿಂದ ಈ ಬ್ರಹ್ಮಾಂಡವು ಉತ್ಪನ್ನವಾಯಿತೋ ಮತ್ತು ಭೂತೇಂದ್ರಿಯ ಗುಣಮಯವಾದೀ ವಿರಾಡ್ರೂಪವು ಪ್ರಕಟವಾಯಿತೋ ಆತನೇ ಪರಮೇಶ್ವರನು. ಸೂರ್ಯನು ಹೇಗೆ ಎಲ್ಲೆಲ್ಲಿಯೂ ತನ್ನ ಪ್ರಕಾಶವನ್ನು ಬೀರುತ್ತಿದ್ದರೂ ತನ್ನ ಮಂಡಲದೊಳಗೇ ಇರುವನೋ ಹಾಗೆಯೇ ಈಶ್ವರನೂ ಸಹಾ ತನ್ನ ಚೈತನ್ಯಶಕ್ತಿಯಿಂದ ಜಗತ್ತನ್ನೆಲ್ಲಾ ಬೆಳಗುತ್ತಾ ತನ್ನ ರೂಪದೊಳಗೇ ನಿಂತಿದ್ದಾನೆ. ನಾನು ಮಹಾತ್ಮನಾದ ಈಶ್ವರನ ನಾಭಿಕಮಲದಿಂದ ಉತ್ಪನ್ನನಾದಾಗ ನನಗೆ ಕೆಲವು ಯಜ್ಞಸಾಮಗ್ರಿಗಳು ಕಾಣಿಸಿದವು. ಆ ಪುರುಷನ ಅಂಗಗಳಿಂದಲೇ ಯಜ್ಞಪಶು, ವನಸ್ಪತಿ, ಕುಶ, ಯಜ್ಞಯೋಗ್ಯಸ್ಥಾನ, ಯಜ್ಞಯೋಗ್ಯಸಮಯ, ಯಜ್ಞಪಾತ್ರೆ, ವಿವಿಧ ಔಷಧಿಗಳು, ರಸಗಳು, ಘೃತಾದಿಗಳು, ಮೃತ್ತಿಕೆ, ಲೋಹಾದಿ ಧಾತುಗಳು, ಜಲ, ಚಾತುರ್ಹೋತ್ರ, ಋಗ್ವೇದ, ಯಜುರ್ವೇದ, ಸಾಮವೇದ, ಜ್ಯೋತಿಷ್ಟೋಮಾದಿ ಯಜ್ಞಗಳು, ಧರ್ಮ, ವ್ರತ, ಮಂತ್ರ, ದಕ್ಷಿಣಾ, ದೇವತಾ, ಕಲ್ಪ (ಬೋಧಾಯನಾದಿ ಕರ್ಮಪದ್ಧತಿ) ಸಂಕಲ್ಪ, ತಂತ್ರ, ಗತಿ, ಮತಿ, ಪ್ರಾಯಶ್ಚಿತ್ತ, ಸಮರ್ಪಣ ಮುಂತಾದ ಯಜ್ಞಯೋಗ್ಯ ಸಾಮಗ್ರಿಗಳನ್ನೆಲ್ಲಾ ಒಟ್ಟುಗೂಡಿಸಿಕೊಂಡು ಅವುಗಳಿಂದಲೇ ಆ ಯಜ್ಞಪುರುಷನಾದ

ಈಶ್ವರನನ್ನು ಆರಾಧಿಸಿದೆನು. ನಂತರ ನಿನ್ನ ಸೋದರರಾದ ಮರೀಚಿ, ಕಶ್ಯಪಾದಿ ನವಬ್ರಹ್ಮರೂ ಏಕಾಂತ ಚಿತ್ತದಿಂದ ನಿರ್ಗುಣ, ಸಗುಣರೂಪಿಯಾದ ಈಶ್ವರನನ್ನು ಆರಾಧನೆಮಾಡಿದರು. ಅನಂತರ ಕಾಲಕ್ರಮದಿಂದ ಮನುಗಳು, ಋಷಿಗಳು, ಪಿತೃಗಳು, ದೇವ ದೈತ್ಯಮಾನವರುಗಳು, ಅದೇ ಯಜ್ಞಸಾಮಗ್ರಿಗಳಿಂದಲೇ ಆ ಯಜ್ಞಪುರುಷನನ್ನು ಆರಾಧಿಸಿದರು. ಎಲೈ ನಾರದನೆ! ಈ ವಿಶ್ವವೆಲ್ಲವೂ ಭಗವಂತನಾದ ನಾರಾಯಣನಲ್ಲಿ ಅಡಗಿಕೊಂಡಿದೆ ಆತನೇ ಸೃಷ್ಟಿ ಸ್ಥಿತಿ ಲಯಾದಿ ಕಾರ್ಯಗಳಿಗಾಗಿ ತನ್ನ ಮಾಯೆಯ ಗುಣಗಳನ್ನು ಗ್ರಹಣಮಾಡಿ ಸಗುಣನಾಗುತ್ತಾನೆ. ವಾಸ್ತವವಾಗಿ ಆತನು ನಿರ್ಗುಣ ಪರಮಾನಂದಮಯ ಸ್ವರೂಪನಾಗಿದ್ದಾನೆ. ಆತನ ಆಜ್ಞೆಯಿಂದಲೇ ನಾನು ಜಗತ್ತನ್ನು ಉತ್ಪನ್ನಮಾಡುತ್ತೇನೆ. ಮಹಾದೇವನು ಸಂಹಾರಮಾಡುತ್ತಾನೆ ಆ ಸರ್ವಶಕ್ತನಾದ ಈಶ್ವರನು ಸ್ವಯಂ ವಿಷ್ಣುರೂಪದಿಂದ ಪಾಲನೆಮಾಡುತ್ತಾನೆ

ವತ್ಸ ನಾರದ! ನೀನು ಕೇಳಿದುದಕ್ಕೆ ನಾನೀಗ ಉತ್ತರಹೇಳಿದ್ದೇನೆ. ಕಾರ್ಯ ಕಾರಣಗಳೆರಡೂ ಆ ಈಶ್ವರನಿಂದ ಭಿನ್ನವಾಗಿಲ್ಲ. ನನ್ನ ವಾಣಿಯು ಸುಳ್ಳಾಗುವುದಿಲ್ಲ. ನನ್ನ ಮನಸ್ಸಿನ ಗತಿಯು ಅಸತ್ಯದ ಕಡೆಗೆ ಹೋಗುವುದಿಲ್ಲ ನನ್ನ ಇಂದ್ರಿಯಗಳು ತಪ್ಪುದಾರಿಯನ್ನು ಹಿಡಿಯುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಈಶ್ವರನ ಇಚ್ಛಾಸ್ವರೂಪವಾದ ಚೈತನ್ಯಶಕ್ತಿಯು ನನ್ನ ಹೃದಯವನ್ನು ಸರ್ವದಾ ಬೆಳಗಿಸುತ್ತಿರುವುದು. ನಾನು ವೇದಮಯನಾಗಿದ್ದೇನೆ. ತಪೋಮಯನಾಗಿದ್ದೇನೆ ಪ್ರಜಾಪತಿಗಳಿಂದ ಪೂಜಿತನಾಗಿದ್ದೇನೆ. ಆದರೂ ಸರ್ವಶ್ರೇಷ್ಠವಾದ ಯೋಗದ ಆಧಾರದಿಂದಲಾದರೂ ನನ್ನ ಉತ್ಪತ್ತಿಗೆ ಕಾರಣನಾದ ಈಶ್ವರನನ್ನು ಚೆನ್ನಾಗಿ ತಿಳಿಯಲಾರದವನಾಗಿದ್ದೇನೆ. ನಾರದ! ಶರಣಾಗತರಾದ ಮನುಷ್ಯರನ್ನು ಜನ್ಮ ಮರಣಗಳ ಸಿಕ್ಕಿನಿಂದ ಬಿಡಿಸಿ, ಅವರನ್ನು ಉದ್ಧಾರಮಾಡುವ ಆ ಭಗವಂತನ ಚರಣಕಮಲಗಳನ್ನು ನಾನು ನಮಸ್ಕರಿಸುತ್ತಿರುತ್ತೇನೆ. ಆಕಾಶವು ಹೇಗೆ ತನ್ನನ್ನೇ ತಾನು ತಿಳಿಯಲಾರದೋ, ಹಾಗೆಯೇ ಈಶ್ವರನೂ ಸಹಾ ತನ್ನ ಅನಂತ ಮಾಯೆಯ ವೈಭವವನ್ನು ಕಾಣಲಾರದಂತಿರುವಾಗ ಸಾಮಾನ್ಯ ಮನುಷ್ಯರ ಪಾಡೇನು ?

ಆ ಪರಮೇಶ್ವರನ ನಿಷ್ಪ್ರಪಂಚಗತಿಯನ್ನು ನಾನೂ ನೀನೂ ಮಹಾದೇವನೂ ತಿಳಿಯಲಾರದಂತಿರುವಾಗ ದೇವತೆಗಳ ಪಾಡೇನು ? ಆ ಈಶ್ವರನ ಮಾಯೆಯಿಂದ ಮೋಹಿತರಾದ ನಾವುಗಳು ಆತನ ಮಾಯೆಯಿಂದಲೇ ಉತ್ಪನ್ನವಾದ ಈ ಜಗತ್ತನ್ನು ನಮ್ಮ ನಮ್ಮ ಬುದ್ಧಿಗೆ ಅನುಸಾರವಾಗಿಯೇ ತಿಳಿದುಕೊಳ್ಳುತ್ತೇವೆ. ನಾವುಗಳು ಆತನ ಅವತಾರ ಲೀಲೆಗಳನ್ನು ಗಾನಮಾಡುತ್ತೇವಾದರೂ ಆತನ ಯಥಾರ್ಥ ತತ್ವವನ್ನು ಅರ್ಥಮಾಡಿಕೊಳ್ಳಲಾರೆವು ಆ ಆದ್ಯಂತ ರಹಿತನಾದ ಪುರಾಣಪುರುಷನು ಪ್ರತಿಯೊಂದು ಕಲ್ಪದಲ್ಲಿಯೂ ತನ್ನನ್ನು ತನ್ನಲ್ಲಿ ತನ್ನಿಂದಲೇ ಉತ್ಪತ್ತಿ, ಸ್ಥಿತಿ, ಲಯಗಳನ್ನು ಮಾಡಿಕೊಳ್ಳುತ್ತಾನೆ. ಆತನೇ ಕೇವಲ ವಿಶುದ್ಧ ಜ್ಞಾನಮಯನು. ಆತನೇ ಸಮಸ್ತದಲ್ಲಿಯೂ ವಿರಾಜಮಾನನಾಗಿದ್ದಾನೆ. ಆತನು ಸತ್ಯಸ್ವರೂಪನಾಗಿ, ನಿರ್ಗುಣನಾಗಿದ್ದಾನೆ. ಪೂರ್ಣನಾಗಿದ್ದಾನೆ. ಆದ್ಯಂತರಹಿತನಾಗಿದ್ದಾನೆ. ನಿತ್ಯನಾಗಿ ಅದ್ವಿತೀಯನಾಗಿದ್ದಾನೆ ,ಯಾರ ಆತ್ಮವೂ, ಇಂದ್ರಿಯಗಳೂ, ವಿಷಯ ಭೋಗವಾಸನೆಯೂ ಶಾಂತವಾಗಿರುವುವೋ, ಅಂತಹ ಮುನಿಗಳು ಮಾತ್ರ ಆ ಈಶ್ವರನನ್ನು ತಿಳಿಯಬಲ್ಲರು ಅಂತಃಕರಣವು ಶುದ್ಧವಾಗಿಲ್ಲದೆ ತಮ್ಮ ತಮ್ಮ ಬುದ್ಧಿಶಕ್ತಿಯಿಂದ ಮಾತ್ರ ದೇವನನ್ನು ತಿಳಿಯಲಿಚ್ಛಿಸುವರು ಆತನನ್ನು ಹೇಗೆ ತಿಳಿಯಬಲ್ಲರು ? ಈಶ್ವರನನ್ನು ತಿಳಿಯಬೇಕಾದರೆ ದಿವ್ಯ ದೃಷ್ಟಿಯು ಬೇಕು.

ಆ ಪುರಾಣಪುರುಷನಾದ ಪರಮೇಶ್ವರನ ಮೊದಲನೆಯ ಅವತಾರವೇ ವಿರಾಟ ಪುರುಷಾವತಾರವು. ಕಾಲ, ಸ್ವಭಾವ, ಸತ್, ಅಸತ್, ಮನಸ್ಸು, ಪಂಚ ತತ್ವ, ಅಹಂಕಾರ, ಗುಣತ್ರಯಗಳು, ಇಂದ್ರಿಯಗಳು, ವಿರಾಡ್ಭಾವವು, ಸ್ಥಾವರ ಜಂಗಮ ಭಾವಗಳು, ಈ ಸಮಸ್ತ ವ್ಯಷ್ಟಿ, ಸಮಷ್ಟಿ, ಸೃಷ್ಟಿಗಳೂ ಈಶ್ವರನ ಅವತಾರವೇ. ನಾನೂ, ಶಿವ, ವಿಷ್ಣು, ದಕ್ಷಾದಿ ಪ್ರಜಾಪತಿಗಳೂ, ನೀನೂ, ನಿನ್ನೊಡನಿರುವ ಮುನಿಗಣಗಳೂ, ಊರ್ಧ್ವ, ಅಂತರಿಕ್ಷ, ಪೃಥ್ವಿ, ಅತಲಾದಿ ಪಾತಾಳಲೋಕಗಳ ಅಧಿಪತಿಗಳೂ, ಎಲ್ಲವೂ ಈಶ್ವರನ ಅವತಾರವೇ.

ಗಂಧರ್ವ, ವಿದ್ಯಾಧರ, ಚಾರಣ, ಅಪ್ಸರ, ಯಕ್ಷ, ರಾಕ್ಷಸ, ಸರ್ಪ, ನಾಗ, ಋಷಿ, ಪಿತೃ ಶ್ರೇಷ್ಠರ, ದೈತ್ಯೇಂದ್ರ, ಸಿದ್ಧೇಶ್ವರ, ದಾನವೇಂದ್ರರು ಗಳೆಲ್ಲಾ ಈಶ್ವರನ ಅವತಾರವೇ. ಪ್ರೇತ, ಪಿಶಾಚ, ಭೂತ, ಕೂಷ್ಮಾಂಡ, ಜಲಜಂತು, ಮೃಗ, ಪಶುಪಕ್ಷಿಗಳೆಲ್ಲಾ ಈಶ್ವರನ ಅವತಾರವೇ. ಈ ಜಗತ್ತಿನಲ್ಲಿರುವ ಐಶ್ವರ್ಯ, ತೇಜಸ್ಸು, ಓಜಸ್ಸು, ಉತ್ಸಾಹ, ಬಲ, ಕ್ಷಮಾ, ಸೌಂದರ್ಯ, ನಿಂದ್ಯಕರ್ಮಗಳ ಘೃಣಾ, ವಿಭೂತಿ, ಎಲ್ಲವೂ, ಸೃಷ್ಟಿಯಲ್ಲಿನ ರೂಪಯುಕ್ತ ರೂಪರಹಿತಶಕ್ತಿಗಳೆಲ್ಲವೂ ಪರಮೇಶ್ವರನ ಅವತಾರವೇ

ನಾರದ ! ಇವೆಲ್ಲವೂ ಸಾಧಾರಣ ಅವತಾರಗಳು. ಋಷಿಗಳು ಪರಮೇಶ್ವರನ ಪ್ರಧಾನ ಅವತಾರಗಳೆಂದು ಗಣಿಸುವ ಪತಿತಪಾವನ ಚರಿತ್ರೆಯನ್ನು ಹೇಳುತ್ತೇನೆ. ಮನಸ್ಸಿಟ್ಟು ಕೇಳು.

ಆ ಅನಂತಸ್ವರೂಪಿಯಾದ ಪರಮಪುರುಷನು ಸರ್ವಯಜ್ಞಮಯನಾದ ವರಾಹಶರೀರವನ್ನು ಧಾರಣೆಮಾಡಿ, ಇಂದ್ರನು ವಜ್ರಾಯುಧದಿಂದ ಪರ್ವತ ಗಳನ್ನು ಸೀಳುವಂತೆ, ಆದಿದೈತ್ಯನಾದ ಹಿರಣ್ಯಾಕ್ಷನನ್ನು ತನ್ನ ಕೋರೆದಾಡೆ ಗಳಿಂದ ಸೀಳಿ ಪೃಥ್ವಿಯನ್ನು ಮಹಾಸಾಗರದಿಂದ ಮೇಲಕ್ಕೆತ್ತಿ ತಂದನು. ಆ ವಿಷ್ಣುವು ರುಚಿ ಪ್ರಜಾಪತಿಯ ವೀರ್ಯದಿಂದ ಆಕೂತಿ ಎಂಬ ಹಸರಿನ ಸ್ತ್ರೀಯ ಗರ್ಭದಲ್ಲಿ **ಸುಯಜ್ಞ** ಎಂಬ ಹೆಸರಿನಿಂದ ಪ್ರಕಟನಾಗಿ ದಕ್ಷಿಣಾ ಎಂಬ ತನ್ನ ಪತ್ನಿಯಲ್ಲಿ ಸುಯಮ ಎಂಬ ದೇವಗಣಗಳನ್ನು ಹುಟ್ಟಿಸಿದನು. ಲೋಕತ್ರಯಗಳ ಪೀಡೆಯನ್ನು ಹರಣಮಾಡಿದ್ದರಿಂದ ಸ್ವಾಯಂಭುವ ಮನುವು ಹರಿ ಎಂಬ ಹೆಸರನ್ನು ಕೊಟ್ಟನು. ಪರಮಾತ್ಮನೇ ದೇವಹೂತಿಯ ಗರ್ಭದಲ್ಲಿ ಕರ್ದಮಪ್ರಜಾಪತಿಯಿಂದ ಏಳು ಜನ ಸಹೋದರಿಯರೊಡನೆ **ಕಪಿಲದೇವನೆಂಬ** ಹೆಸರಿನಿಂದ ಉತ್ಪನ್ನನಾಗಿ ತಾಯಿಗೆ ಬ್ರಹ್ಮವಿದ್ಯೆಯನ್ನು ಉಪದೇಶಮಾಡಿದನು. ಅದರಿಂದ ಆಕೆಯು ಅದೇ ಜನ್ಮದಲ್ಲಿ ಗುಣಸಂಗ ರೂಪವಾದ ಕೊಳೆಯಿಂದ ಶುದ್ಧಳಾಗಿ ಮುಕ್ತಿಯನ್ನು ಪಡೆದಳು. ಅತ್ರಿ ಋಷಿಯು ಪರಮಾತ್ಮನನ್ನೇ ತನ್ನ ಪುತ್ರನಾಗಬೇಕೆಂದು ಪ್ರಾರ್ಥಿಸಲು ದತ್ತನಾಮದಿಂದ ಉತ್ಪನ್ನನಾದನು. ಯದುರಾಜ, ಕಾರ್ತವೀರ್ಯಾರ್ಜುನ ಮುಂತಾದವರೆಲ್ಲಾ ಆತನ ಚರಣಕಮಲಗಳಿಂದ ತಮ್ಮ ದೇಹಗಳನ್ನು ಪವಿತ್ರ

ಮಾಡಿಕೊಂಡು ಭೋಗ, ಮೋಕ್ಷರೂಪ ಸಿದ್ಧಿಗಳೆರಡನ್ನು ಪಡೆದರು. ವಿವಿಧ ಜ್ಞಾನ ಸೃಷ್ಟಿಯನ್ನು ಉತ್ಪನ್ನಮಾಡುವುದಕ್ಕಾಗಿ ನಾನು ಪ್ರಪ್ರಥಮದಲ್ಲಿ 'ಸನ' ಎಂಬ ಅಖಂಡ ತಪಸ್ಸುಮಾಡಿದುದರಿಂದ ಆ ತಪಸ್ಸಿನ ಫಲವಾಗಿ ಪರಮಾತ್ಮನು ಸನಕ, ಸನಂದನ, ಸನಾತನ, ಸನತ್ಕುಮಾರರೆಂಬ ನಾಲ್ವರು 'ಸನ' ಕುಮಾರರೂಪದಿಂದ ಪ್ರಕಟನಾಗಿ ಹಿಂದಿನ ಕಲ್ಪದಲ್ಲಿ ನಷ್ಟವಾಗಿ ಹೋಗಿದ್ದ ಆತ್ಮತತ್ವವನ್ನು ಋಷಿಗಳಿಗೆ ಉಪದೇಶಮಾಡಿದನು. ಅವರ ಪ್ತಿರ ಶ್ರವಣಮಾಡಿದುದರಿಂದ ಋಷಿಗಳ ಅಂತಃಕರಣದಲ್ಲಿ ಆತ್ಮಜ್ಞಾನವು ಪ್ರಕಟವಾಯಿತು. ಭಗವಂತನು ನಂತರ ದಕ್ಷಪ್ರಜಾಪತಿಯ ಕನ್ಯೆಯೂ, ಧರ್ಮನಪತ್ನಿಯೂ, ಆದ ಮೂರ್ತಿದೇವಿಯ ಗರ್ಭದಲ್ಲಿ ನರನಾರಾಯಣ ರೂಪದಿಂದ ಅವತಾರಮಾಡಿದನು. ಮನ್ಮಥನ ಸೇನಾರೂಪರಾದ ಅಪ್ಸರೆಯರು ನರನಾರಾಯಣರ ತಪಸ್ಸನ್ನು ಭಂಗಮಾಡಲುಬಂದಾಗ ತಮಗಿಂತಲೂ ನೂರುಪಾಲು ಸುಂದರಿಯರಾದ ಊರ್ವಶೀ ಮುಂತಾದ ಸ್ತ್ರೀಯರು ಅವರ ಸೇವೆಮಾಡುತ್ತಿರುವುದನ್ನು ನೋಡಿ ನಾಚಿಕೊಂಡು ಸ್ವರ್ಗಕ್ಕೆ ಹಿಂದಿರುಗಿದರು. ಶಿವನು ಕಾಮನನ್ನು ಕ್ರೋಧದೃಷ್ಟಿಯಿಂದ ನೋಡಿ ಭಸ್ಮಮಾಡಿದರೂ ಕ್ರೋಧವನ್ನು ಸುಡಲಾಗಲಿಲ್ಲ. ಆದರೆ ಅದೇ ಕ್ರೋಧವೇ ಹರಿಯ ಚಿತ್ತಾಂತಃಕರಣವನ್ನು ಪ್ರವೇಶಮಾಡಲು ಹೆದರುವುದರಿಂದ ಕಾಮನಿಗೆ ಹರಿಯ ಅಂತಃಕರಣದ ಮೇಲೆ ಅಧಿಕಾರಮಾಡಲು ಸಾಧ್ಯವಿದೆಯೇ ?

ಧ್ರುವನು ತಂದೆಯಾದ ಉತ್ತಾನಪಾದರಾಯನ ಸಮಕ್ಷಮದಲ್ಲಿಯೇ ಸವತಿ ತಾಯಿಯ ಮಾತುಗಳಿಂದ ಖಿನ್ನನಾಗಿ ಬಾಲ್ಯದಲ್ಲಿಯೇ ತಪಸ್ಸಿಗೆ ಹೊರಟುಬಿಟ್ಟನು. ಆಗ ಪರಮಾತ್ಮನು ಅವತಾರಮಾಡಿ ಧ್ರುವನಿಗೆಪ್ರಸನ್ನನಾಗಿ ಅವನಿಗೆ ಧ್ರುವಲೋಕದಲ್ಲಿ ಸ್ಥಾನವನ್ನು ಕೊಟ್ಟನು. ಆ ಧ್ರುವ ಲೋಕದ ಮೇಲ್ಭಾಗದಲ್ಲಿ ಭೃಗು ಆದಿ ಮುನಿಗಳೂ, ಅದರ ಕೆಳಗೆ ಸಪ್ತ ಋಷಿಗಳೂ ಸ್ತೋತ್ರಮಾಡುತ್ತಿರುವರು.

ರಾಜಾ ವೇನನು ದುರ್ಮಾರ್ಗನಾದುದರಿಂದ ಋಷಿಗಳ ಶಾಪದಿಂದ ಅವನ ಪೌರುಷವೂ, ಐಶ್ವರ್ಯವೂ ನಷ್ಟವಾಯಿತು. ಅವನು ತನ್ನ ಪಾಪಕರ್ಮದ ಫಲವಾಗಿ ನರಕಕ್ಕೆ ಹೋದನು. ಋಷಿಗಳ ಪ್ರಾರ್ಥನೆಯಂತೆ ಭಗವಂತನು

ಅವನ ತೊಡೆಯಿಂದ ಪೃಥು ಎಂಬ ಹೆಸರಿನಿಂದ ಹುಟ್ಟಿ ಗೋರೂಪಳಾದ ಪೃಥ್ವಿಯಿಂದ (ಭೂಮಿ) ಸಮಸ್ತ ವಸ್ತುಗಳನ್ನು ಹಾಲು ಕರೆದಂತೆ ಕರೆದನು.

ಆಗ್ನೀಧ್ರ ರಾಜನ ಮಗನಾದ ನಾಭಿಯ ವೀರ್ಯದಿಂದ ಸುದೇವೀ ಎಂಬ ರಾಣಿಯಲ್ಲಿ ಋಷಭ ನಾಮದಿಂದ ಭಗವಂತನು ಅವತಾರ ಮಾಡಿದನು. ಸ್ವಸ್ಥ, ಶಾಂತೇಂದ್ರಿಯ, ವಿಷಯಾಸಕ್ತಿಹೀನ, ಸಮದರ್ಶೀ ರೂಪವಾದ ಪರಮಹಂಸ ಪದವಿಯನ್ನು ಕಠಿಣತಪಸ್ಸಿನ ಫಲವಾಗಿ ಹೊಂದಿ ಪರಮಹಂಸ ಪದವಿಯನ್ನು ಪಡೆದನು

ಕುದುರೆಯ ಮುಖದ ಹಯಗ್ರೀವಾವತಾರದಲ್ಲಿ—ನನ್ನ ಯಜ್ಞದಲ್ಲಿ ಸುವರ್ಣಮಯವಾದ—ವೇದಮಯವಾದ—ಯಜ್ಞಮಯವಾದ—ಸಂಪೂರ್ಣ ದೇವತಾಮಯವಾದ ತೇಜಸ್ಸಿನಿಂದ, ತನ್ನ ಶ್ವಾಸಗಳಿಂದ ವೇದವಾಕ್ಯಗಳನ್ನೆಲ್ಲಾ ಉಚ್ಚಾರಮಾಡಿದನು.

ಕಲ್ಪಾಂತರದಲ್ಲಿ ವೈವಸ್ವತಮನುವು ಮತ್ಸ್ಯರೂಪದ ಪರಮಾತ್ಮಾವತಾರವನ್ನೇ ದರ್ಶನಮಾಡಿದನು. ಪ್ರಳಯಕಾಲದಲ್ಲಿ ನಷ್ಟವಾಗಿ ಹೋಗಿದ್ದ ವೇದವನ್ನೂ, ಪೃಥ್ವಿಯನ್ನೂ ಬೆನ್ನ ಮೇಲೆ ಹೊತ್ತುಕೊಂಡು ಮಹಾಸಾಗರದಲ್ಲಿ ಪುನಃ ಸೃಷ್ಟಿಯವರೆಗೂ ವಿಹಾರಮಾಡಿ ಧರ್ಮೋದ್ಧಾರ ಮಾಡಿದನು.

ದೇವತೆಗಳೂ, ದಾನವರೂ ಅಮೃತಮಥನ ಮಾಡುತ್ತಿರುವಾಗ ಕಡೆಗೋಲಿನಂತಿದ್ದ ಮಂಥರಾಚಲವನ್ನು ಮಹಾಕೂರ್ಮರೂಪದಿಂದ ಧಾರಣೆ ಮಾಡಿದನು.

ನೃಸಿಂಹರೂಪ ಧಾರಣೆಮಾಡಿ ಹಿರಣ್ಯಕಶಿಪು ದೈತ್ಯನನ್ನು ತನ್ನ ನಖಗಳಿಂದ ಸೀಳಿ ಕೊಂದುಹಾಕಿ ದೇವತೆಗಳ ದುಃಖ ಶಮನಮಾಡಿದನು.

ಸರೋವರದಲ್ಲಿ ಮೊಸಳೆಯಿಂದ ಹಿಡಿಯಲ್ಪಟ್ಟು ದುಃಖಾರ್ತನಾದ ಗಜರಾಜನು ತನ್ನ ಸೊಂಡಲಿನಿಂದ ಕಮಲವನ್ನು ಕಿತ್ತು ಮೇಲಕ್ಕೆಸೆಯುತ್ತಾ ಹೇ! ಆದಿಪುರುಷ! ಜಗದೀಶ! ಪವಿತ್ರನಾಮ! ಪವಿತ್ರಕೀರ್ತೇ! ನನ್ನನ್ನು ಉದ್ಧರಿಸು" ಎಂದು ಪ್ರಾರ್ಥಿಸಿ ಬೇಡಲು ಚಕ್ರಧಾರಿಯು ಗರುಡಾರೂಢನಾಗಿ ಬಂದು ಮೊಸಳೆಯನ್ನು ಸೀಳಿ ಅವನನ್ನು ಉದ್ಧರಿಸಿದನು.

ವಾಮನಾವತಾರದಲ್ಲಿ ದೇವತೆಗಳ ಸಹಾಯಾರ್ಥವಾಗಿ ಅತ್ಯಂತ ಚಿಕ್ಕ ಕುಳ್ಳರೂಪದಿಂದ ಬಲಿಚಕ್ರವರ್ತಿಯ ಯಜ್ಞಶಾಲೆಗೆ ಹೋಗಿ, ಆತನನ್ನು ಮೂರು ಹೆಜ್ಜೆ ಭೂಮಿಯನ್ನು ಯಾಚನೆಮಾಡಿ ಎರಡು ಹೆಜ್ಜೆಗಳಿಂದ ಸ್ವರ್ಗ, ಮರ್ತ್ಯಲೋಕಗಳನ್ನು ಅಳೆದುಬಿಟ್ಟು ಮೂರನೇ ಹೆಜ್ಜೆಯನ್ನು ಬಲಿಯ ತಲೆಯ ಮೇಲಿಟ್ಟು ಅವನಿಗೆ ಪಾತಾಳಲೋಕಾಧಿಪತ್ಯವನ್ನು ಕೊಟ್ಟು ಅವನನ್ನೂ ಉದ್ಧರಿಸಿ, ದೇವತೆಗಳಿಗೂ ಸಹಾಯ ಮಾಡಿದನು. ಆತನು ತಾನು ಸ್ವತಃ ಸರ್ವಗನೂ, ಸಕಲೈಶ್ವರ್ಯಗಳಿಗೂ ಯಜಮಾನನಾದರೂ, ಧರ್ಮಾತ್ಮರಿಂದ ಕಾರಣವಿಲ್ಲದೆ ಧನವನ್ನು ಕಿತ್ತುಕೊಳ್ಳುವುದು ಅಧರ್ಮವಾದುದರಿಂದ ಬಲಿಯನ್ನೇ ಯಾಚಿಸಬೇಕಾಯಿತು. ಬಲಿಯ ಹೊರಗಿನ ರಾಜ್ಯವನ್ನು ತೆಗೆದುಕೊಂಡರೂ, ಆತನು ತನ್ನ ಶರೀರವನ್ನು ಪರಮಾತ್ಮನಿಗೆ ಅರ್ಪಣ ಮಾಡಿದುದರಿಂದ ಆತನಿಗೆ ಭಕ್ತಿಸಾಮ್ರಾಜ್ಯವನ್ನು ಅನುಗ್ರಹಮಾಡಿ ಆತನನ್ನು ಉದ್ಧರಿಸಿದನು.

ಎಲೈ! ನಾರದ! ನಾರಾಯಣನು ನಿನ್ನ ಭಕ್ತಿಯಿಂದ ಸಂತುಷ್ಟನಾಗಿ ಹಂಸಾವತಾರದಿಂದ ನಿನಗೆ ಯೋಗವನ್ನೂ, ಆತ್ಮತತ್ವವನ್ನೂ ಪ್ರಕಾಶ ಮಾಡುವ, ವಾಸುದೇವಭಕ್ತಿಯಿಂದಲ್ಲದೆ ಬೇರೆ ಮಾರ್ಗದಿಂದ ಹೊಂದಲು ಅಸಾಧ್ಯವಾದ ಜ್ಞಾನವನ್ನು ಉಪದೇಶಮಾಡಿದನು ಲೋಕತ್ರಯಗಳಿಗೂ ಮೇಲಿರುವ ಸತ್ಯಲೋಕದಲ್ಲಿ ತನ್ನ ಜನಮನಮೋಹಿನೀ ಕೀರ್ತಿಯನ್ನು ವಿಸ್ತಾರಮಾಡುತ್ತಾ ಮನ್ವಂತರ ರೂಪದಿಂದ ಅವತಾರಮಾಡಿ, ಮನುವಂಶವನ್ನು ಪಾಲನೆಮಾಡುತ್ತಲೂ ತನ್ನ ತೇಜೋಯುಕ್ತ ಸುದರ್ಶನ ಚಕ್ರದಿಂದ ದುಷ್ಟ ರಾಜರುಗಳನ್ನು ಶಿಕ್ಷಿಸುತ್ತಲೂ ಇರುವನು ಧನ್ವಂತರೀ ರೂಪದಿಂದ ಅವತಾರಮಾಡಿ ವಿಷಯ ವ್ಯಾಧಿಗಳಿಂದ ಪೀಡಿತರಾದ ಜನರ ರೋಗಗಳನ್ನು ತನ್ನ ಹೆಸರಿನಿಂದಲೇ ಗುಣಪಡಿಸುತ್ತಿರುವನು ಆ ಅವತಾರದಲ್ಲಿಯೇ ದೈತ್ಯರಿಂದ ಹರಣಮಾಡಲ್ಪಟ್ಟ ಯಜ್ಞಭಾಗವನ್ನು ಹಿಂದಿರುಗಿಪಡೆದು ಆಯುರ್ವೇದವನ್ನು ಪ್ರಚಾರಮಾಡಿದನು. ಒಂದಾನೊಂದುಕಾಲದಲ್ಲಿ ಕ್ಷತ್ರಿಯರು ವೇದಮಾರ್ಗವನ್ನು ತ್ಯಜಿಸಿ ಹಿಂಸಾವೃತ್ತಿಗಳಲ್ಲಿ ನಿರತರಾಗಿ ಮನಃಪೂರ್ವಕವಾಗಿಯೇ ನರಕದ ಬಾಗಿಲನ್ನು ಹಿಡಿಯುತ್ತಿರಲು ಪರಮಾತ್ಮನು ಪರಶು

ರಾಮಾವತಾರಮಾಡಿ ಇಪ್ಪತ್ತೊಂದುಸಾರಿ ಕ್ಷತ್ರಿಯಕುಲವನ್ನೆಲ್ಲಾ ನಾಶ ಮಾಡಿದನು. ಮಾಯಾಧೀಶನಾದಾ ಈಶ್ವರನೇ ನಮ್ಮಗಳ ಮೇಲೆ ಅನುಗ್ರಹ ದಿಂದ ತನ್ನ ನಾಲ್ಕು ಅಂಶಗಳಿಂದ ರಾಮಾವತಾರಮಾಡಿ ಪಿತೃವಾಕ್ಯ ಪರಿಪಾಲನೆಯನ್ನು ನೆಪಮಾಡಿಕೊಂಡು ಅರಣ್ಯವಾಸಮಾಡಲು, ಆತನ ಪತ್ನಿಯನ್ನು ಕದ್ದುಕೊಂಡು ಲಂಕೆಗೆ ಹೋದ ರಾವಣನು ಶ್ರೀ ರಾಮಚಂದ್ರನ ಕೋಪಾಗ್ನಿಗೆ ಆಹುತಿಯಾಗಿ ಪರಿವಾರ ಸಮೇತ ನಾಶವನ್ನು ಹೊಂದಿದನು. ಮನುಷ್ಯರೂಪದಿಂದ ಹುಟ್ಟಿದ ರಾಕ್ಷಸರ ಭಾರದಿಂದ ಭೂಮಿಯು ಕುಗ್ಗುತ್ತಿದ್ದುದರಿಂದ ಬಲರಾಮ, ಕೃಷ್ಣರೂಪದ ಅಂಶಾವತಾರದಿಂದ ಸಾಧಾರಣ ಮನುಷ್ಯನು ಊಹಿಸಲಾರದಂತಹ ಲೀಲೆಗಳನ್ನು ಮಾಡುವನು ಹುಟ್ಟುತ್ತಲೇ ಪೂತನಾ ಪ್ರಾಣಹರಣ, ಮೂರನೇ ತಿಂಗಳಲ್ಲಿಯೇ ಶಕಟಾಸುರ ಭಂಜನ ತೊಡೆಗಳನ್ನು ಅಗಲಿಸಿ ಆಕಾಶವನ್ನು ಮುಟ್ಟುತ್ತಿದ್ದ ವೃಕ್ಷ ರೂಪರಾದ ಯಮಳಾರ್ಜುನರನ್ನು ಸೀಳಿಹಾಕುವಿಕೆ, ವ್ರಜದಲ್ಲಿ ವಿಷದಿಂದ ದೂಷಿತವಾದ ಯಮುನಾಜಲವನ್ನು ಕಾಳೀಯ ಸರ್ಪದ ದಮನದಿಂದ ಪವಿತ್ರಮಾಡುವಿಕೆ ಮುಂತಾದ ಅದ್ಭುತ ಲೀಲೆಗಳನ್ನು ಈಶ್ವರನಲ್ಲದೆ ಮತ್ತಾರುಮಾಡಬಲ್ಲರು? ಅದೇ ರಾತ್ರಿಯೇ ಗೋಪಗೋಪಿಯರೆಲ್ಲಾ ಕಣ್ಣು ಮುಚ್ಚಿ ನಿದ್ರೆಮಾಡುತ್ತಿರುವಾಗ ಘೋರ ದಾವಾನಲನು ಆ ಕಾಡನ್ನು ದಹಿಸ ಲಾರಂಭಿಸಲು ಶ್ರೀ ಕೃಷ್ಣಚಂದ್ರನು ಆ ದಾವಾಗ್ನಿಯನ್ನು ಬಾಯಿಯಲ್ಲಿ ಕುಡಿದುಬಿಡುವನು. ತಾಯಿಯಾದ ಯಶೋದೆಯು ಕೃಷ್ಣನನ್ನು ಕಟ್ಟಿ ಹಾಕಲು ಮನೆಯಲ್ಲಿರುವ ಹಗ್ಗಗಳನ್ನೆಲ್ಲಾ ತರಲು ಅವು ಚಿಕ್ಕದಾಗುವುವು. ಮಲಗಿಕೊಂಡು ಆಕಳಿಸುವ ಕೃಷ್ಣನ ಮುಖದಲ್ಲಿ ಹದಿನಾಲ್ಕು ಲೋಕಗಳನ್ನೂ ಕಂಡು ಭಯಭೀತಳಾಗುವಳು. ಹಾಗೆಯೇ ವರುಣಪಾಶದಿಂದ ನಂದಗೋಪ ನನ್ನು ಮುಕ್ತನನ್ನಾಗಿ ಮಾಡುವನು. ಮಯಾಸುರನ ಮಗನಾದ ವ್ಯೋಮಾ ಸುರನ ಬಂಧನದಿಂದ ಗೋಪಗಣವನ್ನು ಬಿಡಿಸುವಿಕೆ, ಏಳನೇ ವರ್ಷದಲ್ಲಿ ಗೋವರ್ಧನ ಗಿರಿಯನ್ನೆತ್ತುವಿಕೆ, ರಾಸಲೀಲಾ, ಶಂಖಚೂಡ ಯಕ್ಷನನ್ನು ಮರ್ದನಮಾಡುವಿಕೆ, ಪ್ರಲಂಬ, ಬಕ, ಧೇನುಕ ಮುಂತಾದ ರಾಕ್ಷಸರನ್ನು ಸಂಹರಿಸುವಿಕೆ, ಕುರುಕ್ಷೇತ್ರ ಯುದ್ಧ ನಾಟಕಕ್ಕೆ ಸೂತ್ರಧಾರಿಯಾಗುವಿಕೆ

ಮುಂತಾದ ಅಮಾನುಷ ಕೃತ್ಯಗಳಿಂದ ಭೂಭಾರಹರಣಮಾಡಿ ವೈಕುಂಠ ಲೋಕಕ್ಕೆ ಪ್ರಯಾಣಮಾಡುವನು. ತನ್ನಿಂದಲೇ ರಚಿತವಾದ ವೇದಗಳ ಅರ್ಥವನ್ನು ಕಲಿಯುಗದ ಅಲ್ಪಾಯುಗಳಾದ ಜನಗಳು ತಿಳಿಯಲು ಅಶಕ್ತರಾದುದರಿಂದ ಸತ್ಯವತೀಸುತನಾಗಿ ಅವತರಿಸಿ ವೇದಗಳನ್ನು ವಿಭಾಗಮಾಡಿ ವೇದವ್ಯಾಸನೆಂಬ ಹೆಸರನ್ನು ಪಡೆಯುವನು. ದೇವಶತ್ರುಗಳಾದ ಅಸುರರೂ ಮಯದಾನವ ರಚಿತ ಕಣ್ಣಿಗೆ ಕಾಣಿಸದಷ್ಟು ವೇಗವುಳ್ಳ ಪಟ್ಟಣಗಳಲ್ಲಿ ತಿರುಗುತ್ತಾ ಲೋಕಕಂಟಕರಾಗಿರಲು ಆ ಅಸುರರ ಬುದ್ಧಿಯು ಭ್ರಾಂತವಾಗುವಂತೆ ಉಪದೇಶಮಾಡುವ ಬುದ್ಧರೂಪವನ್ನು ಧಾರಣೆಮಾಡುವನು. ಕಲಿಯುಗದ ಕೊನೆಯಲ್ಲಿ ಸಾಧುಗಳ ಮನೆಯಲ್ಲಿಯೂ ಹರಿನಾಮ ಸಂಕೀರ್ತನೆಯು ಇಲ್ಲದಂತಾಗಿ, ಬ್ರಹ್ಮ, ಕ್ಷತ್ರಿಯ, ವೈಶ್ಯರು ನಾಸ್ತಿಕರಾಗಿ ಶೂದ್ರರು ರಾಜ್ಯ ಶಾಸನಮಾಡುತ್ತಿರಲು ಸ್ವಾಹಾಸ್ವಧಾವಷಟ್ಕಾರಗಳ ಶಬ್ದಗಳು ಕಿವಿಗೆ ಕೇಳಿಸದಂತಾಗಲು ಕಲ್ಕಿರೂಪದಿಂದವತರಿಸಿ ಕಲಿಯನ್ನು ಶಾಸನಮಾಡುವನು.

ವತ್ಸ! ಸೃಷ್ಟಿಯಕಾಲದಲ್ಲಿ ನಾನು ಮಾಡಿದ ತಪಸ್ಸು ಸ್ವಯಂಬ್ರಹ್ಮನಾದ ನಾನು, ನವಪ್ರಜಾಪತಿಗಳೂ, ಪಾಲನೆಯ ಸಮಯದಲ್ಲಿ ಧರ್ಮ, ವಿಷ್ಣು, ಮನು, ದೇವೇಶ, ರಾಜರುಗಳು, ಪ್ರಳಯಕಾಲದಲ್ಲಿ ಅಧರ್ಮ, ಶಿವ, ಮತ್ತು ಕ್ರೋಧವಶರಾದ ಸರ್ಪ ಮುಂತಾದ ದೈವೀಶಕ್ತಿಗಳು ಇವೆಲ್ಲವೂ ಮಾಯಾಮಯನಾದ ಭಗವಂತನ ವಿಭೂತಿಗಳೇ. ಪೃಥ್ವಿಯ ಪರಮಾಣುವನ್ನಾದರೂ ಎಣಿಸಬಲ್ಲ ಚತುರನೂ ಸಹಾ ವಿಷ್ಣುವಿನ ಅನಂತ ವಿಭೂತಿಗಳನ್ನೆಣಿಸಲಾಗುವುದಿಲ್ಲ.

ವಿಷ್ಣುವು ಒಂದಾವೃತ್ತಿ ತನ್ನ ಚರಣಗಳ ವೇಗದಿಂದ ಗುಣತ್ರಯಗಳ ಅಧಿಷ್ಠಾರೂಪವಾದ ಮಾಯೆ ಅಥವಾ ಪ್ರಕೃತಿಯನ್ನು ನಡುಗಿಸುವಂತೆ ನಡೆದನು. ಆ ಚರಣಘಾತದಿಂದ ಸತ್ಯಲೋಕವೂ ನಡುಗಿಬಿಟ್ಟಿತು ಆಗ ಆತನು ಆ ಸತ್ಯಲೋಕವನ್ನು ಧಾರಣೆಮಾಡಿದನು. ನನ್ನ ಹಿರಿಯರಾದ ಮುನಿಗಳೂ ಸಹಾ ಮಾಯಾಬಲಸಂಪನ್ನನಾದ ಪುರುಷನ ಅಂತವನ್ನು ತಿಳಿಯಲಾರದೆಹೋದರು. ಈಚೆಗೆ ಹುಟ್ಟಿದವನು ಹೇಗೆ ಆತನನ್ನು ತಿಳಿಯ

ಬಲ್ಲರು ? ಆದಿಶೇಷನೂ ಸಹಾ ತನ್ನ ಸಹಸ್ರ ಮುಖಗಳಿಂದ ನಿತ್ಯವೂ ಹರಿಯ ಗುಣಗಾನ ಮಾಡುತ್ತಿದ್ದರೂ ಹರಿಯ ಮಹಿಮೆಯ ಅಂತವನ್ನು ತಿಳಿಯಲಾಗಲಿಲ್ಲ. ಯಾವ ಸಜ್ಜನರ ಮೇಲೆ ಭಗವಂತನ ದಯೆಯುಂಟಾಗುವುದೋ ಅಂತಹ ಕಪಟವನ್ನು ತ್ಯಾಗಮಾಡಿ ಏಕಾಗ್ರ ಮನಸ್ಸಿನಿಂದ ಭಗವಂತನ ಚರಣಕಮಲಗಳಿಗೆ ಶರಣುಹೋಗುವ ಸತ್ಪುರುಷರು ಮಾತ್ರ ದುಸ್ತರವಾದ ದೇವಮಾಯೆಯನ್ನು ದಾಟಬಲ್ಲರು. ಸತ್ತ ನಂತರ ನಾಯಿ ನರಿಗಳಿಗೆ ಆಹಾರ ರೂಪವಾಗುವ ಈ ತುಚ್ಛ ಶರೀರವನ್ನೇ "ನಾನು" ಎಂದಾಗಲಿ "ನನ್ನದೆಂದಾಗಲಿ" ಹೇಳುವ ಅಭಿಮಾನವು ಅವರಿಗೆ ಇರವುದಿಲ್ಲ. ನಾನು, ಸನಕಾದಿಗಳು, ಋಷಿಗಳಾದ ನೀವುಗಳು, ಭಗವಾನ್ ಶಿವನು, ಪ್ರಹ್ಲಾದ ಮತ್ತು ಮನುವಿನ ಸ್ತ್ರೀಪುತ್ರಪತ್ನಿಯರು, ಪ್ರಾಚೀನಬರ್ಹಿ ಋಭು, ಅಂಗಿರಾ ಮತ್ತು ಧ್ರುವ, ಇಷ್ಟು ಜನಗಳುಮಾತ್ರ ಈಶ್ವರನ ಯೋಗಮಾಯೆಯನ್ನು ತಿಳಿಯಬಲ್ಲವರು. ಹಾಗೆಯೇ ಇಕ್ಷ್ವಾಕು, ಐಲ, ಮುಚುಕುಂದ, ಜನಕ, ಅಂಬರೀಷ ಮುಂತಾದ ರಾಜರ್ಷಿಗಳು ಸಹಾ ಆ ಯೋಗಮಾಯೆಯನ್ನು ತಿಳಿಯಬಲ್ಲರು. ಹೆಚ್ಚಿಗೆ ಹೇಳುವುದೇನು, ಸ್ತ್ರೀ, ಶೂದ್ರ, ಹೂಣ, ಶಬರ ಆದಿ ನೀಚ ಜನ್ಮದವರೂ ಸಹಾ ಅದ್ಭುತ ಪರಾಕ್ರಮಿಯಾದ ಪರಮಾತ್ಮನ ಭಕ್ತರಾದ ನಂತರ, ಸಾಧುನಡತೆಯ ಶಿಕ್ಷಣವನ್ನು ಹೊಂದಿದನಂತರ ದೇವಮಾಯೆಯನ್ನು ತಿಳಿಯಬಲ್ಲರು. ಆದರಿಂದ ಮುಕ್ತಿಯನ್ನು—ಬಿಡುಗಡೆಯನ್ನು ಹೊಂದಬಲ್ಲರು. ಆದುದರಿಂದ ಯಾರು ಅನನ್ಯ ಮನಸ್ಕರಾಗಿ ಪರಮಾತ್ಮನಲ್ಲಿ ಭಕ್ತಿಯನ್ನು ಮಾಡುತ್ತಾರೆಯೋ ಅಂತಹವರು ನೀಚಾತಿನೀಚ ಜನ್ಮದವರಾದರೂ ಮಾಯೆಯನ್ನು ದಾಟುವಾಗ, ಮಹಾತ್ಮರಿಗೆ ಕಷ್ಟವೇ ? ಮುನಿಗಳು ಯಾರನ್ನು ನಿತ್ಯಶಾಂತ, ನಿತ್ಯಸುಖಮಯ, ಶೋಕಶೂನ್ಯ, ಭಯರಹಿತ, ಜ್ಞಾನಸ್ವರೂಪ, ನಿರ್ಮಲ, ವಿಷಯೇಂದ್ರಿಯಸಂಗಹೀನ ಮತ್ತು ಪರಮಾರ್ಥತತ್ವ ಎಂದು ಹೇಳುತ್ತಾರೆಯೋ, ಯಾರಿಗೆ ಉತ್ಪತ್ತಿ, ಆದಿ ನಾಲ್ಕುಪ್ರಕಾರದ ಕ್ರಿಯೆಗಳಿಲ್ಲವೋ, ಯಾರ ಜ್ಞಾನವು ಶಬ್ದದಿಂದ ಆಗಲಾರದೋ ಮತ್ತು ಯಾರ ಎದುರಿಗೆ ಮಾಯೆಯು ನಿಲ್ಲಲು ನಾಚಿಕೊಳ್ಳುವಳೋ ಅದೇ

ಮುಂತಾದ ಅಮಾನುಷ ಕೃತ್ಯಗಳಿಂದ ಭೂಭಾರಹರಣಮಾಡಿ ವೈಕುಂಠ ಲೋಕಕ್ಕೆ ಪ್ರಯಾಣಮಾಡುವನು. ತನ್ನಿಂದಲೇ ರಚಿತವಾದ ವೇದಗಳ ಅರ್ಥವನ್ನು ಕಲಿಯುಗದ ಅಲ್ಪಾಯುಗಳಾದ ಜನಗಳು ತಿಳಿಯಲು ಅಶಕ್ತ ರಾದುದರಿಂದ ಸತ್ಯವತೀಸುತನಾಗಿ ಅವತರಿಸಿ ವೇದಗಳನ್ನು ವಿಭಾಗಮಾಡಿ ವೇದವ್ಯಾಸನೆಂಬ ಹೆಸರನ್ನು ಪಡೆಯುವನು. ದೇವಶತ್ರುಗಳಾದ ಅಸುರರೂ ಮಯದಾನವ ರಚಿತ ಕಣ್ಣಿಗೆ ಕಾಣಿಸದಷ್ಟು ವೇಗವುಳ್ಳ ಪಟ್ಟಣಗಳಲ್ಲಿ ತಿರು ಗುತ್ತಾ ಲೋಕಕಂಟಕರಾಗಿರಲು ಆ ಅಸುರರ ಬುದ್ಧಿಯು ಭ್ರಾಂತವಾಗುವಂತೆ ಉಪದೇಶಮಾಡುವ ಬುದ್ಧರೂಪವನ್ನು ಧಾರಣೆಮಾಡುವನು. ಕಲಿಯುಗದ ಕೊನೆಯಲ್ಲಿ ಸಾಧುಗಳ ಮನೆಯಲ್ಲಿಯೂ ಹರಿನಾಮ ಸಂಕೀರ್ತನೆಯು ಇಲ್ಲದಂತಾಗಿ, ಬ್ರಹ್ಮ, ಕ್ಷತ್ರಿಯ, ವೈಶ್ಯರು ನಾಸ್ತಿಕರಾಗಿ ಶೂದ್ರರು ರಾಜ್ಯ ಶಾಸನಮಾಡುತ್ತಿರಲು ಸ್ವಾಹಾಸ್ವಧಾವಷಟ್ಕಾರಗಳ ಶಬ್ದಗಳು ಕಿವಿಗೆ ಕೇಳಿಸದಂತಾಗಲು ಕಲ್ಕಿರೂಪದಿಂದವತರಿಸಿ ಕಲಿಯನ್ನು ಶಾಸನಮಾಡು ವನು.

ವತ್ಸ ! ಸೃಷ್ಟಿಯಕಾಲದಲ್ಲಿ ನಾನು ಮಾಡಿದ ತಪಸ್ಸು ಸ್ವಯಂಬ್ರಹ್ಮ ನಾದ ನಾನು, ನವಪ್ರಜಾಪತಿಗಳೂ, ಪಾಲನೆಯ ಸಮಯದಲ್ಲಿ ಧರ್ಮ, ವಿಷ್ಣು, ಮನು, ದೇವೇಶ, ರಾಜರುಗಳು, ಪ್ರಳಯಕಾಲದಲ್ಲಿ ಅಧರ್ಮ, ಶಿವ, ಮತ್ತು ಕ್ರೋಧವಶರಾದ ಸರ್ಪ ಮುಂತಾದ ದೈವೀಶಕ್ತಿಗಳು ಇವೆಲ್ಲವೂ ಮಾಯಾಮಯನಾದ ಭಗವಂತನ ವಿಭೂತಿಗಳೇ. ಪೃಥ್ವಿಯ ಪರಮಾಣುವನ್ನಾದರೂ ಎಣಿಸಬಲ್ಲ ಚತುರನೂ ಸಹಾ ವಿಷ್ಣುವಿನ ಅನಂತ ವಿಭೂತಿಗಳನ್ನೆಣಿಸಲಾಗುವುದಿಲ್ಲ.

ವಿಷ್ಣುವು ಒಂದಾವೃತ್ತಿ ತನ್ನ ಚರಣಗಳ ವೇಗದಿಂದ ಗುಣತ್ರಯಗಳ ಅಧಿಷ್ಠಾರೂಪವಾದ ಮಾಯೆ ಅಥವಾ ಪ್ರಕೃತಿಯನ್ನು ನಡುಗಿಸುವಂತೆ ನಡೆದನು. ಆ ಚರಣಘಾತದಿಂದ ಸತ್ಯಲೋಕವೂ ನಡುಗಿಬಿಟ್ಟಿತು ಆಗ ಆತನು ಆ ಸತ್ಯಲೋಕವನ್ನು ಧಾರಣೆಮಾಡಿದನು. ನನ್ನ ಹಿರಿಯರಾದ ಮುನಿಗಳೂ ಸಹಾ ಮಾಯಾಬಲಸಂಪನ್ನನಾದ ಪುರುಷನ ಅಂತವನ್ನು ತಿಳಿಯಲಾರದೆಹೋದರು. ಈಚೆಗೆ ಹುಟ್ಟಿದವನು ಹೇಗೆ ಆತನನ್ನು ತಿಳಿಯು